ತರುಣ ಭಾರತೀ

# ಮಾನವ ಹಕ್ಕುಗಳು

## ಪ್ರಶ್ನೆ - ಉತ್ತರ

ಲಿಯಾ ಲೆವಿನ್

ಚಿತ್ರ
ಪ್ಲಾಂಟು

ಅನುವಾದ
ಕೆ. ಎಚ್. ಶ್ರೀನಿವಾಸ



ಯುನೆಸ್ಕೊ ಪ್ರಕಟಣಾ ಸಹಯೋಗದೊಡನೆ
ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಈ ಪುಸ್ತಕದಲ್ಲಿ ಬಳಕೆಯಾಗಿರುವ ಹುದ್ದೆಗಳ ಹೆಸರುಗಳು ಹಾಗೂ ಇದರಲ್ಲಿನ ವಸ್ತು ನಿರೂಪಣೆಯು, ಯಾವುದೇ ದೇಶದ ಶಾಸನಬದ್ಧ ಸ್ಥಾನಮಾನ, ಭೂಪ್ರದೇಶ, ನಗರ ಅಥವಾ ಪ್ರದೇಶ, ಅದರ ಅಧಿಕಾರ ಅಥವಾ ಸೀಮಾರೇಖೆ ಇಲ್ಲವೆ ಗಡಿನಿರ್ಣಯ - ಇವುಗಳಿಗೆ ಸಂಬಂಧಿಸಿದಂತೆ ಯುನೆಸ್ಕೋದ ಯಾವುದೇ ಅಭಿಪ್ರಾಯವನ್ನು ವ್ಯಕ್ತಪಡಿಸುವುದಿಲ್ಲ.

ಈ ಪುಸ್ತಕದಲ್ಲಿನ ವಿಷಯದ ಆಯ್ಕೆ ಹಾಗೂ ನಿರೂಪಣೆಯ ಜವಾಬ್ದಾರಿಯು ಲೇಖಕರದಾಗಿದ್ದು ಅವರ ಅಭಿಪ್ರಾಯಗಳು ಯುನೆಸ್ಕೋದ ಅಭಿಪ್ರಾಯವನ್ನು ಪ್ರಕಟಪಡಿಸುವುದಿಲ್ಲ ಹಾಗೂ ಸಂಸ್ಥೆಯು ಅದಕ್ಕೆ ಬದ್ಧವಾಗಿರುವುದಿಲ್ಲ.

ವಿಶ್ವಸಂಸ್ಥೆಯ ಶೈಕ್ಷಣಿಕ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಸಂಸ್ಥೆಯ ಅನುಜ್ಞೆಯನುಸಾರ ಭಾರತದಲ್ಲಿ ಮಾರಾಟಕ್ಕಾಗಿ ಇದನ್ನು ಪುನರ್ಮುದ್ರಿಸಲಾಗಿದೆ.

1998ರ ವಿಶ್ವ ಮಾನವ ಹಕ್ಕುಗಳ ಘೋಷಣೆಯ ಐವತ್ತನೇ ವಾರ್ಷಿಕೋತ್ಸವಕ್ಕೆ ಈ ಆವೃತ್ತಿ ಸಮರ್ಪಿತವಾಗಿದೆ.

ISBN 81-237-3141-8

---

ಮೊದಲ ಮುದ್ರಣ: 2000 (ಶಕ 1922)

Human Rights: Questions and Answers (*Kannada*)
**ರೂ. 40.00**
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ - 110 016 ಇವರಿಂದ ಪ್ರಕಟಿತ.

---

# ಪರಿವಿಡಿ

# ಪ್ರಸ್ತಾವನೆ

ಮಾನವಜೀವಿಗಳ ಘನತೆಗೆ ಗೌರವ ತರುವ ಪ್ರಯತ್ನಗಳನ್ನು ಮನುಕುಲದ ಇತಿಹಾಸದುದ್ದಕ್ಕೂ ಕಾಣಬಹುದು. ಮಾನವಹಕ್ಕುಗಳ ಕಲ್ಪನೆ ವಿಭಿನ್ನ ಸಾಂಸ್ಕೃತಿಕ ಹಾಗೂ ಧಾರ್ಮಿಕ ಸಂಪ್ರದಾಯಗಳಿಗೆ ಸೇರಿದ ಚಿಂತಕರಿಂದ ಆರಂಭಿಸಲ್ಪಟ್ಟು ವಿಸ್ತಾರಗೊಂಡಿತು. ಮುತ್ಸದ್ದಿಗಳು, ನ್ಯಾಯವಾದಿಗಳು ಈ ವಿಚಾರದ ಉತ್ತೇಜನಕ್ಕೆ ಮುಖ್ಯವಾದ ಕೊಡುಗೆಯನ್ನು ನೀಡಿದರು. ಮತ್ತು ವ್ಯಕ್ತಿಗಳ ಹಕ್ಕುಗಳ ಸಂರಕ್ಷಣೆಯನ್ನು ಸ್ಥಿರಗೊಳಿಸುವುದಕ್ಕಾಗಿ ಬರೆದಿಟ್ಟ ಮಾದರಿಗಳು ನಿಧಾನವಾಗಿ ದೇಶೀಯ ಶಾಸನಗಳಲ್ಲಿ ಸೇರ್ಪಡೆಗೊಂಡವು.

ನಿರ್ದಿಷ್ಟವಾಗಿ ಹತ್ತೊಂಬತ್ತನೇ ಶತಮಾನದಲ್ಲಿ ಮತ್ತು ಮೊದಲನೇ ಮಹಾಯುದ್ಧದ ನಂತರ, ಮಾನವಹಕ್ಕುಗಳ ಅಂತರರಾಷ್ಟ್ರೀಯ ಮಾನದಂಡಗಳನ್ನು ಸ್ಥಿರಗೊಳಿಸುವ ಕ್ರಮಗಳನ್ನು ಕೂಡ ಕೈಗೊಳ್ಳಲಾಯಿತು. ಆದಾಗ್ಯೂ ಮಾನವಹಕ್ಕುಗಳ ಸಂವರ್ಧನೆ ಹಾಗೂ ಸಂರಕ್ಷಣೆಗೆ ಸಮಗ್ರವಾದ ಅಂತರರಾಷ್ಟ್ರೀಯ ವ್ಯವಸ್ಥೆಯ ಸ್ಥಾಪನೆಯಾದದ್ದು ಮಾತ್ರ ಇಪ್ಪತ್ತನೇ ಶತಮಾನದ ಉತ್ತರಾರ್ಧ ಭಾಗದಲ್ಲಿ. ಇದಕ್ಕೆ ಮುಖ್ಯವಾಗಿ ವಿಶ್ವಸಂಸ್ಥೆ, ಅದರ ವಿಶೇಷ ಸೇವಾಸಂಸ್ಥೆಗಳ ಮತ್ತು ಪ್ರಾದೇಶಿಕ ಅಂತರ-ಸರ್ಕಾರೀಯ ಸಂಸ್ಥೆಗಳ ಪ್ರಯತ್ನಗಳೇ ಕಾರಣ.

"ಮೂಲಭೂತ ಮಾನವ ಹಕ್ಕುಗಳ ಬಗ್ಗೆ, ಮಾನವ ವ್ಯಕ್ತಿತ್ವದ ಯೋಗ್ಯತೆ ಮತ್ತು ಘನತೆಯ ಬಗ್ಗೆ, ಹೆಣ್ಣು-ಗಂಡುಗಳ ಸಮಾನಹಕ್ಕುಗಳ ಬಗ್ಗೆ ತಮ್ಮ ನಿಷ್ಠೆಯನ್ನು ಪುನರ್‌ದೃಢೀಕರಿಸುವ, ಸದಸ್ಯ ರಾಷ್ಟ್ರಗಳ ನಿರ್ಧಾರವನ್ನು ವಿಶ್ವಸಂಸ್ಥೆಯ ಲಿಖಿತ ಸಂವಿಧಾನ ಪ್ರಕಟಪಡಿಸಿತು."[1]

ಮಾನವ ಹಕ್ಕುಗಳ ಭಾರಿ ಪ್ರಮಾಣದ ಆಂತರಿಕ ಉಲ್ಲಂಘನೆಗಳು, ಅಂತರರಾಷ್ಟ್ರೀಯ ಶಾಂತಿಭಂಗಕ್ಕೆ ಎಡೆಗೊಡುತ್ತವೆಂಬುದನ್ನು ಎರಡನೇ ಮಹಾಯುದ್ಧ ಸಾಬೀತುಮಾಡಿತು. "ಮನುಕುಲದ ಎಲ್ಲ ಸದಸ್ಯರ ಅಂತರ್ಗತ ಘನತೆ ಸಮಾನ ಮತ್ತು ಪರಭಾರೆಗೊಳಿಸಲಾಗದ ಹಕ್ಕುಗಳನ್ನು ಮಾನ್ಯ ಮಾಡುವುದೇ ವಿಶ್ವದಲ್ಲಿನ ಸ್ವಾತಂತ್ರ್ಯ, ನ್ಯಾಯ ಮತ್ತು ಶಾಂತಿಯ ಬುನಾದಿ" ಎಂಬ

[1] ವಿಶ್ವಸಂಸ್ಥೆಯ ಸಂವಿಧಾನದ ಪ್ರಸ್ತಾವನೆ.

ನಂಬಿಕೆಯನ್ನು ಈ ಯುದ್ಧದ ಭೀಕರತೆಗಳು ದೃಢಗೊಳಿಸಿ ಬಲಪಡಿಸಿದವು[2] ತದನಂತರದ ವರ್ಷಗಳಲ್ಲಿ ಅಸ್ತಿತ್ವಕ್ಕೆ ಬಂದ ಅಂತರರಾಷ್ಟ್ರೀಯ ಮಾನವಹಕ್ಕುಗಳ ಶಾಸನಕ್ಕೆ ಮೂಲಾಧಾರವಾದ ಸಾರ್ವತ್ರಿಕ ಮಾನವಹಕ್ಕುಗಳ ಘೋಷಣೆಯಲ್ಲಿ ಈ ವಿಷಯವನ್ನು ನಮೂದಿಸಲಾಗಿದೆ. ನಾಗರಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಹಕ್ಕುಗಳನ್ನು ವ್ಯಾಖ್ಯಾನಿಸುವ ಎರಡು ಮಾನವಹಕ್ಕುಗಳ ಅಂತರರಾಷ್ಟ್ರೀಯ ಒಡಂಬಡಿಕೆಗಳು (1996) ಈ ಪ್ರಕ್ರಿಯೆಯ ಪ್ರಮುಖ ಮಜಲುಗಳು.

ಮಾನವಹಕ್ಕುಗಳ ಅಂತರರಾಷ್ಟ್ರೀಯ ಶಾಸನ ಈಗ ಭಾಗಸ್ಥರಾದ ರಾಷ್ಟ್ರಗಳನ್ನು ಅದಕ್ಕೆ ಬದ್ಧಪಡಿಸಲು ಶಕ್ತವಾದ ಮತ್ತು ಅದರಿಂದಾಗಿ 'ವಿಶ್ವಸನೀಯ ಶಾಸನ'ವೆಂದು ಕರೆಯಲ್ಪಡುವ ಎಂಬತ್ತಕ್ಕೂ ಹೆಚ್ಚು ಸಾರ್ವತ್ರಿಕ ಮತ್ತು ಪ್ರಾದೇಶಿಕ ಒಡಂಬಡಿಕೆಗಳಿಂದ ಕೂಡಿದೆ.[3] ಅಂತರರಾಷ್ಟ್ರೀಯ ಸಂಸ್ಥೆಗಳು ಮಾಡಿರುವ ಮಾನವ ಹಕ್ಕುಗಳಿಗೆ ಸಂಬಂಧಿಸಿದ ಇನ್ನೂ ಬಹಳ ಹೆಚ್ಚಿನ ಸಂಖ್ಯೆಯ ಘೋಷಣೆಗಳು ಮತ್ತು ಶಿಫಾರಸುಗಳು ಇವೆಯಾದರೂ ಅವು ರಾಷ್ಟ್ರಗಳನ್ನು ಅಧಿಕೃತವಾಗಿ ಬದ್ಧಪಡಿಸಲಾರದವು. ಹಾಗಿದ್ದಾಗ್ಯೂ ಮಾನವಹಕ್ಕುಗಳ ಕ್ಷೇತ್ರದಲ್ಲಿ ರಾಷ್ಟ್ರೀಯ/ಅಂತರರಾಷ್ಟ್ರೀಯ ನಡವಳಿಕೆಗಳ ಮೇಲೆ ಪ್ರಭಾವ ಬೀರುವುದರ ಮೂಲಕ ವಾಡಿಕೆಯ ಮಾನದಂಡವನ್ನು ರಚಿಸಲು ಅವು ನೆರವಾಗುತ್ತವೆ ಮತ್ತು ಅದರಿಂದಾಗಿ 'ಮೃದು ಶಾಸನ'ವೆಂದು ಕರೆಯಲ್ಪಡುವುದನ್ನು ರೂಪಿಸುತ್ತವೆ. ಅನೇಕ ಸಂದರ್ಭಗಳಲ್ಲಿ ಬದ್ಧಗೊಳಿಸುವ ಸಾಧನಗಳ ವಿಸ್ತರಣೆಯ ದಿಸೆಯಲ್ಲಿ, ಘೋಷಣೆಗಳೂ, ಶಿಫಾರಸುಗಳೂ ಒಂದು ಪ್ರಮುಖ ಹೆಜ್ಜೆಯಾಗಿ ಕೆಲಸ ಮಾಡುತ್ತವೆ.

ಅಂತರರಾಷ್ಟ್ರೀಯ ಮಾನವಹಕ್ಕುಗಳ ಶಾಸನದ ಪ್ರಗತಿಪರ ಬೆಳವಣಿಗೆ ಮತ್ತು ಕ್ರೋಢೀಕರಣದಲ್ಲಿನ ವಿವಾದಾತೀತ ಸಾಧನೆಗಳು ಅದರ ಅನುಷ್ಠಾನದ ವಿಚಾರದಲ್ಲಿ ತತ್ಸಮಾನವಾದ ಯಶಸ್ಸನ್ನು ಪಡೆಯಲಿಲ್ಲ. ವಿಶ್ವದ ಅನೇಕ ಭಾಗಗಳಲ್ಲಿ ಪ್ರತಿದಿನವೂ ಮಾನವಹಕ್ಕುಗಳ ಉಲ್ಲಂಘನೆಗಳಾಗುತ್ತಿರುವುದು ವಿಷಾದನೀಯ. ಅವುಗಳನ್ನು ಅನುಷ್ಠಾನಗೊಳಿಸುವಲ್ಲಿನ ಪ್ರಗತಿ ಅನೇಕ ವಾಸ್ತವಿಕ ವ್ಯಾವಹಾರಿಕ ಅಂಶಗಳನ್ನು ಅವಲಂಬಿಸಿದೆ. ಮಾನವಹಕ್ಕುಗಳು ಹಾಗೂ ಮೂಲಭೂತ ಸ್ವಾತಂತ್ರ್ಯಗಳನ್ನು ಅವುಗಳ ಬಗ್ಗೆ ತಿಳಿವಳಿಕೆ ಇದ್ದಾಗ ಮಾತ್ರ ಅನುಷ್ಠಾನಕ್ಕೆ ತರುವುದು ಸಾಧ್ಯವೆಂಬುದು ಸ್ವಯಂವೇದ್ಯವಾದ್ದರಿಂದ, ಸಂಬಂಧಿಸಿದ ಮಾನದಂಡಗಳ ಮತ್ತು ವಿಧಿವಿಧಾನಗಳ ಪರಿಜ್ಞಾನ ಕೂಡ ಈ ದಿಸೆಯಲ್ಲಿ ಬಹಳ ಪ್ರಮುಖವಾಗಿದೆ.

---

[2] ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆ: ಪ್ರಸ್ತಾವನೆ, 6ನೇ ಪರಿಚ್ಛೇದ.

[3] 'ಮಾನವಹಕ್ಕುಗಳು: ಪ್ರಮುಖ ಅಂತರರಾಷ್ಟ್ರೀಯ ದಸ್ತಾವೇಜುಗಳು' - ಎಂಬ ಯುನೆಸ್ಕೋದ ವಾರ್ಷಿಕ ಪ್ರಕಟಣೆಯಲ್ಲಿ ಈ ದಸ್ತಾವೇಜುಗಳು ಹಾಗೂ ಭಾಗಸ್ಥ ರಾಷ್ಟ್ರಗಳನ್ನು ಪರಿಚಯಿಸಲಾಗಿದೆ.

ಆದ್ದರಿಂದ 'ಮಾನವಹಕ್ಕುಗಳಿಗಾಗಿ ಶಿಕ್ಷಣ' ಬಹಳ ಮುಖ್ಯ. ಇದು ಅನೇಕ ಅಂತರರಾಷ್ಟ್ರೀಯ ದಸ್ತಾವೇಜುಗಳಲ್ಲಿ ಮಾನ್ಯ ಮಾಡಲ್ಪಟ್ಟಿದೆ. ಮಾನವಹಕ್ಕುಗಳ ಸಾರ್ವತ್ರಿಕ ಘೋಷಣೆ "ಮನುಷ್ಯನ ವ್ಯಕ್ತಿತ್ವದ ಪೂರ್ಣ ವಿಕಸನಕ್ಕೆ ಮತ್ತು ಮಾನವಹಕ್ಕುಗಳ ಮತ್ತು ಮೂಲಭೂತ ಸ್ವಾತಂತ್ರ್ಯಗಳಿಗೆ ಗೌರವವನ್ನು ಹೆಚ್ಚಿಸುವತ್ತ ಶಿಕ್ಷಣವನ್ನು ನಿರ್ದೇಶಿಸಬೇಕು" ಎಂದು ಹೇಳುತ್ತದೆ.[4] ಅನೇಕ ಒಡಂಬಡಿಕೆಗಳಲ್ಲಿ ಇದೇ ವಿಷಯವನ್ನು ಕಾಣಬಹುದು.[5] ರಾಷ್ಟ್ರಗಳು ಮಾನವಹಕ್ಕುಗಳ ಶಿಕ್ಷಣಕ್ಕೆ ಈಗ ಕರ್ತವ್ಯಬದ್ಧವಾಗಿವೆಯೆಂದು ಇದರ ಅರ್ಥ.

ನ್ಯಾಯ, ಶಾಸನಾತ್ಮಕ ಆಡಳಿತ, ಮಾನವಹಕ್ಕುಗಳು ಮತ್ತು ಮೂಲಭೂತ ಸ್ವಾತಂತ್ರ್ಯಗಳಿಗೆ ವಿಶ್ವವ್ಯಾಪಿಯಾಗಿ ಗೌರವವನ್ನು ಹೆಚ್ಚುಸುವುದು ಅದರ ಸಂವಿಧಾನ ವಿಧಿಸಿರುವ ಅವಶ್ಯ ಕರ್ತವ್ಯವಾಗಿದ್ದು ಮಾನವಹಕ್ಕುಗಳಿಗಾಗಿ ಶಿಕ್ಷಣ ಯುನೆಸ್ಕೋದ ಒಂದು ಮಹತ್ವದ ಮುಖವಾಗಿದೆ. ಮಾನವಹಕ್ಕುಗಳ ಶಿಕ್ಷಣವನ್ನು ಪ್ರೋತ್ಸಾಹಿಸುವ ಸಲುವಾಗಿ ಯುನೆಸ್ಕೋ 1974ರಲ್ಲಿ ಒಂದು ನಿರ್ದಿಷ್ಟ ಮಾದರಿಯ ದಸ್ತಾವೇಜನ್ನು ಸ್ವೀಕರಿಸಿತು.[6] ಮತ್ತು ತದನಂತರದ ವರ್ಷಗಳಲ್ಲಿ ಬೇರೆ ಅನೇಕ ಚಟುವಟಿಕೆಗಳ ಜತೆಗೆ ಈ ವಿಷಯದ ಮೇಲೆ ಮೂರು ಮಹತ್ವದ ಅಂತರರಾಷ್ಟ್ರೀಯ ಸಭೆಗಳನ್ನು ಸಂಘಟಿಸಿತು.

ಇವುಗಳಲ್ಲಿ ಮೊದಲನೆಯದಾದ ಮಾನವಹಕ್ಕುಗಳ ಘೋಷಣೆಯ ಮೇಲಿನ ಅಂತರರಾಷ್ಟ್ರೀಯ ಸಮಾವೇಶವು (ವಿಯನ್ನಾ, ಆಸ್ಟ್ರಿಯಾ, 1979) ಸಹಿಷ್ಣುತೆ, ಗೌರವ ಮತ್ತು ಐಕ್ಯತೆಯ ಮನೋಭಾವವನ್ನು ಘೋಷಿಸುವ; ಮಾನವಹಕ್ಕುಗಳ ಬಗ್ಗೆ ಜ್ಞಾನವನ್ನು ಒದಗಿಸುವ; ಮತ್ತು ಮಾನವಹಕ್ಕುಗಳನ್ನು ಸಾಮಾಜಿಕ ಹಾಗೂ ರಾಜಕೀಯ ವಾಸ್ತವಿಕತೆಗೆ ಪರಿವರ್ತಿಸುವ ದಾರಿಗಳು ಮತ್ತು ದಸ್ತಾವೇಜುಗಳ ಬಗ್ಗೆ ಅರಿವು-ಇವುಗಳ ಮಾನವಹಕ್ಕುಗಳ ಶಿಕ್ಷಣ ಹಾಗೂ ಬೋಧನೆಯ ಗುರಿಯಾಗಿರ ಬೇಕೆಂಬುದಕ್ಕೆ ಒತ್ತು ನೀಡಿತು.

1987ರಲ್ಲಿ ಮಾಲ್ಟಾದಲ್ಲಿ ನಡೆದ ಎರಡನೇ ಸಮಾವೇಶ ಪ್ರಾದೇಶಿಕ, ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಸ್ತರಗಳಲ್ಲಿ ಮಾನವಹಕ್ಕುಗಳ ಶಿಕ್ಷಣದ ಮಾರ್ಗಸೂಚಿಗಳನ್ನು ಸ್ಫುಟಗೊಳಿಸಿತು ಮತ್ತು ಸಾರ್ವಜನಿಕ ಸಂಸ್ಥೆಗಳು ಹಾಗೂ ಸಮೂಹ ಮಾಧ್ಯಮಗಳ ವಿಶಾಲ ರೂಪದ ಭಾಗವಹಿಸುವಿಕೆಯೊಂದಿಗೆ,

---

[4] ಕಲಮು 26, ಪರಿಚ್ಛೇದ 2

[5] ಶಿಕ್ಷಣದಲ್ಲಿ ತಾರತಮ್ಯದ ವಿರುದ್ಧದ ಯುನೆಸ್ಕೋ ಒಡಂಬಡಿಕೆ (ಕಲಮು 4); ಆರ್ಥಿಕ, ಸಾಮಾಜಿಕ, ಮತ್ತು ಸಾಂಸ್ಕೃತಿಕ ಹಕ್ಕುಗಳ ಮೇಲಿನ ಅಂತರರಾಷ್ಟ್ರೀಯ ಒಡಂಬಡಿಕೆ (ಕಲಮು 13); ಎಲ್ಲ ಬಗೆಯ ವರ್ಣಭೇದ ನಿರ್ಮೂಲನದ ಮೇಲಿನ ಒಡಂಬಡಿಕೆ (ಕಲಮು 7); ಸ್ತ್ರೀಯರ ವಿರುದ್ಧದ ಎಲ್ಲ ಬಗೆಯ ತಾರತಮ್ಯದ ನಿರ್ಮೂಲನದ ಮೇಲಿನ ಒಡಂಬಡಿಕೆ (ಕಲಮು 10); ಮಗುವಿನ ಹಕ್ಕುಗಳ ಮೇಲಿನ ಒಡಂಬಡಿಕೆ (ಕಲಮು 20).

[6] ಮಾನವಹಕ್ಕುಗಳು ಮತ್ತು ಮೂಲಭೂತ ಸ್ವಾತಂತ್ರ್ಯಗಳಿಗೆ ಸಂಬಂಧಿಸಿದ ಅಂತರರಾಷ್ಟ್ರೀಯ ಪ್ರಶ್ನೆ, ಸಹಕಾರ, ಶಾಂತಿ, ಶಿಕ್ಷಣದ ಬಗ್ಗೆ ಇರುವ ಶಿಫಾರಸುಗಳು.

ಮಾನವಹಕ್ಕುಗಳ ಬೋಧನೆ ಮತ್ತು ಶಿಕ್ಷಣದ ಒಂದು ಸಮಗ್ರ ವ್ಯವಸ್ಥೆಯನ್ನು ರೂಪಿಸುವ ಅಗತ್ಯತೆಗೆ ಒತ್ತು ನೀಡಿತು.

ಮೂರನೇ ಸಮಾವೇಶವು ಕೆನಡಾದ ಮಾಂಟ್ರಿಯಲ್‌ನಲ್ಲಿ 1993ರ ಮಾರ್ಚ್‌ನಲ್ಲಿ ನಡೆಯಿತು.[7] ಶೀತಲ ಸಮರ ಅಂತ್ಯಗೊಂಡ ನಂತರ ನಡೆದ ಮೊದಲ ಅಂತರರಾಷ್ಟ್ರೀಯ ಕೂಟದ ಈ ಸಮಾವೇಶವು ಮಾನವಹಕ್ಕುಗಳ ಹಾಗೂ ಪ್ರಜಾಪ್ರಭುತ್ವದ ಮಧ್ಯದ ಸ್ವಭಾವಜನ್ಯ ಸಂಬಂಧಕ್ಕೆ ಒತ್ತು ನೀಡಿತು. ಸಮಾವೇಶವು ಅಂಗೀಕರಿಸಿದ ಮಾನವಹಕ್ಕುಗಳು ಮತ್ತು ಪ್ರಜಾಪ್ರಭುತ್ವದ ಮೇಲಿನ ಕ್ರಿಯಾಯೋಜನೆಯು, ಪ್ರಜಾಪ್ರಭುತ್ವದ ಶಿಕ್ಷಣವು ಮಾನವಹಕ್ಕುಗಳ ಶಿಕ್ಷಣದ ಅವಿಭಾಜ್ಯ ಅಂಗವಾಗಿದ್ದು, ಅದು ಮಾನವಹಕ್ಕುಗಳ ಪ್ರಜಾಪ್ರಭುತ್ವ ಮತ್ತು ಸಾಮಾಜಿಕ ನ್ಯಾಯದ ಸಿದ್ಧಿಗೆ ಪೂರ್ವಾಪೇಕ್ಷಿತವಾಗಿರುವುದಷ್ಟೇ ಅಲ್ಲದೆ ಅದೇ ಸ್ವಯಂ ಒಂದು ಮಾನವಹಕ್ಕಾಗಿದೆಯೆಂದು ಘೋಷಿಸಿದೆ.

ಮಾನವಹಕ್ಕುಗಳ ಶಿಕ್ಷಣದ ಪ್ರಾಮುಖ್ಯತೆಯನ್ನು 'ವಿಶ್ವ ಮಾನವಹಕ್ಕುಗಳ ಸಮ್ಮೇಳನ'ದಲ್ಲಿ (ಜೂನ್ 1993) 171 ರಾಷ್ಟ್ರಗಳ ಪ್ರತಿನಿಧಿಗಳು ಸಹಮತದಿಂದ ಸ್ವೀಕರಿಸಿದ ವಿಯೆನ್ನಾ ಘೋಷಣೆ ಹಾಗೂ ಕ್ರಿಯಾ ಕಾರ್ಯಕ್ರಮದಲ್ಲಿ ಒತ್ತಿ ಹೇಳಲಾಯಿತು. ಈ ಸಮ್ಮೇಳನ ಮಾನವಹಕ್ಕುಗಳ ಬಗೆಗಿನ ಗೌರವ ಒಂದು ನಿಜವಾದ ಪ್ರಜಾಪ್ರಭುತ್ವದ ಅತ್ಯಗತ್ಯ ಭಾಗವೆಂಬುದನ್ನು ದೃಢೀಕರಿಸಿತು ಮತ್ತು ಮಾನವಹಕ್ಕುಗಳ ಸಾರ್ವತ್ರಿಕತೆ ಹಾಗೂ ಐಕ್ಯತೆಯ ಕಲ್ಪನೆಯನ್ನು ಪ್ರಬಲವಾಗಿ ಬೆಂಬಲಿಸಿತು. ಅದು ಎಲ್ಲ ಮಾನವಹಕ್ಕುಗಳು ಸಾರ್ವತ್ರಿಕ, ಅಖಂಡ, ಪರಸ್ಪರಾವಲಂಬಿ, ಅಂತರಸಂಬಂಧಿ ಎಂದು ಘೋಷಿಸಿತು ಮತ್ತು ಅಂತರರಾಷ್ಟ್ರೀಯ ಸಮುದಾಯವು ಪ್ರಪಂಚಾದ್ಯಂತ, ಮಾನವಹಕ್ಕುಗಳನ್ನು, ನಿಷ್ಪಕ್ಷಪಾತವಾದ ಸಮಾನ ರೀತಿಯಲ್ಲಿ ಸಮಾನ ಸ್ಥಾನಮಾನ ಮತ್ತು ಸಮಾನ ಪ್ರಾಮುಖ್ಯತೆಯಿಂದ ಆದರಿಸಬೇಕೆಂಬುದನ್ನು ಒತ್ತಿ ಹೇಳಿತು.[8]

ವಿಯೆನ್ನಾ ಸಮ್ಮೇಳನದ ಶಿಫಾರಸುಗಳ ಅನ್ವಯ ವಿಶ್ವರಾಷ್ಟ್ರ ಸಂಸ್ಥೆಯು ಮಾನವಹಕ್ಕುಗಳ ಶೈಕ್ಷಣಿಕ ದಶಕ (1995–2004) ಘೋಷಿಸಲ್ಪಟ್ಟಿತು.[9] ಈ ದಶಕ ಕ್ರಿಯಾಯೋಜನೆಯ ಅನುಷ್ಠಾನದ ಸಹಯೋಜನೆಯನ್ನು ವಿಶ್ವಸಂಸ್ಥೆಯ ಮಾನವಹಕ್ಕುಗಳ ಉನ್ನತಾಯುಕ್ತರಿಗೆ ವಹಿಸಲಾಯಿತು. ಅದರಲ್ಲಿ ಒಳಗೊಂಡಿರುವ ಯೋಜನೆಗಳ ವಿನ್ಯಾಸ, ಅನುಷ್ಠಾನ ಮತ್ತು ಮೌಲ್ಯಮಾಪನದ ವಿಚಾರದಲ್ಲಿ ಯುನೆಸ್ಕೋ ಕೇಂದ್ರ ಪಾತ್ರವಹಿಸಬೇಕೆಂದು ಮತ್ತು ವಿಶ್ವಸಂಸ್ಥೆಯ ಮಾನವಹಕ್ಕುಗಳ

---

[7] ಕೆನಡಾದ ಯುನೆಸ್ಕೋ ಆಯೋಗದ ಸಹಯೋಗದೊಂದಿಗೆ ಅದು ಯುನೆಸ್ಕೋ ಮತ್ತು ವಿಶ್ವಸಂಸ್ಥೆಯ ಮಾನವಹಕ್ಕುಗಳ ಕೇಂದ್ರ ಇವರುಗಳಿಂದ ಸಂಘಟಿಸಲ್ಪಟ್ಟಿತು.

[8] ವಿಯೆನ್ನಾ ಘೋಷಣೆ ಮತ್ತು ಕ್ರಿಯಾ ಕಾರ್ಯಕ್ರಮ; ಪರಿಚ್ಛೇದ 5.

[9] 23 ಡಿಸೆಂಬರ್ 1994. ಮಹಾಧಿವೇಶನದ ನಿರ್ಣಯ, 49/184

ಕೇಂದ್ರ ಮತ್ತು ಉನ್ನತಾಯುಕ್ತರು ಜತೆಗೂಡಿ ಕೆಲಸ ಮಾಡಬೇಕೆಂದು ಆ ಯೋಜನೆಯಲ್ಲಿ ನಿರೀಕ್ಷಿಸಲಾಗಿದೆ.

ಅಕ್ಟೋಬರ್ 1995ರಲ್ಲಿ ಯುನೆಸ್ಕೋದ ಮಹಾನಿರ್ದೇಶಕ ಮತ್ತು ವಿಶ್ವಸಂಸ್ಥೆಯ ಮಾನವಹಕ್ಕುಗಳ ಉನ್ನತಾಯುಕ್ತರ ಮಧ್ಯೆ ರುಜುಮಾಡಿದ ಸಹಕಾರದ ಜ್ಞಾಪಕಪತ್ರದಲ್ಲಿ ಮಾನವಹಕ್ಕುಗಳ ಮತ್ತು ಪ್ರಜಾಪ್ರಭುತ್ವದ ಶಿಕ್ಷಣಕ್ಕೆ ಸಂಬಂಧಿಸಿದ ಚಟುವಟಿಕೆಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ನಿಕಟವಾದ ಸಹಯೋಗವನ್ನು ಕಲ್ಪಿಸಲಾಗಿದೆ. ಎಲ್ಲರಿಗೂ ಲಭ್ಯವಾಗಬಲ್ಲ, ಎಲ್ಲ ಸ್ತರಗಳನ್ನು ಒಳಗೊಂಡ ಮಾನವಹಕ್ಕುಗಳು, ಪ್ರಜಾಪ್ರಭುತ್ವ ಹಾಗೂ ಶಾಂತಿಗಾಗಿ ಒಂದು ವ್ಯಾಪಕವಾದ ಶಿಕ್ಷಣ ವ್ಯವಸ್ಥೆಯನ್ನು ರೂಪಿಸುವುದು ಯುನೆಸ್ಕೋದ ದೀರ್ಘಕಾಲಿಕ ಉದ್ದೇಶವಾಗಿದೆ. ಅಂದರೆ ಆ ವ್ಯವಸ್ಥೆ ಸಾಂಪ್ರದಾಯಿಕ ಶಿಕ್ಷಣವನ್ನಷ್ಟೇ ಅಲ್ಲದೆ ಶಾಲೆಯಿಂದ ಹೊರಗಿನ ಮತ್ತು ವಯಸ್ಕರ ಶಿಕ್ಷಣವನ್ನೂ ಒಳಗೊಂಡಿರಬೇಕೆಂಬುದು ಇದರ ಅರ್ಥ.

ಸದಸ್ಯ ರಾಷ್ಟ್ರಗಳಲ್ಲಿ ಮಾನವಹಕ್ಕುಗಳ ಶಿಕ್ಷಣದ ರಾಷ್ಟ್ರೀಯ ತಂತ್ರಗಳ ವಿಸ್ತರಣೆಗೆ ಮತ್ತು ಬೋಧನಸಾಮಗ್ರಿ, ಪಠ್ಯಕ್ರಮಗಳ ಪ್ರಸರಣಕ್ಕೆ ನೆರವು ನೀಡುವತ್ತ ಸಂಸ್ಥೆ ತನ್ನ ಪ್ರಯತ್ನಗಳನ್ನು ಕೇಂದ್ರೀಕರಿಸಿದೆ. ಸಂಯೋಜಿತ ಶಾಲಾ ಯೋಜನೆ,[10] ವಿಶ್ವದ ಎಲ್ಲಾ ಪ್ರದೇಶಗಳಲ್ಲಿನ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಸ್ಥಾಪಿಸಿರುವ ಯುನೆಸ್ಕೋ ಪೀಠಗಳು ಮುಂತಾದ ಮಾನವಹಕ್ಕುಗಳು ಮತ್ತು ಪ್ರಜಾಪ್ರಭುತ್ವದ ಶಿಕ್ಷಣದ ಬಗ್ಗೆ ಸಕ್ರಿಯವಾಗಿರುವ ಸಾಂಸ್ಥಿಕ ಜಾಲವನ್ನು ಬಲಪಡಿಸಲು ನಿರ್ದಿಷ್ಟ ಗಮನ ನೀಡಲಾಗಿದೆ.

ಮಾನವಹಕ್ಕುಗಳು ಮತ್ತು ಪ್ರಜಾಪ್ರಭುತ್ವದ ಮೂಲ ಮೌಲ್ಯಗಳಿಗೆ ನಿಷ್ಠೆ ಮತ್ತು ದೈನಂದಿನ ಜೀವನದಲ್ಲಿ ಅದನ್ನು ಸಮರ್ಥಿಸುವ ಸಿದ್ಧೋಪಜ್ಞತೆಗಳ ತಿರುಳಾಗಿರುವ ಒಂದು ಸಂಸ್ಕೃತಿಯ ನಿರ್ಮಾಣವೇ ಈ ಎಲ್ಲ ಕ್ರಮಗಳ ಅಂತಿಮ ಗುರಿಯಾಗಿದೆ. ವರ್ತನ ಸಾಮ್ಯತೆ ಇರುವ ಕೆಲವೊಂದು ಮಾದರಿಗಳ ರಚನೆಯನ್ನು ಅದು ಗೃಹೀತವೆಂದು ಭಾವಿಸಿದೆ.

ಶಿಕ್ಷಕರು, ಕುಟುಂಬಗಳು, ಸಮೂಹ ಮಾಧ್ಯಮ, ಅಂತರ-ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳು, ಬೇರೆ ಶಬ್ದಗಳಲ್ಲಿ ಹೇಳುವುದಾದರೆ ಎಲ್ಲ ಸಾಮಾಜಿಕ ಕ್ರಿಯಾಶೀಲರು ಮತ್ತು ಸಮಗ್ರ ನಾಗರಿಕ ಸಮಾಜ-ಇವುಗಳ ಸಂಯೋಜಿತ ಪ್ರಯತ್ನಗಳಿಂದ ಮಾತ್ರ ಅಂಥ ಒಂದು ಮಾನವಹಕ್ಕುಗಳ ಮತ್ತು ಪ್ರಜಾಪ್ರಭುತ್ವದ ಸಂಸ್ಕೃತಿಯನ್ನು ನಿರ್ಮಾಣ ಮಾಡುವುದು ಸಾಧ್ಯವಾಗುತ್ತದೆ.

ಮಾನವಹಕ್ಕುಗಳ ಶಿಕ್ಷಣದ ಎಲ್ಲ ಸ್ತರಗಳಿಗೆ ಮತ್ತು ಮಾನವಹಕ್ಕುಗಳ ಸಂವರ್ಧನೆಗೆ ಕೆಲಸ ಮಾಡುತ್ತಿರುವ ಸಾರ್ವಜನಿಕರು, ಕ್ರಿಯಾವಾದಿಗಳು,

---

[10] 1995ರ ಕೊನೆಯ ಹೊತ್ತಿಗೆ 125 ರಾಷ್ಟ್ರಗಳಲ್ಲಿ 3,300 ಶಾಲೆಗಳು ಈ ಯೋಜನೆಯಲ್ಲಿ ಪಾಲ್ಗೊಂಡಿದ್ದವು.

ಸರ್ಕಾರೇತರ ಸಂಸ್ಥೆಗಳಿಗೆ ಯುನೆಸ್ಕೋ ಪ್ರಾರಂಭದ ಕಾಲದಿಂದಲೂ ಬೋಧಕಸಾಮಗ್ರಿಗಳನ್ನು ಒದಗಿಸುತ್ತಿದೆ.[11] ಲಿಯಾ ಲೆವಿನ್ ಎಂಬ ಬ್ರಿಟನ್ನಿನ ಗಣ್ಯ ಮಾನವಹಕ್ಕುಗಳ ತಜ್ಞರಿಂದ ಬರೆಯಲ್ಪಟ್ಟ ಮತ್ತು ಫ್ರಾನ್ಸಿನ ಪ್ರಸಿದ್ಧ ರಾಜಕೀಯ ವ್ಯಂಗ್ಯಚಿತ್ರಕಾರ ಪ್ಲಾಂಟುರವರಿಂದ ವಿವರಣಾತ್ಮಕ ಚಿತ್ರಗಳುಳ್ಳ 'ಮಾನವಹಕ್ಕುಗಳು: ಪ್ರಶ್ನೆ-ಉತ್ತರ' - ಎಂಬ ಈ ಪುಸ್ತಕದ ಮೊದಲ ಆವೃತ್ತಿಯು 1981ರಲ್ಲಿ ಪ್ರಕಟಗೊಂಡಿತು. ಅದು ಮಾನವಹಕ್ಕುಗಳ ಒಂದು ಉತ್ತಮ ಕೈಪಿಡಿ ಎಂದು ಪರಿಗಣಿತವಾಗಿ ಹದಿನೈದು ಭಾಷೆಗಳಿಗೆ ತರ್ಜುಮೆಗೊಂಡಿತು.[12]

ಅದರ ಮೊದಲನೇ ಆಂಗ್ಲ ಆವೃತ್ತಿಯ ಪ್ರಕಟಣೆಯ ನಂತರ, ವಿಶ್ವದಲ್ಲಿ ಮಹತ್ವದ ಬೆಳವಣಿಗೆಗಳು ಸಂಭವಿಸಿವೆ.[13] ಪೂರ್ವ-ಪಶ್ಚಿಮಗಳ ಮುಖಾಮುಖಿಯ ಮುಕ್ತಾಯದೊಂದಿಗೆ. ಬೇರೆ ಬೇರೆ ವರ್ಗೀಕೃತ ಮಾನವಹಕ್ಕುಗಳ ಮೂಲ ಕಲ್ಪನೆ ಮತ್ತು ಆದ್ಯತೆಗಳ ಬಗ್ಗೆ ಇದ್ದ ಸೈದ್ಧಾಂತಿಕ ವಿವಾದಗಳು ಕೊನೆಗೊಂಡು, ಬದಲಿಗೆ ಅಂತರರಾಷ್ಟ್ರೀಯ ಶಾಂತಿ ಮತ್ತು ಭದ್ರತೆಯ ಸಂರಕ್ಷಣೆಗಾಗಿ ಅವೆಲ್ಲವುಗಳನ್ನು ಅನುಷ್ಠಾನಗೊಳಿಸುವುದರ ಮಹತ್ವ ಹಾಗೂ ಪ್ರಾಮುಖ್ಯತೆಯ ಬಗ್ಗೆ ಸಾರ್ವತ್ರಿಕ ಒಪ್ಪಂದಕ್ಕೆ ಅವಕಾಶವಾಗಿದೆ.

ಮಾನವಹಕ್ಕುಗಳ ಮತ್ತು ಮೂಲಭೂತ ಸ್ವಾತಂತ್ರ್ಯಗಳ ಉಲ್ಲಂಘನೆಗಳ ಜವಾಬ್ದಾರಿಯನ್ನು ತಪ್ಪಿಸಿಕೊಳ್ಳುವುದಕ್ಕೆ ರಾಷ್ಟ್ರೀಯ ಸಾರ್ವಭೌಮತ್ವವನ್ನು ನೆಪವಾಗಿ ಉಪಯೋಗಿಸಬಾರದೆಂಬ ಅಭಿಪ್ರಾಯಕ್ಕೆ ಈಗ ಅಧಿಕ ಸಂಖ್ಯೆಯ ರಾಷ್ಟ್ರಗಳು ಸಹಮತಿಸಿವೆ. ಆಂತರಿಕ ಪ್ರಭುತ್ವದ ವ್ಯಾಪ್ತಿ ಆ ರೀತಿಯಲ್ಲಿ ಸಂಕುಚಿತಗೊಳ್ಳುತ್ತಿದೆ ಮತ್ತು ಹಸ್ತಕ್ಷೇಪ ಮಾಡದಿರುವಿಕೆ ಮತ್ತು ಮಧ್ಯಪ್ರವೇಶ ಮಾಡದಿರುವಿಕೆಯ ತತ್ವಗಳನ್ನು ಈಗ ಸಂದರ್ಭಕ್ಕೆ ಅನುಗುಣವಾಗಿ ವ್ಯಾಖ್ಯಾನ ಮಾಡಲಾಗುತ್ತಿದೆ. ಅದರ ಫಲವಾಗಿ ಅಂತರರಾಷ್ಟ್ರೀಯ ನಿಯಂತ್ರಣ ಸಾಧನಗಳ ಪ್ರಭಾವಶಾಲಿತ್ವವನ್ನು ಹೆಚ್ಚಿಸುವ ಹೊಸ ಅವಕಾಶಗಳು ಹುಟ್ಟಿಕೊಂಡಿವೆ. ದ್ವಿಸ್ತರದ, ಬಹುಸ್ತರದ ಸಂಬಂಧಗಳ ಸಂದರ್ಭಗಳಲ್ಲಿ ಮಾನವಹಕ್ಕುಗಳ ಬಗ್ಗೆಯು ಗೌರವ ಒಂದು ಪ್ರಮುಖ ಅಂಶವಾಗಿದೆ. ವಿಶ್ವದ ವಿವಿಧ ಭಾಗಗಳಲ್ಲಿನ ಪ್ರಜಾಪ್ರಭುತ್ವಾತ್ಮಕ ಪ್ರಕ್ರಿಯೆ ಮಾನವಹಕ್ಕುಗಳ ಪ್ರಾಮುಖ್ಯತೆಯನ್ನು ಬಹುಪಾಲು ಭದ್ರಪಡಿಸಿದೆ ಮತ್ತು ಅವುಗಳ

---

[11] ಅಂತಹ ಮೊದಲನೆ ಬೋಧಕಸಾಮಗ್ರಿ (ಮಾನವಹಕ್ಕುಗಳು: ನಿರೂಪಣೆ ಮತ್ತು ಅರ್ಥ ವಿವರಣೆಗಳು) 1949ರಲ್ಲಿ ಪ್ರಕಟಣೆಗೊಂಡಿತ್ತು. ಅಲ್ಲಿಂದೀಚೆಗೆ ಮಾನವಹಕ್ಕುಗಳಿಗೆ ಸಂಬಂಧಿಸಿದ ವಿಷಯಗಳ ಮೇಲೆ ಯುನೆಸ್ಕೋದಿಂದ ಸುಮಾರು 200 ಪ್ರಕಟಣೆಗಳು ಹೊರಡಿಸಲ್ಪಟ್ಟಿವೆ.

[12] ಫ್ರೆಂಚ್ (1981), ಸ್ಪ್ಯಾನಿಷ್ (1982), ಫಿನ್ನಿಷ್ (1983), ಜರ್ಮನ್ (1983), ಗ್ರೀಕ್ (1985), ಪೋರ್ಚುಗೀಸ್ (1985), ಸ್ವೀಡಿಷ್ (1985), ಅರಾಬಿಕ್ (1986), ಡೇನಿಷ್ (1986), ಇಂಡೋನೇಶಿಯನ್ (1987), ಜಪಾನೀಸ್ (1988), ಸ್ಲೊವಾಕ್ (1993), ರಶ್ಯನ್ (1993) ಆರ್ಮೇನಿಯನ್ (1994) ಮತ್ತು ಬೆಲಾರಶ್ಯನ್ (1995).

[13] ಎರಡನೇ ಆಂಗ್ಲ ಆವೃತ್ತಿ (1989ರಲ್ಲಿ ಪ್ರಕಟಣೆಯಾದದ್ದು) ಪರಿಷ್ಕೃತವಾಗಿರದಿದ್ದಾಗ್ಯೂ ಸದ್ಯೋಚಿತಗೊಂಡ ಆವೃತ್ತಿಯಾಗಿತ್ತು.

ಅನುಷ್ಠಾನ ಪ್ರಜಾಪ್ರಭುತ್ವಾತ್ಮಕ ಮೌಲ್ಯಗಳಿಗೆ ನಿಷ್ಠೆಯನ್ನು ನಿರ್ಧರಿಸುವ ಪ್ರಮುಖ ಒರೆಗಲ್ಲೆಂಬುದನ್ನು ಬಹುಮಟ್ಟಿಗೆ ಒಪ್ಪಿಕೊಳ್ಳಲಾಗಿದೆ.

ಅದಕ್ಕಿಂತ ಹೆಚ್ಚಾಗಿ ಮಾನವಹಕ್ಕುಗಳ ಅನೇಕ ದಸ್ತಾವೇಜುಗಳು ಅಂಗೀಕೃತವಾಗಿವೆ ಮತ್ತು ಶೀತಲ ಸಮರದ ಅಂತ್ಯದ ನಂತರ ಹೊರಹೊಮ್ಮಿರುವ ಹೊಸ ರಾಷ್ಟ್ರಗಳು ಮಾನವಹಕ್ಕುಗಳ ಕರಾರುಗಳು ಹಾಗೂ ಒಡಂಬಡಿಕೆಗಳಿಗೆ ಭಾಗಸ್ಥರಾಗಿವೆ. ಮಾನವಹಕ್ಕುಗಳಿಗೆ ಸಂಬಂಧಿಸಿದ ಅನೇಕ ಪ್ರಮುಖ ವಿಶ್ವ ಸಮ್ಮೇಳನಗಳು ನಡೆದಿವೆ. ವರ್ಣಭೇದ ವ್ಯವಸ್ಥೆಯನ್ನು ನಿರ್ನಾಮ ಮಾಡಿ, ದಕ್ಷಿಣ ಆಫ್ರಿಕಾದಲ್ಲಿ ಒಂದು ಜನಾಂಗಭೇದರಹಿತ ಪ್ರಜಾಪ್ರಭುತ್ವವಾದಿ ಸಮಾಜ ನಿರ್ಮಾಣಗೊಳ್ಳುತ್ತಿದೆ.

ಈ ಎಲ್ಲ ಘಟನೆಗಳ ಬೆಳಕಿನಲ್ಲಿ 'ಮಾನವಹಕ್ಕುಗಳು: ಪ್ರಶ್ನೆ-ಉತ್ತರ' ಗ್ರಂಥದ ಹೊಸ ಆವೃತ್ತಿಯ ಪ್ರಕಟಣೆಯ ಆವಶ್ಯಕತೆ ಸ್ಪಷ್ಟಗೊಂಡಿದ್ದರಿಂದ, ಅದನ್ನು ಸಿದ್ಧಪಡಿಸಿಕೊಡುವಂತೆ ಲಿಯಾ ಲೆವಿನ್‌ರವರನ್ನು ಮತ್ತೆ ಕೇಳಿಕೊಳ್ಳಲಾಯಿತು. ಈ ಪ್ರಕಟಣೆ ಬಹುಪಾಲು ಸದ್ಯೋಚಿತವಾಗಿ ತಿದ್ದಲ್ಪಟ್ಟು ಪರಿಷ್ಕೃತಗೊಂಡಿದ್ದಾಗ್ಯೂ, ಅದು ಬಹುಮಟ್ಟಿಗೆ ಮೂಲ ಆವೃತ್ತಿಯ ವಿನ್ಯಾಸವನ್ನು ಉಳಿಸಿಕೊಂಡಿದೆ. ಪುಸ್ತಕದ ಮೊದಲ ಭಾಗದಲ್ಲಿ ಅಂತರರಾಷ್ಟ್ರೀಯ ಮಾನವಹಕ್ಕುಗಳ ಶಾಸನದ ವ್ಯಾಪ್ತಿಯನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಮಾನವಹಕ್ಕುಗಳ ರಕ್ಷಣೆಯ ಕ್ಷೇತ್ರದಲ್ಲಿ ಅಭಿವೃದ್ಧಿಗೊಂಡಿರುವ ವಿಧಾನಗಳು, ಅದರಂತೆಯೇ, ಮಾನವಹಕ್ಕುಗಳ ಶಿಕ್ಷಣದ ಪ್ರಾಮುಖ್ಯತೆಗಳಿಗೆ ವಿಶೇಷ ಲಕ್ಷ್ಯ ನೀಡಲಾಗಿದೆ. ಎರಡನೇ ಭಾಗದಲ್ಲಿ ಮೂವತ್ತು ಕಲಮುಗಳ ಮಾನವಹಕ್ಕುಗಳ ವಿಶ್ವ ಘೋಷಣೆಯ ಒಂದೊಂದರ ಅರ್ಥವನ್ನೂ ವಿವರಿಸಲಾಗಿದೆ.

ಹೊಸ ಆವೃತ್ತಿಗೆ ವಿವರಣಾತ್ಮಕ ಚಿತ್ರಗಳನ್ನು ಮಾಡಿಕೊಡಲು ಪ್ಲಾಂಟುರವರು ಒಪ್ಪಿ ಮಾನವಹಕ್ಕುಗಳ ಶಿಕ್ಷಣದ ಕೆಲಸಕ್ಕೆ ಸಚಿತ್ರತೆಯ ಸಾಮರ್ಥ್ಯವನ್ನು ತಂದುಕೊಟ್ಟಿದ್ದಕ್ಕಾಗಿ ಅವರಿಗೆ ಯುನೆಸ್ಕೋ ಅಭಾರಿಯಾಗಿದೆ.

ವಾಸ್ತವವಾಗಿ ಈ ಪ್ರಕಟಣೆ ಅನೇಕ ಸಂಸ್ಥೆಗಳ ಮತ್ತು ವ್ಯಕ್ತಿಗಳ ಸಂಯೋಜಿತ ಪ್ರಯತ್ನಗಳ ಫಲವಾಗಿದೆ.

ಈ ಹಸ್ತಪ್ರತಿಯನ್ನು ಸಿದ್ಧಪಡಿಸಲು ಸಹಾಯ ಮಾಡಿರುವ ಎಲ್ಲ ಅಂತರರಾಷ್ಟ್ರೀಯ ಸಂಸ್ಥೆಗಳಿಗೆ, ನಿರ್ದಿಷ್ಟವಾಗಿ ವಿಶ್ವಸಂಸ್ಥೆಯ ಮಾನವಹಕ್ಕುಗಳ ಕೇಂದ್ರ, ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆ, ವಿಶ್ವಸಂಸ್ಥೆಯ ನಿರಾಶ್ರಿತರ ಉನ್ನತಾಯುಕ್ತರ ಕಾರ್ಯಾಲಯ, ರೆಡ್‌ಕ್ರಾಸ್‌ನ ಅಂತರರಾಷ್ಟ್ರೀಯ ಸಮಿತಿ, ಯುರೋಪು ಪರಿಷತ್ತು, ಆಫ್ರಿಕಾ ಐಕ್ಯತಾ ಸಂಘಟನೆ, ಅಮೇರಿಕಾ ರಾಜ್ಯಗಳ ಸಂಘಟನಾ ಸಂಸ್ಥೆ, ಯುರೋಪಿನ ಸಹಕಾರ ಮತ್ತು ಭದ್ರತಾ ಸಂಸ್ಥೆ - ಇವುಗಳಿಗೆ ಮಾನವಹಕ್ಕುಗಳು, ಪ್ರಜಾಪ್ರಭುತ್ವ ಹಾಗೂ ಶಾಂತಿ ವಿಭಾಗ ತನ್ನ ಹಾರ್ದಿಕ ಕೃತಜ್ಞತೆಗಳನ್ನು ವ್ಯಕ್ತಪಡಿಸುತ್ತದೆ.

ಅಲ್ಲದೆ ಲಿಯಾ ಲೆವಿನ್‌ರಿಗೆ ಈ ಹಸ್ತಪ್ರತಿಯನ್ನು ಸಿದ್ಧಪಡಿಸಲು ನೆರವು ನೀಡಿದ ಎಸೆಕ್ಸ್ ವಿಶ್ವವಿದ್ಯಾಲಯದ (ಯು.ಕೆ.) ಮಾನವಹಕ್ಕುಗಳ ಕೇಂದ್ರದ ಕರ್ಮಚಾರಿಗಳಿಗೂ ಮತ್ತು ಸಂಶೋಧಕ ಸೇರಿ ಶೆಪರ್ಡ್‌ರವರಿಗೂ ವಂದನೆಗಳನ್ನು ಈ ವಿಭಾಗ ಸಲ್ಲಿಸುತ್ತದೆ. ಸಂಶೋಧನ ಕಾರ್ಯದಲ್ಲಿ ನೀಡಿದ ದೊಡ್ಡ ಪ್ರಮಾಣದ ಬೆಂಬಲಕ್ಕಾಗಿ, ಲೇಖಕರ ಕೋರಿಕೆಯ ಮೇರೆಗೆ, ಸ್ವೀಡನ್ನಿನ ಅಂತರರಾಷ್ಟ್ರೀಯ ಅಭಿವೃದ್ಧಿ ಸಂಸ್ಥೆಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ಈ ಕರಡನ್ನು ಪ್ರಕಟಣೆಗೆ ಸಿದ್ಧಪಡಿಸುವಲ್ಲಿ ನೀಡಿದ ನೆರವಿಗಾಗಿ ಶೈಲಾ ಬಿನೆಟ್ ಮತ್ತು ಗ್ರಾಬ್ರಿಯೆಲ್ ಬ್ರುನ್ಸ್ ಇವರು ವಿಶೇಷ ಮನ್ನಣೆಗೆ ಅರ್ಹರಾಗಿದ್ದಾರೆ.

ಮಾನವಹಕ್ಕುಗಳ ಮಾನದಂಡಗಳು ಮತ್ತು ವಿಧಿವಿಧಾನಗಳನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಈ ಪುಸ್ತಕ ಸಹಾಯಕವಾಗುತ್ತದೆ ಮತ್ತು ವಿಶ್ವಸಂಸ್ಥೆಯ ಮಾನವಹಕ್ಕು ಶೈಕ್ಷಣಿಕ ದಶಕದ ಗುರಿಗಳನ್ನು ಸಾಧಿಸುವುದಕ್ಕೆ ನೆರವಾಗುತ್ತದೆ ಎಂದು ನಾವು ಆಶಿಸುತ್ತೇವೆ.

*ಜಾನುಸ್ ಸಿಮೋನಿಡ್ಸ್, ನಿರ್ದೇಶಕ*
*ವ್ಲಾಡಿಮಿರ್ ವೊಲೊಡಿನ್, ಕಾರ್ಯಕ್ರಮ ತಜ್ಞ*
*ಮಾನವಹಕ್ಕುಗಳು, ಪ್ರಜಾಪ್ರಭುತ್ವ ಮತ್ತು ಶಾಂತಿ ವಿಭಾಗ*

### 1. 'ಮಾನವಹಕ್ಕುಗಳು' ಎಂಬುದರ ಅರ್ಥವೇನು?

ಮಾನವಜೀವಿಗಳೆಲ್ಲರೂ ಜನ್ಮತಃ ಒಂದೇ ಸಮನಾದ ಘನತೆ ಮತ್ತು ಹಕ್ಕುಗಳನ್ನು ಹೊಂದಿದವರಾಗಿರುತ್ತಾರೆ. ಇವು ಪರಭಾರೆ ಮಾಡಲು ಬರದ ಮತ್ತು, ಅವರೆಲ್ಲರೂ ಮನುಷ್ಯರು ಎಂಬ ಒಂದೇ ಕಾರಣದಿಂದ, ಅವರಲ್ಲಿ ಅಂತರ್ಗತವಾಗಿರುವ ನೈತಿಕ ಹಕ್ಕುಗಳು. ಇಂದು ನಾವು ಯಾವುದನ್ನು ಮಾನವಹಕ್ಕುಗಳೆಂದು ಕರೆಯುತ್ತಿದ್ದೇವೆಯೋ ಅದರಲ್ಲಿ ಈ ಹಕ್ಕುಗಳನ್ನೇ ಸುಸಂಬದ್ಧವಾಗಿ ಜೋಡಿಸಿ ಸೂತ್ರೀಕರಿಸಲಾಗಿದೆ. ಅಲ್ಲದೆ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಎರಡೂ ಸ್ತರಗಳಲ್ಲಿ ಸಮಾಜಗಳ ಶಾಸನ ನಿರ್ಮಾಣ ಪ್ರಕ್ರಿಯೆಯ ಅನ್ವಯ ಸ್ಥಾಪನೆಗೊಂಡ ಶಾಸನಬದ್ಧ ಹಕ್ಕುಗಳಾಗಿ ಅವು ಪರಿವರ್ತಿತವಾಗಿವೆ. ಆಳಲ್ಪಡುತ್ತಿರುವವರ ಸಮ್ಮತಿಯೇ ಈ ಶಾಸನಬದ್ಧ ಹಕ್ಕುಗಳ ಬುನಾದಿ; ಅಂದರೆ ಈ ಹಕ್ಕುಗಳು ಯಾರ ಉದ್ದೇಶಕ್ಕಾಗಿ ಇವೆಯೋ ಅವರುಗಳ ಸಮ್ಮತಿ.

### 2. ಈ ಅಭಿಪ್ರಾಯವನ್ನು ವಿಶ್ವದಾದ್ಯಂತ ಒಪ್ಪಿಕೊಳ್ಳಲಾಗಿದೆಯೆ?

ಮನುಕುಲದ ಎಲ್ಲ ಸದಸ್ಯರ ಸಮಾನತೆ ಮತ್ತು ಘನತೆಯ ಮೌಲ್ಯಗಳನ್ನು, ಇಂದು ನಾವು ಮಾನವಹಕ್ಕುಗಳೆಂದು ಕರೆಯುತ್ತಿರುವುದರೊಳಗಿರುವ ಅನೇಕ ಇನ್ನಿತರ ಮೂಲಭೂತ ತತ್ವಗಳಂತೆಯೇ, ವಾಸ್ತವಿಕವಾಗಿ, ಪ್ರತಿಯೊಂದು ಸಂಸ್ಕೃತಿ, ನಾಗರಿಕತೆ, ಧರ್ಮ ಮತ್ತು ತಾತ್ವಿಕ ಪರಂಪರೆಯಲ್ಲೂ ಕಾಣಬಹುದಾಗಿದೆ.[1*]

### 3. ಈ ಮೌಲ್ಯಗಳು ಆಚರಣೆಯಲ್ಲಿ ಹೇಗೆ ಪ್ರತಿಬಿಂಬಿತವಾಗಿವೆ?

ಮನುಷ್ಯನ ಜೀವ ಮತ್ತು ಘನತೆಗಳು ಇತಿಹಾಸದುದ್ದಕ್ಕೂ ಅಲಕ್ಷ್ಯಕ್ಕೊಳಪಟ್ಟಿವೆ; ಇಂದೂ ಆ ಅಸಡ್ಡೆ ಮುಂದುವರಿದಿದೆ. ಆದಾಗ್ಯೂ ನಿಯಮಗಳು ಎಲ್ಲ ನಾಗರಿಕರಿಗೂ ಸಮಾನವಾಗಿರಬೇಕೆಂಬ ಅಭಿಪ್ರಾಯ ಅನೇಕ ಶತಮಾನಗಳಿಗೂ ಹಿಂದಿನದು. ಯಾವುದನ್ನು 'ಪ್ರಕೃತಿಸಹಜ ಶಾಸನ'ವೆಂದು ಕರೆಯಲಾಗಿದೆಯೋ ಅದು ಸಮಾಜದಲ್ಲಿ ಬಳಕೆಯಲ್ಲಿರಲೇಬೇಕಾದ ನಿಯಮಾವಳಿಗಳ ಸಂಹಿತೆಯ ಕಲ್ಪನೆಯನ್ನು ಸೂಚಿಸುತ್ತದೆ. 'ಪ್ರಕೃತಿಸಹಜ ಶಾಸನ'ದಲ್ಲಿ ಮನ್ನಿಸಲ್ಪಟ್ಟ ಹಕ್ಕುಗಳಲ್ಲಿ ಸಮಾನತೆಯ ತತ್ವವನ್ನು (ಭಾಗ 2, ಕಲಮು 1ನ್ನು ಸಹ ನೋಡಿರಿ) ಬಹಳ ಕಾಲದಿಂದ ಅನೇಕ ಸಮಾಜಗಳಲ್ಲಿ ಒಪ್ಪಿಕೊಳ್ಳಲಾಗಿತ್ತು. ಆದರೂ ಅಜ್ಞಾನ,

---

*ಟಿಪ್ಪಣಿಗಳನ್ನು ಈ ಹೊತ್ತಿಗೆಯ ಕೊನೆಯಲ್ಲಿ ಕೊಡಲಾಗಿದೆ.


ಏನಿದೆ ನೋಡೋಣ- "ಮರಣದಂಡನೆ" "ಮಾನಹಾನಿ" "ನಿರಂಕುಶ ಪ್ರಭುತ್ವ" "ತಾರತಮ್ಯ"...
... ಆದರೆ "ಘನತೆ" ಅನ್ನೋದು ಕಾಣ್ತಾ ಇಲ್ಲ
ನಿಘಂಟು
PLANTU

ಪೂರ್ವಗ್ರಹಗಳ ಕಾರಣದಿಂದಾಗಿ ಮತ್ತು ಅಸಮಾನತೆಯನ್ನು ಸಮರ್ಥಿಸುವ ಕೆಲವು ಅತಾರ್ಕಿಕ ಸಿದ್ಧಾಂತಗಳಿಂದಾಗಿ ತಾರತಮ್ಯ ಅಸ್ತಿತ್ವದಲ್ಲಿ ಮುಂದುವರಿದಿದೆ. ಆ ರೀತಿಯ ಸಿದ್ಧಾಂತಗಳು ಲಿಂಗ, ಜನಾಂಗ, ವರ್ಣ, ವಂಶ, ರಾಷ್ಟ್ರ ಅಥವಾ ಬುಡಕಟ್ಟಿನ ಮೂಲ ಅಥವಾ ಧಾರ್ಮಿಕ ನಂಬಿಕೆ ಅಥವಾ ವರ್ಗ ಅಥವಾ ಜಾತಿ ವ್ಯವಸ್ಥೆಯ ಆಧಾರದ ಮೇಲೆ ಇತಿಹಾಸದುದ್ದಕ್ಕೂ, ದುರದೃಷ್ಟವಶಾತ್ ಆಧುನಿಕ ಕಾಲದಲ್ಲೂ, ಗುಲಾಮಗಿರಿ ಹಾಗೂ ತಾರತಮ್ಯವನ್ನು ಸಮರ್ಥಿಸಲು ಬಳಸಲ್ಪಟ್ಟಿವೆ.

### *4. ಮಾನವಹಕ್ಕುಗಳ ಸಂರಕ್ಷಣೆಯ ವಿಚಾರ ರೂಪಗೊಂಡಿದ್ದು ಹೇಗೆ?*

ಮಾನವಜೀವಿಗಳ ಹಕ್ಕುಗಳ ವಿಸ್ತರಣೆ ಮತ್ತು ಸಂರಕ್ಷಣೆಯ ವಿಚಾರಗಳು ಕ್ರಮೇಣ ಲಿಖಿತ ಮಾನದಂಡಗಳಾಗಿ ಪರಿವರ್ತಿತವಾಗಿವೆ. ಈ ದಾರಿಯಲ್ಲಿ ಇಂಗ್ಲೆಂಡಿನ 'ಮ್ಯಾಗ್ನಾಕಾರ್ಟಾ' (1215), 'ಪೆಟಿಶನ್ ಆಫ್ ರೈಟ್ಸ್' (1628) ಮತ್ತು 'ಬಿಲ್ ಆಫ್ ರೈಟ್ಸ್' (1689) ಮುಂತಾದ ಅನೇಕ ಹೆಗ್ಗುರುತುಗಳನ್ನು ಹೆಸರಿಸಬಹುದು. ಹದಿನೆಂಟನೇ ಶತಮಾನದ ಅವಧಿಯಲ್ಲಿ ಪ್ರಕೃತಿಸಹಜ ಶಾಸನದ ಪ್ರಾರಂಭಿಕ ಅಭಿಪ್ರಾಯಗಳು ಬೆಳವಣಿಗೆ ಹೊಂದಿ ಪ್ರಕೃತಿಸಹಜ ಶಾಸನದ ಹಕ್ಕುಗಳು ಶಾಸನಬದ್ಧ ಹಕ್ಕುಗಳಾಗಿ ಸ್ವೀಕೃತಗೊಂಡವು ಮತ್ತು ಪ್ರಪ್ರಥಮ ಬಾರಿಗೆ ರಾಷ್ಟ್ರೀಯ ಸಂವಿಧಾನಗಳಲ್ಲಿ ಈ ಹಕ್ಕುಗಳು ನಮೂದಿಸಲ್ಪಟ್ಟವು. ಅಲ್ಲದೆ ಸ್ವತಂತ್ರ ವ್ಯಕ್ತಿಗಳ ಸಮ್ಮತಿಯಿಂದಾಗಿ ರಾಜ್ಯಶಕ್ತಿಯು ಉದ್ಭವಿಸಿದೆ ಎಂಬುದಕ್ಕೆ ಒತ್ತುಕೊಟ್ಟು, ಹೆಚ್ಚುಕಡಿಮೆ ವ್ಯಕ್ತಿ ಮತ್ತು ರಾಷ್ಟ್ರದ ಮಧ್ಯೆ ಒಂದು ಒಪ್ಪಂದದ ಸಂಬಂಧ ಪ್ರತಿಬಿಂಬಿಸಲ್ಪಟ್ಟಿತು. ಮನುಷ್ಯ ಮತ್ತು ಪ್ರಜೆಯ ಹಕ್ಕುಗಳ 1789ರ ಫ್ರೆಂಚ್ ಘೋಷಣೆ, 1791ರ ಅಮೇರಿಕದ ಹಕ್ಕುಗಳ ವಿಧೇಯಕಗಳು ಈ ನೆಲೆಯ ಮೇಲೆ ಆಧಾರಿತವಾಗಿದ್ದವು. 19ನೇ ಶತಮಾನದಲ್ಲಿ ಅನೇಕ ಸ್ವತಂತ್ರ ರಾಷ್ಟ್ರಗಳು ಈ ತತ್ವವನ್ನು ಅಂಗೀಕರಿಸಿದವು ಮತ್ತು ಸಾಮಾಜಿಕ ಆರ್ಥಿಕ ಹಕ್ಕುಗಳಿಗೂ ಮಾನ್ಯತೆ ದೊರೆಯಲು ಆರಂಭವಾಯಿತು. ರಾಷ್ಟ್ರೀಯ ಸಂವಿಧಾನಗಳಲ್ಲಿ ಮಾನವಹಕ್ಕುಗಳಿಗೆ ಮಾನ್ಯತೆ ನೀಡಿದ್ದಾಗ್ಯೂ ಈ ಹಕ್ಕುಗಳು ಶಾಸನಗಳ ಮೂಲಕ ಅಥವಾ ನಿರಂಕುಶವಾಗಿ ಅಥವಾ ಪ್ರಾಯಶಃ ಸಾಧಾರಣವಾಗಿ ಸಾಮಾಜಿಕ ತಂತ್ರಗಳ ಮೂಲಕ ಮೊಟಕು ಮಾಡಲ್ಪಟ್ಟವು ಅಥವಾ ತೊಡೆದುಹಾಕಲ್ಪಟ್ಟವು. ಅದಕ್ಕಿಂತ ಹೆಚ್ಚಾಗಿ, ಮಾನವಹಕ್ಕುಗಳು, ಶಾಸನಬದ್ಧ ಹಕ್ಕುಗಳೆಂದು ಸ್ಥಾನಮಾನ ಹೊಂದಿದ್ದಾಗ್ಯೂ, ಆಗಾಗ್ಗೆ ಆಯಾ ರಾಷ್ಟ್ರಗಳಿಂದಲೇ ಉಲ್ಲಂಘನೆಗೆ ಒಳಗಾದವು.

### *5. ಮಾನವಹಕ್ಕುಗಳ ಸಂರಕ್ಷಣೆಯನ್ನು ಅಂತರರಾಷ್ಟ್ರೀಯವಾಗಿಸುವ ಆವಶ್ಯಕತೆಗೆ ಮಾನ್ಯತೆಯುಂಟಾದದ್ದು ಹೇಗೆ?*

ಮಾನವ ಹಕ್ಕುಗಳ ಕುರಿತಾದ ಮೊದಲ ಅಂತರರಾಷ್ಟ್ರೀಯ ಒಪ್ಪಂದಗಳು ಧಾರ್ಮಿಕ ಸ್ವಾತಂತ್ರವನ್ನು ಒಪ್ಪಿಕೊಳ್ಳುವುದಕ್ಕೆ (ಉದಾ: 1648ರ ವೆಸ್ಟ್‌ಫೇಲಿಯಾ ಒಪ್ಪಂದ) ಮತ್ತು ಗುಲಾಮಗಿರಿಯ ರದ್ದತಿಗೆ ಸಂಬಂಧಿಸಿದ್ದಾಗಿದ್ದವು. 1815ರ ವಿಯೆನ್ನಾ

ಸಮಾವೇಶವು ಗುಲಾಮಗಿರಿಯನ್ನು ಆಗಲೇ ಖಂಡಿಸಿತ್ತು. 19ನೇ ಶತಮಾನದ ಉತ್ತರಾರ್ಧದಲ್ಲಿ ಗುಲಾಮಗಿರಿಯ ರದ್ದತಿಯ ಮೇಲೆ ಅನೇಕ ಅಂತರರಾಷ್ಟ್ರೀಯ ಒಪ್ಪಂದಗಳು ಕಾಣಿಸಿಕೊಂಡವು (ಉದಾ: 1862ರ ವಾಷಿಂಗ್ಟನ್ ಒಪ್ಪಂದ, 1867-1890ರ ಬ್ರಸೆಲ್ಸ್ ಮತ್ತು 1885ರ ಬರ್ಲಿನ್ ಸಮ್ಮೇಳನಗಳ ದಾಖಲಾತಿಗಳು). ಅಂತರರಾಷ್ಟ್ರೀಯ ಸಹಕಾರದ ಇನ್ನೊಂದು ಕ್ಷೇತ್ರವೆಂದರೆ ಯುದ್ಧಕ್ಕೆ ಸಂಬಂಧಿಸಿದ ಶಾಸನಗಳ ವಿಸ್ತರಣೆ (ಉದಾ: 1856ರ ಪ್ಯಾರಿಸ್ ಘೋಷಣೆ, 1864ರ ಮೊದಲನೆಯ ಮತ್ತು 1906ರ ಎರಡನೆಯ ಒಡಂಬಡಿಕೆಗಳು, 1899 ಮತ್ತು 1907ರ ಹೇಗ್ ಒಡಂಬಡಿಕೆಗಳು). 1864ರ ಅಂತರರಾಷ್ಟ್ರೀಯ ರೆಡ್‌ಕ್ರಾಸ್ (ಐ.ಸಿ.ಆರ್.ಸಿ) ಸಮಿತಿಯ ರಚನೆ ಈ ಬೆಳವಣಿಗೆಗಳಿಗೆ ಮಹತ್ತರ ಕೊಡುಗೆಯಾಯಿತು.[2]

ಅಂತರರಾಷ್ಟ್ರೀಯ ಜವಾಬ್ದಾರಿ ಅಗತ್ಯವಿರುವ ಮಾನವಹಕ್ಕುಗಳನ್ನು ರಾಷ್ಟ್ರೀಯ ಸರ್ಕಾರಗಳು ಮಾತ್ರ ಸಂರಕ್ಷಿಸುವುದು ಸಾಧ್ಯವಿಲ್ಲವೆಂಬ ನಂಬಿಕೆ ಮೊದಲನೇ ಮಹಾಯುದ್ಧ ಕೊನೆಗೊಂಡ ನಂತರ ಬೆಳೆದುಬಂತು. ಆ ಮಹಾಯುದ್ಧದ ನಂತರ ರಚನೆಯಾದ ವಿಶ್ವದ ಮೊದಲ ಅಂತರಸರ್ಕಾರಿ ಸಂಸ್ಥೆ, ಲೀಗ್ ಆಫ್ ನೇಶನ್ಸ್, ಮಾನವಹಕ್ಕುಗಳ ಪ್ರಸ್ತಾವ ಮಾಡದಿದ್ದರೂ ಅಂತರರಾಷ್ಟ್ರೀಯ ವಿಧಾನಗಳ ಮೂಲಕ ಮಾನವಹಕ್ಕುಗಳ ಸಂರಕ್ಷಣೆಯನ್ನು ಕೈಗೊಂಡಿತು.

ಆದಾಗ್ಯೂ ಕೆಲವೇ ದೇಶಗಳಲ್ಲಿ ಮುಖ್ಯವಾಗಿ ಅಲ್ಪಸಂಖ್ಯಾತರ ರಕ್ಷಣೆಗೆ ನಿರ್ದಿಷ್ಟ ವಾತಾವರಣ ನಿರ್ಮಾಣ ಮಾಡುವುದಷ್ಟಕ್ಕೇ ಅದರ ಕಾಳಜಿ ಸೀಮಿತಗೊಂಡಿತ್ತು.

1919ರಲ್ಲಿ ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆ (ಐ.ಎಲ್.ಓ.) ರಚಿತವಾಯಿತು. ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ ಕೈಗಾರಿಕೆಗಳಲ್ಲಿನ ಕಾರ್ಮಿಕರ ಸ್ಥಿತಿಗತಿಗಳ ಮಾನದಂಡಗಳನ್ನು ಐ.ಎಲ್.ಓ. ವಿಸ್ತರಿಸಿತು. ಇದು ಮುಂದಿನ ಅಂತರರಾಷ್ಟ್ರೀಯ ಒಪ್ಪಂದಗಳ ವಿಷಯವಾಯಿತು. 25ನೇ ಸೆಪ್ಟೆಂಬರ್ 1926ರಲ್ಲಿ ಜಿನೀವಾದಲ್ಲಿ ಸಹಿಮಾಡಲ್ಪಟ್ಟ ಅಂತರರಾಷ್ಟ್ರೀಯ ಗುಲಾಮಗಿರಿ ಒಡಂಬಡಿಕೆಯು ಗುಲಾಮಗಿರಿಯ ರದ್ದತಿಯನ್ನು ಗುರಿಯಾಗಿಟ್ಟುಕೊಂಡಿದ್ದ ಸುದೀರ್ಘ ಪ್ರಯತ್ನಗಳ ಫಲಶ್ರುತಿಯಾಯಿತು. 1933 ಮತ್ತು 1938ರಲ್ಲಿ ನಿರಾಶ್ರಿತರ ಸಂರಕ್ಷಣೆಗೆ ಸಂಬಂಧಪಟ್ಟ ಒಡಂಬಡಿಕೆಗಳು ಅಂಗೀಕೃತವಾದವು. ಆದರೆ, ಈ ಎಲ್ಲ ಬೆಳವಣಿಗೆಗಳಾದಾಗ್ಯೂ ಸಹ ಯುದ್ಧಗಳ ಮಧ್ಯಂತರ ಅವಧಿಯಲ್ಲಿ ಮಾನವಹಕ್ಕುಗಳ ಶಾಸನ ಮಾತ್ರ ಹೊರಹೊಮ್ಮಲಿಲ್ಲ.

1920 ಮತ್ತು 1930ರ ದಶಕಗಳಲ್ಲಿ ಸ್ಥಾಪನೆಗೊಂಡ ನಿರಂಕುಶ ಪ್ರಭುತ್ವಗಳು ತಮ್ಮದೇ ಭೂಭಾಗಗಳಲ್ಲಿ ಮಾನವಹಕ್ಕುಗಳನ್ನು ಅಸಹ್ಯವಾಗಿ ಉಲ್ಲಂಘಿಸಿದವು. ಎರಡನೇ ಮಹಾಯುದ್ಧ ಮಾನವಜೀವ ಹಾಗೂ ಘನತೆಯ ದೊಡ್ಡ ಪ್ರಮಾಣದ ಹಾನಿಗೆ ಮತ್ತು ಇಡೀ ಜನರ ಗುಂಪುಗಳನ್ನೇ ಜನಾಂಗ, ಧರ್ಮ ಅಥವಾ ರಾಷ್ಟ್ರೀಯತೆಯ ಕಾರಣಕ್ಕಾಗಿ ನಾಶಗೊಳಿಸುವ ಪ್ರಯತ್ನಗಳಿಗೆ ಅವಕಾಶ ಮಾಡಿತು. ಅವುಗಳ ಬಗೆಗಿನ ಗೌರವ, ವಿಶ್ವ ಶಾಂತಿ ಹಾಗೂ ಪ್ರಗತಿಯ ವಾತಾವರಣಕ್ಕೆ ಅತ್ಯಾವಶ್ಯಕವಾದ್ದರಿಂದ ಮಾನವಹಕ್ಕುಗಳ ಕ್ರೋಢೀಕರಣ ಮತ್ತು ಸಂರಕ್ಷಣೆಗೆ

ಅಂತರರಾಷ್ಟ್ರೀಯ ದಸ್ತಾವೇಜುಗಳು ಅಗತ್ಯವೆಂಬುದು ಅದರಿಂದಾಗಿ ಸ್ಪಷ್ಟಗೊಂಡಿತು.

### *6. ಕಾರ್ಯತಃ ಅದನ್ನು ಸಾಧಿಸಿದ್ದು ಹೇಗೆ?*

ಜೂನ್ 26, 1945ರಲ್ಲಿ ಸಹಿಮಾಡಲಾದ ವಿಶ್ವಸಂಸ್ಥೆಯ ಲಿಖಿತ ಸಂವಿಧಾನದಲ್ಲಿ ಈ ದೃಢ ವಿಶ್ವಾಸವನ್ನು ಪ್ರತಿಬಿಂಬಿಸಿ, ಬಲಪಡಿಸಲಾಯಿತು. "ಮುಂಬರುವ ತಲೆಮಾರುಗಳನ್ನು ಯುದ್ಧದ ವಿಪತ್ತಿನಿಂದ ರಕ್ಷಿಸುವುದು, ಮೂಲಭೂತ ಮಾನವಹಕ್ಕುಗಳ ಬಗ್ಗೆ, ಮನುಷ್ಯನ ವ್ಯಕ್ತಿತ್ವದ ಘನತೆ ಮತ್ತು ಯೋಗ್ಯತೆಯ ಬಗ್ಗೆ, ಗಂಡು-ಹೆಣ್ಣುಗಳ ಸಮಾನ ಹಕ್ಕುಗಳ ಬಗ್ಗೆ ನಂಬಿಕೆಯನ್ನು ಪುನಃ ದೃಢಪಡಿಸುವುದು" ವಿಶ್ವವ್ಯಾಪಿ ಸಂಘಟನೆಯ ಮೂಲ ಉದ್ದೇಶವೆಂಬುದನ್ನು ಲಿಖಿತ ಸಂವಿಧಾನದಲ್ಲಿ ಹೇಳಲಾಗಿದೆ. ಮಾನವಹಕ್ಕುಗಳಿಗೆ ಹಾಗೂ ಜನಾಂಗ, ಲಿಂಗ, ಭಾಷೆ, ಧರ್ಮಗಳನ್ನು ಪರಿಗಣಿಸದೆ ಎಲ್ಲರ ಮೂಲಭೂತ ಸ್ವಾತಂತ್ರ್ಯಗಳಿಗೆ ಗೌರವ ನೀಡುವುದನ್ನು ಪ್ರೋತ್ಸಾಹಿಸುವುದಕ್ಕೆ ಮತ್ತು ಅದರಿಂದಾಗಿ ತಾರತಮ್ಯರಹಿತ ತತ್ವದ ಪ್ರತಿಷ್ಠಾಪನೆಗೆ ಅಂತರರಾಷ್ಟ್ರೀಯ ಸಹಕಾರವನ್ನು ಸಾಧಿಸುವುದು ವಿಶ್ವಸಂಸ್ಥೆಯ ಗುರಿಗಳಲ್ಲೊಂದೆಂಬುದನ್ನು ಲಿಖಿತ ಸಂವಿಧಾನದ 1ನೇ ಕಲಮಿನಲ್ಲಿ ಹೇಳಲಾಗಿದೆ. 55ನೇ ಕಲಮು ಅಂಥದೇ ಉದ್ದೇಶವನ್ನು ವ್ಯಕ್ತಪಡಿಸುತ್ತದೆ. ಅಲ್ಲದೆ 56ನೇ ಕಲಮಿನ ಅನ್ವಯ ವಿಶ್ವಸಂಸ್ಥೆಯ ಎಲ್ಲ ಸದಸ್ಯರು 55ನೇ ಕಲಮಿನಲ್ಲಿ ನಮೂದಿಸಿರುವ ಉದ್ದೇಶಗಳ ಸಾಧನೆಗಾಗಿ ಸಂಸ್ಥೆಯ ಸಹಕಾರದೊಂದಿಗೆ ಜತೆಯಾಗಿ ಹಾಗೂ ಪ್ರತ್ಯೇಕವಾಗಿ ಕ್ರಮಕೈಗೊಳ್ಳುವ ಪ್ರತಿಜ್ಞೆಗೆ ಬದ್ಧರಾಗಿದ್ದಾರೆ.

ಲಿಖಿತ ಸಂವಿಧಾನ ಒಂದು ಒಪ್ಪಂದವಾಗಿದ್ದು, ಶಾಸನಾತ್ಮಕವಾಗಿ ಬದ್ಧಗೊಳಿಸುವ ದಾಖಲೆಯಾಗಿರುವುದರಿಂದ ಅದರ ವಿಧಿಗಳು ಒಂದು ಇತ್ಯರ್ಥಕ ಅಂತರರಾಷ್ಟ್ರೀಯ ಶಾಸನದ ಸಾಮರ್ಥ್ಯವನ್ನು ಹೊಂದಿವೆ. ಮಾನವಹಕ್ಕುಗಳನ್ನು ಮತ್ತು ಅವುಗಳ ಆಚರಣೆಯನ್ನು ಪ್ರೋತ್ಸಾಹಿಸುವ ಮತ್ತು ಈ ಆಶಯದ ಸಾಧನೆಗಾಗಿ ವಿಶ್ವಸಂಸ್ಥೆ ಮತ್ತು ಇತರ ರಾಷ್ಟ್ರಗಳ ಜತೆ ಸಹಕರಿಸುವುದೂ ಸೇರಿದಂತೆ ವಿಶ್ವಸಂಸ್ಥೆಯ ಲಿಖಿತ ಸಂವಿಧಾನದ ಅಡಿಯಲ್ಲಿ ಒಪ್ಪಿಕೊಂಡಿರುವ ಕರ್ತವ್ಯವನ್ನು ವಿಶ್ವಸಂಸ್ಥೆಯ ಎಲ್ಲ ಸದಸ್ಯರು ಪ್ರಾಮಾಣಿಕವಾಗಿ ನೆರವೇರಿಸತಕ್ಕದ್ದು. ಆದಾಗ್ಯೂ ಲಿಖಿತ ಸಂವಿಧಾನ ಮಾನವಹಕ್ಕುಗಳನ್ನು ನಿರ್ದಿಷ್ಟಪಡಿಸಿಲ್ಲ ಮತ್ತು ಸದಸ್ಯ ರಾಷ್ಟ್ರಗಳಲ್ಲಿ ಅವುಗಳ ಅನುಷ್ಠಾನವನ್ನು ಖಾತರಿಪಡಿಸಲು ಯಾವುದೇ ನಿರ್ದಿಷ್ಟ ಯಾಂತ್ರಿಕ ವ್ಯವಸ್ಥೆಯನ್ನೂ ನೀಡಿಲ್ಲ.

### *7. ಮಾನವಹಕ್ಕುಗಳ ಶಾಸನ ರಚನೆಯಾದದ್ದು ಹೇಗೆ?*

ಲಿಖಿತ ಸಂವಿಧಾನದಲ್ಲಿ ಉಲ್ಲೇಖಿಸಿರುವ ಮಾನವಹಕ್ಕುಗಳು ಮತ್ತು ಸ್ವಾತಂತ್ರ್ಯಗಳನ್ನು ವ್ಯಾಖ್ಯಾನಿಸಿ, ಮಾನವಹಕ್ಕುಗಳ ಅಂತರರಾಷ್ಟ್ರೀಯ ವಿಧೇಯಕವನ್ನು ಬರೆಯುವ ಕೆಲಸವನ್ನು ವಿಶ್ವಸಂಸ್ಥೆಯ ಪ್ರಮುಖ ಅಂಗಗಳಲ್ಲಿ

ಒಂದಾದ ಆರ್ಥಿಕ ಮತ್ತು ಸಾಮಾಜಿಕ ಪರಿಷತ್ತಿನ (ಇಕೊಸಾಕ್: ಇ.ಸಿ.ಓ.ಎಸ್.ಓ.ಸಿ.) ಸಹಾಯಕ ಸಂಸ್ಥೆಯಾಗಿ 1945ರಲ್ಲಿ ಸ್ಥಾಪನೆಗೊಂಡ ಮಾನವಹಕ್ಕುಗಳ ಆಯೋಗಕ್ಕೆ ವಹಿಸಿಕೊಡಲಾಯಿತು. ಡಿಸೆಂಬರ್ 10, 1948ರಲ್ಲಿ ಎಲ್ಲಾ ಜನಾಂಗಗಳು ಹಾಗೂ ರಾಷ್ಟ್ರಗಳಿಗೂ ಸಂಬಂಧಿಸಿದಂತೆ ಸಾಧನೆಯ ಸಮಾನ ಮಾನದಂಡವನ್ನಾಗಿ, ಮಹಾಧಿವೇಶನವು ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆಯನ್ನು ಅಂಗೀಕಾರ ಮಾಡಿದ್ದು ಅಂತರರಾಷ್ಟ್ರೀಯ ಮಾನವಹಕ್ಕುಗಳ ವಿಧೇಯಕದ ರಚನೆಯಲ್ಲಿ ಒಂದು ದೊಡ್ಡ ಹೆಜ್ಜೆಯಾಯಿತು.[3]

### *8. ವಿಶ್ವವ್ಯಾಪಿ ಘೋಷಣೆಯಲ್ಲಿ ಪ್ರಸಿದ್ಧಿಪಡಿಸಿರುವ ಹಕ್ಕುಗಳು ಯಾವುವು ?*

ಈ ಹಕ್ಕುಗಳನ್ನು ಸ್ಥೂಲವಾಗಿ ಎರಡು ಬಗೆಯಾಗಿ ವಿಭಾಗಿಸಬಹುದು. ಜೀವ, ಸ್ವಾತಂತ್ರ್ಯ ಹಾಗೂ ದೇಹರಕ್ಷಣೆಯ ಹಕ್ಕು, ಗುಲಾಮಗಿರಿ, ಚಿತ್ರಹಿಂಸೆ, ಸ್ವೇಚ್ಛಾನುಸಾರಿ ಬಂಧನ, ಸೆರೆವಾಸ ಮತ್ತು ಗಡೀಪಾರು ವಿರುದ್ಧ ರಕ್ಷಣೆ, ಶಾಸನದ ಮುಂದೆ ಸಮಾನತೆ, ನಿಷ್ಪಕ್ಷಪಾತ ವಿಚಾರಣೆಯ ಹಕ್ಕು, ಆಸ್ತಿ ಹೊಂದಿರುವ ಹಕ್ಕು, ರಾಜಕೀಯದಲ್ಲಿ ಪಾಲ್ಗೊಳ್ಳುವ ಹಕ್ಕು, ಮದುವೆಯಾಗುವ ಹಕ್ಕು, ವಿಚಾರ, ಆತ್ಮಸಾಕ್ಷಿ, ಧರ್ಮ, ಅಭಿಪ್ರಾಯ, ಅಭಿವ್ಯಕ್ತಿಯ ಮೂಲಭೂತ ಸ್ವಾತಂತ್ರ್ಯ, ಶಾಂತಿಯುತ ಸಮಾವೇಶ ಮತ್ತು ಸಂಘಟನೆಯ ಸ್ವಾತಂತ್ರ್ಯ - ಇವು ಮೊದಲ ವರ್ಗಕ್ಕೆ ಸೇರುತ್ತವೆ. ಎರಡನೆಯ ವರ್ಗದಲ್ಲಿ, ಅವನ/ಅವಳ ದೇಶದ ಸರ್ಕಾರದಲ್ಲಿ ನೇರವಾಗಿ ಅಥವಾ ಮುಕ್ತವಾಗಿ ಆಯ್ಕೆಗೊಂಡ ಪ್ರತಿನಿಧಿಗಳ ಮೂಲಕ ಪಾಲ್ಗೊಳ್ಳುವ ಹಕ್ಕು, ಉದ್ಯೋಗದ ಹಕ್ಕು, ಸಮಾನ ಕೆಲಸಕ್ಕೆ ಸಮಾನ ವೇತನ, ಕಾರ್ಮಿಕ ಸಂಘಟನೆಗಳನ್ನು ರಚಿಸುವ ಹಾಗೂ ಅವುಗಳಲ್ಲಿ ಸೇರಿಕೊಳ್ಳುವ ಹಕ್ಕು, ಒಂದು ಯಥೋಚಿತವಾದ ಜೀವನಮಟ್ಟದ ಹಕ್ಕು, ಶಿಕ್ಷಣದ ಹಕ್ಕು ಮತ್ತು ಸಾಂಸ್ಕೃತಿಕ ಜೀವನದಲ್ಲಿ ಮುಕ್ತವಾಗಿ ಭಾಗವಹಿಸುವ ಹಕ್ಕು ಮುಂತಾದ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳು ಸೇರುತ್ತವೆ.

ಘೋಷಣೆಯ ಮೊದಲನೇ ಕಲಮು, ಮನುಷ್ಯನ ಘನತೆಯ ಸಮಾನತೆಯ ನೆಲೆಯಲ್ಲಿ ಹಕ್ಕುಗಳು ಸರ್ವ ಮಾನ್ಯವೆಂಬುದನ್ನು ವ್ಯಕ್ತಪಡಿಸುತ್ತದೆ. ಎರಡನೇ ಕಲಮು, ಯಾವುದೇ ಬಗೆಯ ತಾರತಮ್ಯವಿಲ್ಲದೆ ಎಲ್ಲ ವ್ಯಕ್ತಿಗಳು ಈ ಹಕ್ಕುಗಳಿಗೆ ಅರ್ಹರಾಗಿರುತ್ತಾರೆಂಬುದನ್ನು ವ್ಯಕ್ತಪಡಿಸುತ್ತದೆ. ಮನುಕುಲಕ್ಕೆ ಸೇರಿದ ಎಲ್ಲ ಸದಸ್ಯರ ಅಂತರ್ಗತ ಘನತೆ, ಸಮಾನ ಹಾಗೂ ಪರಭಾರೆ ಮಾಡಲಾಗದ ಹಕ್ಕುಗಳಿಗೆ ಮಾನ್ಯತೆ ನೀಡುವಿಕೆಯಿಂದ ಪ್ರಾರಂಭವಾಗುವ, ಘೋಷಣೆಯ ಪ್ರಾಸ್ತಾವಿಕ ಭಾಗದಲ್ಲಿ, ಘೋಷಣೆಯಲ್ಲಿ ಪ್ರಸಿದ್ಧಪಡಿಸಿರುವ ಈ ಹಕ್ಕುಗಳಲ್ಲಿ ಅಂತರ್ಗತವಾಗಿರುವ ಮೂಲಭೂತ ತತ್ವಗಳನ್ನು ಸೇರಿಸಲಾಗಿದೆ. ವಿಶ್ವವ್ಯಾಪಿ ಘೋಷಣೆಯ ಪ್ರತಿಯೊಂದು ಕಲಮಿನ ಅರ್ಥವೇನೆಂಬುದನ್ನು ಈ ಪ್ರಕಟಣೆಯ ಎರಡನೇ ಭಾಗದಲ್ಲಿ ವಿವರಿಸಲಾಗಿದೆ.

### *9. ಆ ಸಂದರ್ಭದಲ್ಲಿ ವಿಶ್ವಸಂಸ್ಥೆಯ ಸದಸ್ಯರಾಗಿರದಿದ್ದ ರಾಷ್ಟ್ರಗಳು ವಿಶ್ವವ್ಯಾಪಿ ಘೋಷಣೆಯನ್ನು ಒಪ್ಪಿಕೊಳ್ಳುತ್ತಾರೆಯೆ ?*

ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆ ಶಾಸನಾತ್ಮಕ ಬದ್ಧತೆಯನ್ನು ಹೊಂದಿಲ್ಲದಿದ್ದಾಗ್ಯೂ ವರ್ಷಗಳು ಕಳೆದಂತೆ ಅದರ ಮುಖ್ಯ ತತ್ವಗಳು ಎಲ್ಲ ರಾಷ್ಟ್ರಗಳೂ ಗೌರವಿಸಲೇಬೇಕಾದ ಮಾನದಂಡದ ಸ್ಥಾನವನ್ನು ಪಡೆದುಕೊಂಡಿವೆ. ಈ ಘೋಷಣೆಯನ್ನು ಅಂಗೀಕರಿಸಿದಾಗ ವಿಶ್ವಸಂಸ್ಥೆಯಲ್ಲಿ ಕೇವಲ ಐವತ್ತೊಂದು ಸದಸ್ಯ ರಾಷ್ಟ್ರಗಳು ಮಾತ್ರ ಇದ್ದವು. ಆ ಕಾಲದಿಂದ ಈ ಸಂಖ್ಯೆ ಈಗ ಮೂರುಪಟ್ಟಿಗಿಂತ ಹೆಚ್ಚಾಗಿದೆ.[4] ಘೋಷಣೆಯು ಸಾರ್ವತ್ರಿಕ ಒಪ್ಪಿಗೆಗೆ ಪಾತ್ರವಾಗಿದ್ದು, ಮಾನವಹಕ್ಕುಗಳ ವಿಚಾರದಲ್ಲಿ ಅದು ಎಲ್ಲ ರಾಷ್ಟ್ರಗಳಿಗೂ ಅನ್ವಯಿಸುವ ಸರ್ವಸಮಾನ ಆಧಾರವಾಗಿದೆಯೆಂಬುದಕ್ಕೆ ಈ ದಿಸೆಯಲ್ಲಿ ಅದರ ನಿರಂತರ ಪ್ರಭಾವ ಹಾಗೂ ಬಳಕೆಯೇ ಸಾಕ್ಷಿಯಾಗಿದೆ.

ಲಿಖಿತ ಸಂವಿಧಾನ ಮತ್ತು ವಿಶ್ವವ್ಯಾಪಿ ಘೋಷಣೆಗಳು ಜತೆಗೂಡಿ 1950ಹಾಗೂ 1960ರ ದಶಗಳಲ್ಲಿ ವಸಾಹತುಶಾಹಿಯ ಆಡಳಿತಕ್ಕೆ ಒಳಪಟ್ಟಿದ್ದ, ಲಕ್ಷಾವಧಿ ಜನರಿಗೆ ಸ್ವಯಂನಿರ್ಧಾರದ ಹಕ್ಕನ್ನು ಪಡೆದುಕೊಳ್ಳುವಲ್ಲಿ, ಸ್ಫೂರ್ತಿಯೂ ಸಾಧನವೂ ಆದವು.

ವಿಶ್ವವ್ಯಾಪಿ ಘೋಷಣೆಯು, ಮನುಕುಲದ ಎಲ್ಲ ಸದಸ್ಯರ ಪರಭಾರೆ ಮಾಡಲಾಗದ ಹಾಗೂ ಅನುಲ್ಲಂಘನೀಯ ಹಕ್ಕುಗಳಿಗೆ ಸಂಬಂಧಿಸಿದಂತೆ ವಿಶ್ವರಾಷ್ಟ್ರ ಸಮೂಹದ ಸಮಾನ ತಿಳಿವಳಿಕೆಯನ್ನು ಪ್ರಸ್ತಾಪಿಸಿದೆಯೆಂಬ ಮತ್ತು ಅದು ಅಂತರರಾಷ್ಟ್ರೀಯ ಸಮುದಾಯದ ಸದಸ್ಯರಿಗೆಲ್ಲ ಒಂದು ಬದ್ಧತೆಯನ್ನು ಕಲ್ಪಿಸುತ್ತದೆಯೆಂಬ ಅಂತರರಾಷ್ಟ್ರೀಯ ಸಮುದಾಯದ ಒಟ್ಟಭಿಪ್ರಾಯ 1968ರಲ್ಲಿ ತೆಹರಾನ್‌ನ ಮಾನವಹಕ್ಕುಗಳ ಮೇಲಿನ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಪ್ರತಿಬಿಂಬಗೊಂಡಿತು.[5] ವಿಶ್ವವ್ಯಾಪಿ ಘೋಷಣೆಯು ಎಲ್ಲ ರಾಷ್ಟ್ರಗಳಿಗೂ ಜನಾಂಗಗಳಿಗೂ ಸಾಧನೆಯ ಸಮಾನ ಮಾನದಂಡವನ್ನು ನಿಗದಿಪಡಿಸಿದೆಯೆಂದೂ[6] ಮತ್ತು ತಮ್ಮ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ವ್ಯವಸ್ಥೆಗಳನ್ನು ಗಣನೆಗೆ ತಾರದೆ ಎಲ್ಲ ಮಾನವಹಕ್ಕುಗಳನ್ನೂ ಮೂಲಭೂತ ಸ್ವಾತಂತ್ರ್ಯಗಳನ್ನೂ ಸಂವರ್ಧಿಸಿ ಸಂರಕ್ಷಿಸುವುದು ರಾಷ್ಟ್ರಗಳ ಕರ್ತವ್ಯವೆಂದೂ, ಇಪ್ಪತ್ತೈದು ವರ್ಷಗಳ ನಂತರದ ಮಾನವಹಕ್ಕುಗಳ ವಿಶ್ವಸಮ್ಮೇಳನದಲ್ಲಿ (ವಿಯೆನ್ನಾ, ಆಸ್ಟ್ರಿಯಾ, 14-25 ಜೂನ್ 1993) ರಾಷ್ಟ್ರಗಳು ಪುನಃ ದೃಢೀಕರಿಸಿದುವು.[7]

### *10. ಅಂತರರಾಷ್ಟ್ರೀಯ ಮಾನವಹಕ್ಕುಗಳ ವಿಧೇಯಕಕ್ಕೆ ಪೂರಕವಾದ ಉಳಿದ ದಸ್ತಾವೇಜುಗಳು ಯಾವುವು ?*

ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆ ಉದ್ದಿಶ್ಯದ ಮೊದಲ ಭಾಗ. ಘೋಷಣೆಯ ವಿಧಿಗಳ ತಾತ್ಪರ್ಯವನ್ನು ವಿಸ್ತಾರಗೊಳಿಸಲು ಯೋಜಿಸಿದ ಉಳಿದ

ಭಾಗಗಳು ಪೂರ್ಣಗೊಳ್ಳಲು ಅನೇಕ ವರ್ಷಗಳು ಹಿಡಿದವು. 16 ಡಿಸೆಂಬರ್ 1966ರಲ್ಲಿ ವಿಶ್ವಸಂಸ್ಥೆಯ ಮಹಾಧಿವೇಶನವು ಎರಡು ಒಡಂಬಡಿಕೆಗಳನ್ನು ಸ್ವೀಕಾರ ಮಾಡಿತು - ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ (ಐ.ಸಿ.ಇ.ಎಸ್.ಸಿ.ಆರ್.) ಮೇಲಿನ ಒಡಂಬಡಿಕೆ ಮತ್ತು ನಾಗರಿಕ ಹಾಗೂ ರಾಜಕೀಯ ಹಕ್ಕುಗಳ ಮೇಲಿನ ಅಂತರರಾಷ್ಟ್ರೀಯ ಒಡಂಬಡಿಕೆ (ಐ.ಸಿ.ಸಿ.ಪಿ.ಆರ್.) ಅಲ್ಲದೆ ವ್ಯಕ್ತಿಗಳಿಗೆ ಒಡಂಬಡಿಕೆಗಳಲ್ಲಿನ ತಮ್ಮ ಹಕ್ಕುಗಳ ಉಲ್ಲಂಘನೆಯ ಬಗ್ಗೆ ದೂರು ನೀಡಲು ಅವಕಾಶ ಮಾಡುವ, ಐ.ಸಿ.ಸಿ.ಪಿ.ಆರ್. ನ ಐಚ್ಛಿಕ ಶಿಷ್ಟಾಚಾರ ಪತ್ರ. ಈ ದಸ್ತಾವೇಜುಗಳನ್ನು ಅಂಗೀಕರಿಸುವ ಮೂಲಕ ಅಂತರರಾಷ್ಟ್ರೀಯ ಸಮುದಾಯವು, ವಿಶ್ವವ್ಯಾಪಿ ಘೋಷಣೆಯಲ್ಲಿ ನಿರ್ದಿಷ್ಟಪಡಿಸಿರುವ ಪ್ರತಿಯೊಂದು ಹಕ್ಕಿನ ತಾತ್ಪರ್ಯವನ್ನಷ್ಟೆ ಅಲ್ಲದೆ ಅವುಗಳನ್ನು ಅನುಷ್ಠಾನಕ್ಕೆ ತರುವ ಮಾರ್ಗೋಪಾಯಗಳನ್ನು ಸಹ ಒಪ್ಪಿಕೊಂಡವು. ಇದು ಡಿಸೆಂಬರ್ 1989ರಲ್ಲಿ ಐ.ಸಿ.ಸಿ.ಪಿ.ಆರ್.ಗೆ ಸೇರಿದಂತೆ ಮರಣದಂಡನೆಯನ್ನು ರದ್ದುಪಡಿಸಲು ಉದ್ದೇಶಿಸಿದ, ಎರಡನೇ ಐಚ್ಛಿಕ ಶಿಷ್ಟಾಚಾರ ಪತ್ರವನ್ನು ಮಹಾಧಿವೇಶನವು ಅಂಗೀಕರಿಸಿದಾಗ ಇನ್ನೂ ಹೆಚ್ಚು ವಿಸ್ತಾರಗೊಂಡಿತು.

ನಾಗರೀಕ ಮತ್ತು ರಾಜಕೀಯ ಹಕ್ಕುಗಳ ಹಾಗೂ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ಅನುಭೋಗ ಅಂತರಸಂಬಂಧಿ ಮತ್ತು ಅಂತರಾವಲಂಬಿ ಎಂಬ 1950ರ ಮಹಾಧಿವೇಶನದ ನಿರ್ಣಯಕ್ಕೆ ಈ ಎರಡು ಒಡಂಬಡಿಕೆಗಳ ಅಂಗೀಕಾರವು ಸಮ್ಮತಿ ನೀಡಿತು.

### *11. ಅಂತರರಾಷ್ಟ್ರೀಯ ಒಡಂಬಡಿಕೆಗಳಿಗೂ, ವಿಶ್ವಮಾನ್ಯ ಘೋಷಣೆಗೂ ಇರುವ ವ್ಯತ್ಯಾಸಗಳೇನು ?*

ವಿಶ್ವಮಾನ್ಯ ಘೋಷಣೆಗೂ ಒಡಂಬಡಿಕೆಗಳಿಗೂ ಇರುವ ವ್ಯತ್ಯಾಸವೇನೆಂದರೆ, ಒಡಂಬಡಿಕೆಗಳು, ಅದಕ್ಕೆ ಭಾಗಸ್ಥರಾದ ರಾಷ್ಟ್ರಗಳ ಮಧ್ಯೆ ಶಾಸನಬದ್ಧವಾದ ಒಪ್ಪಂದಗಳಾಗಿರುತ್ತವೆ ಮತ್ತು ಒಡಂಬಡಿಕೆಯನ್ವಯ ಬದ್ಧತೆಗನುಸಾರವಾಗಿ ಕಾಲಕಾಲಕ್ಕೆ ಅನುಪಾಲನಾ ವರದಿಗಳನ್ನು ಒಪ್ಪಿಸುವುದೂ ಸೇರಿದಂತೆ, ಅವುಗಳ ಅನುಷ್ಠಾನಕ್ಕೆ ಸಂಬಂಧಿಸಿದ ವಿಧಿವಿಧಾನಗಳನ್ನು ಗೌರವಿಸಲು ಆ ಪ್ರಕಾರ ಅವು ಬದ್ಧವಾಗಿವೆ. ಎರಡೂ ಒಡಂಬಡಿಕೆಗಳು 1976ರಿಂದ ಜಾರಿಗೆ ಬಂದಿವೆ. ಅಲ್ಲಿಂದೀಚೆಗೆ ಸುಮಾರು 130 ರಾಷ್ಟ್ರಗಳು ಐ.ಸಿ.ಇ.ಎಸ್.ಸಿ.ಆರ್. ಮತ್ತು ಐ.ಸಿ.ಸಿ.ಪಿ.ಆರ್.[8] ಗಳನ್ನು ಒಪ್ಪಿಕೊಂಡಿವೆ. ಐ.ಸಿ.ಸಿ.ಪಿ.ಆರ್.ನ ಮೊದಲ ಐಚ್ಛಿಕ ಶಿಷ್ಟಾಚಾರ ಕೂಡ 1976ರಲ್ಲಿ ಜಾರಿಗೆ ಬಂತು. ಇಲ್ಲಿಯವರೆಗೆ ಅದನ್ನು ಸುಮಾರು ತೊಂಬತ್ತು ರಾಷ್ಟ್ರಗಳು[9] ಸ್ಥಿರೀಕರಿಸಿವೆ. 1991ರಲ್ಲಿ ಜಾರಿಗೆ ಬಂದ ಎರಡನೇ ಐಚ್ಛಿಕ ಶಿಷ್ಟಾಚಾರವನ್ನು ಈವರೆಗೆ ಸುಮಾರು ಮೂವತ್ತು[10] ರಾಷ್ಟ್ರಗಳು ಸ್ಥಿರೀಕರಿಸಿವೆ.

## *12. ಸಾಮಾಜಿಕ ಹಾಗೂ ರಾಜಕೀಯ ಹಕ್ಕುಗಳಿಗೆ (ಐ.ಸಿ.ಸಿ.ಪಿ.ಆರ್.) ಸಂಬಂಧಿಸಿದಂತೆ, ಅಂತರರಾಷ್ಟ್ರೀಯ ಒಡಂಬಡಿಕೆಗಳಿಂದ ರಕ್ಷಿಸಲ್ಪಟ್ಟಿರುವ ಹಕ್ಕುಗಳು ಯಾವುವು ?*

ಜೀವ, ಸ್ವಕೀಯತೆ, ನ್ಯಾಯಯುತ ವಿಚಾರಣೆ, ಅಭಿವ್ಯಕ್ತಿ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ, ಚಿತ್ರಹಿಂಸೆಯಿಂದ ರಕ್ಷಣೆ ಮತ್ತು ಶಾಸನಬದ್ಧ ಸಮಾನತೆ ಇವುಗಳೂ ಸೇರಿದಂತೆ ವಿಶ್ವಮಾನ್ಯ ಘೋಷಣೆಯಲ್ಲಿ ಗುರುತಿಸಲ್ಪಟ್ಟ ರಾಜಕೀಯ ಹಾಗೂ ಸಾಮಾಜಿಕ ಹಕ್ಕುಗಳನ್ನು ಈ ಒಡಂಬಡಿಕೆ ವಿಸ್ತಾರಗೊಳಿಸಿದೆ. ಜನಾಂಗ, ವರ್ಣ, ಲಿಂಗ, ಭಾಷೆ, ಧರ್ಮ ಅಥವಾ ಸಾಮಾಜಿಕ ಗಣನೆಗಳನ್ನು ಆಧರಿಸಿದ ತಾರತಮ್ಯವನ್ನು ಒಳಗೊಳ್ಳದಿದ್ದಲ್ಲಿ ಕೆಲವೊಂದು ಹಕ್ಕುಗಳನ್ನು ರಾಷ್ಟ್ರಜೀವನಕ್ಕೆ ಅಪಾಯ ಒದಗಿದ ಸಾರ್ವತ್ರಿಕ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ



ಅನಾಮತ್ತುಗೊಳಿಸಬಹುದು. ಯಾವುದೇ ರಾಷ್ಟ್ರ ಆ ರೀತಿ ಮಾಡಲು ಇಚ್ಛಿಸಿದಲ್ಲಿ, ಅದು ವಿಶ್ವಸಂಸ್ಥೆಯ ಮಹಾಕಾರ್ಯದರ್ಶಿಗೆ ತಕ್ಷಣವೇ ತಿಳಿಸತಕ್ಕದ್ದು. ಆ ರೀತಿಯಲ್ಲಿ ಘೋಷಿಸಲ್ಪಟ್ಟ ತುರ್ತುಪರಿಸ್ಥಿತಿಗಳು, ದುರದೃಷ್ಟವಶಾತ್ ಮಾನವಹಕ್ಕುಗಳ ಘೋರ ಉಲ್ಲಂಘನೆಗಳು ಸಂಭವಿಸಬಹುದಾದ ವಾತಾವರಣವನ್ನು ನಿರ್ಮಿಸುತ್ತವೆ. ಶಾಂತಿ ಅಥವಾ ಯುದ್ಧದ ಯಾವುದೇ ಸಂದರ್ಭದಲ್ಲೂ ಈ ಕೆಳಗಿನ ಮೂಲಭೂತ ಹಕ್ಕುಗಳ ರದ್ದತಿಗೆ ಒಡಂಬಡಿಕೆಯಡಿಯಲ್ಲಿ ಪರವಾನಗಿಯಿಲ್ಲ. ಜೀವದಹಕ್ಕು, ಶಾಸನದ ಅಡಿಯಲ್ಲಿ ಮಾನ್ಯತೆ, ಚಿತ್ರಹಿಂಸೆ ಮತ್ತು ಗುಲಾಮಗಿರಿಯ ವಿರುದ್ಧ ರಕ್ಷಣೆ, ಆಲೋಚನೆ, ಅಂತಸ್ಸಾಕ್ಷಿ ಮತ್ತು ಧಾರ್ಮಿಕ ಸ್ವಾತಂತ್ರ್ಯ, ಒಂದು ಒಪ್ಪಂದದ ಪ್ರಕಾರ ನಡೆದುಕೊಳ್ಳಲು ಅಸಮರ್ಥನಾದನೆಂಬ ಒಂದೇ ಕಾರಣಕ್ಕಾಗಿ ಖೈದು

ಮಾಡದಿರುವ ಹಕ್ಕು ಮತ್ತು ಹಾಗೆ ಮಾಡಿದ ಸಂದರ್ಭದಲ್ಲಿ, ಶಿಕ್ಷಾರ್ಹವಾಗಿರದಿದ್ದ ಅಪರಾಧಕ್ಕಾಗಿ, ತಪ್ಪಿತಸ್ಥನನ್ನಾಗಿ ಪರಿಗಣಿಸದಿರುವ ಹಕ್ಕು.

### *13. ಐ.ಸಿ.ಸಿ.ಪಿ.ಆರ್.ನ ಅಡಿಯಲ್ಲಿ ಅಳವಡಿಸಿರುವ ಅನುಷ್ಠಾನದ ವಿಧಾನಗಳೇನು ?*

ಒಡಂಬಡಿಕೆಯ 28ನೇ ವಿಧಿ ಭಾಗಸ್ಥ ರಾಷ್ಟ್ರಗಳಿಂದ ಚುನಾಯಿತರಾದ ಮತ್ತು ನಾಮನಿರ್ದೇಶನ ಹೊಂದಿದ ಹದಿನೆಂಟು ಸ್ವತಂತ್ರರಾದ ತಜ್ಞರಿಂದ ಒಡಗೂಡಿದ ಮಾನವಹಕ್ಕುಗಳ ಸಮಿತಿಯ ಸ್ಥಾಪನೆಗೆ ಅವಕಾಶ ಮಾಡಿದೆ. ಅವರುಗಳು ತಮ್ಮ ರಾಷ್ಟ್ರಗಳ ಪರವಾಗಿಯೇನೂ ಕಾರ್ಯನಿರ್ವಹಿಸುವುದಿಲ್ಲ, ಬದಲು ವೈಯಕ್ತಿಕ ನೆಲೆಯಲ್ಲಿ ಕಾರ್ಯ ನಿರ್ವಹಿಸುತ್ತಾರೆ. ಮಾನವಹಕ್ಕುಗಳ ಸಮಿತಿಯು ಒಡಂಬಡಿಕೆಯ ಅನುಷ್ಠಾನವನ್ನು ಹಲವು ಬಗೆಯಿಂದ ನಿರ್ದೇಶಿಸುತ್ತದೆ. ಸಮಿತಿಯು ಭಾಗಸ್ಥ ದೇಶಗಳಿಂದ ಬಂದ ನಿಯತಕಾಲಿಕ ಅನುಪಾಲನಾ ವರದಿಗಳನ್ನು ಪರಿಶೀಲಿಸುತ್ತದೆ (ಕಲಮು 40). ಪ್ರತಿ ರಾಷ್ಟ್ರವೂ ಒಡಂಬಡಿಕೆಗೆ ಭಾಗಿಯಾದ ಒಂದು ವರ್ಷದ ಒಳಗೆ, ತದನಂತರ ಸಮಿತಿಯ ನಿರ್ಧಾರದಂತೆ, ಆ ರೀತಿಯ ವರದಿಗಳನ್ನು ಕಳುಹಿಸತಕ್ಕದ್ದು. ವರದಿಗಳನ್ನು ಸಂಬಂಧಿಸಿದ ದೇಶಗಳ ಪ್ರತಿನಿಧಿಗಳ ಸಮಕ್ಷಮದಲ್ಲಿ, ಬಹಿರಂಗವಾಗಿ ಪರಿಶೀಲಿಸುವುದಲ್ಲದೆ ಅವರುಗಳನ್ನು ಪ್ರಶ್ನಿಸಲೂಬಹುದಾಗಿದೆ. ಪ್ರತಿಯೊಂದು ದೇಶದ ವರದಿಯನ್ನು ಮುಗಿಸಿದಾಗಲೂ, ಚರ್ಚೆಯ ಮುಖ್ಯಾಂಶಗಳನ್ನು ಹಾಗೆಯೇ ಸಂಬಂಧಿಸಿದ ಸರ್ಕಾರಕ್ಕೆ, ಒಡಂಬಡಿಕೆಯನ್ನು ಇನ್ನೂ ಉತ್ತಮವಾಗಿ ಅನುಷ್ಠಾನಗೊಳಿಸುವ ಮಾರ್ಗಗಳ ಬಗ್ಗೆ ಸಲಹೆಗಳನ್ನು ಪ್ರತಿಬಿಂಬಿಸುವ, ಸಮೀಕ್ಷೆಯನ್ನು ಸಮಿತಿ ಹೊರಡಿಸುತ್ತದೆ.

41ನೇ ಕಲಮಿನ ಅನ್ವಯ ಉಭಯ ದೇಶಗಳು ಸಮಿತಿಗೆ ಅಂಥಾ ಪಾತ್ರವನ್ನು ಮಾನ್ಯ ಮಾಡಿ ಒಂದು ವಿಶೇಷ ಘೋಷಣೆಯನ್ನು ಮಾಡಿದ್ದ ಪಕ್ಷದಲ್ಲಿ ಸಮಿತಿಯು ಒಂದು ದೇಶದ ಬಗ್ಗೆ ಇನ್ನೊಂದು ದೇಶದ ದೂರುಗಳನ್ನು ಪರಿಶೀಲಿಸಬಹುದು. ಈವರೆಗೆ ಆ ರೀತಿಯ ದೂರುಗಳು ಸ್ವೀಕೃತವಾಗಿಲ್ಲ. ಅದರ 'ಸಾರ್ವತ್ರಿಕ ವ್ಯಾಖ್ಯೆ'ಯ ಮೂಲಕ ಮಾನವಹಕ್ಕು ಸಮಿತಿ ಒಡಂಬಡಿಕೆಯ ನಿರ್ದಿಷ್ಟ ಕಲಮುಗಳ ತಾತ್ಪರ್ಯ ಹಾಗೂ ಅರ್ಥವನ್ನು ವಿವರಿಸುತ್ತದೆ. ಇದು ಒಡಂಬಡಿಕೆಗಳ ನ್ಯಾಯಶಾಸ್ತ್ರವನ್ನು ಸ್ಥಿರಪಡಿಸಿ, ಭಾಗಸ್ಥ ದೇಶಗಳಿಗೆ ಒಡಂಬಡಿಕೆಯನ್ವಯ ತಮ್ಮ ಕರ್ತವ್ಯಾನುಸರಣೆಗೆ ಹಾಗೂ ದೇಶೀಯ ವರದಿಗಳ ತಯಾರಿಗೆ ಮಾರ್ಗದರ್ಶನವನ್ನು ನೀಡುತ್ತದೆ.

ಸಮಿತಿಯು ಆರ್ಥಿಕ ಹಾಗೂ ಸಾಮಾಜಿಕ ಪರಿಷತ್ತಿನ ಮೂಲಕ (ಇ.ಸಿ.ಓ.ಎಸ್.ಓ.ಸಿ.) ವಿಶ್ವಸಂಸ್ಥೆಯ ಮಹಾಧಿವೇಶನಕ್ಕೆ ತನ್ನ ಕರ್ತವ್ಯ ನಿರ್ವಹಣೆಯ ಬಗ್ಗೆ ವಾರ್ಷಿಕ ವರದಿ ಸಲ್ಲಿಸುತ್ತದೆ.

### *14. ಈ ವರದಿ ವಿಧಾನವು ಎಷ್ಟು ಪರಿಣಾಮಕಾರಿಯಾಗಿದೆ ?*

ಆ ಬಗ್ಗೆ ಮಾಡಬಹುದಾದ ಟೀಕೆಗಿಂತ ಹೆಚ್ಚಿನ ಅಧಿಕಾರವೇನು ಸಮಿತಿಗೆ ಇಲ್ಲದಿರುವುದರಿಂದ ಹಾಗೂ ಮಾನವಹಕ್ಕುಗಳ ರಕ್ಷಣೆ ಅಂತಿಮವಾಗಿ ರಾಷ್ಟ್ರಮಟ್ಟದ ಅನುಪಾಲನೆಯನ್ನೇ ಅವಲಂಬಿಸಿರುವುದರಿಂದ, ಮಾನವಹಕ್ಕುಗಳ ಸಮಿತಿಯ ಅಧಿಕಾರವೇ ಸೀಮಿತವಾಗಿದೆ. ಆದಾಗ್ಯೂ ಮಾನವಹಕ್ಕುಗಳ ಬಗ್ಗೆ ತಮ್ಮ ಕಾರ್ಯನಿರ್ವಹಣೆ ಸಾರ್ವತ್ರಿಕವಾಗಿ ಬಹಿರಂಗಗೊಳ್ಳುವ ವಿಷಯದಲ್ಲಿ ಸರ್ಕಾರಗಳು ಸಂವೇದನಾಶೀಲವಾಗಿರುವುದರಿಂದ ವರದಿಗಳ ಬಹಿರಂಗ ಪರಿಶೀಲನೆಯಿಂದ ಒಂದು ಮನವೊಲಿಕೆಯ ಮೌಲ್ಯ ಪ್ರಾಪ್ತಿಯಾಗುತ್ತದೆ. ಅದಕ್ಕಿಂತ ಹೆಚ್ಚಾಗಿ, ವರದಿ ಸಲ್ಲಿಸುವ ದೇಶಗಳ ಜತೆ ಒಂದು ರಚನಾತ್ಮಕ ಸಂವಾದವನ್ನು ನಿರ್ಮಿಸುವುದು ಮತ್ತು ಅದರ ಮೂಲಕ, ಒಡಂಬಡಿಕೆಯ ಕಲಮುಗಳನ್ನು ರಾಷ್ಟ್ರಗಳು ಅನುಪಾಲಿಸುವಂತೆ ಪ್ರೋತ್ಸಾಹಿಸುವುದೇ ಸಮಿತಿಯ ಪ್ರಮುಖ ಉದ್ದಿಶ್ಯವಾಗಿದೆ. ಪ್ರಮುಖ ಸ್ಥಳೀಯ ಭಾಷೆಗಳಿಗೆ ತರ್ಜುಮೆ ಮಾಡಿ, ಆಡಳಿತಾತ್ಮಕ ಹಾಗೂ ನ್ಯಾಯಾಧಿಕರಣಗಳ ಗಮನಕ್ಕೆ ಒಡಂಬಡಿಕೆಗಳ ಮೂಲಪಾಠವನ್ನು ತರುವಂತೆ ವರದಿ ಸಲ್ಲಿಸುವ ದೇಶಗಳನ್ನು ಒತ್ತಾಯಿಸಲಾಗುತ್ತದೆ.

### *15. ಮಾನವಹಕ್ಕುಗಳ ಸಮಿತಿಯು ವ್ಯಕ್ತಿಗತ ದೂರಗಳನ್ನು ಪರಿಶೀಲಿಸಬಹುದೇ ?*

ಸಂಬಂಧಿಸಿದ ದೇಶವು 'ಐಚ್ಛಿಕ ಶಿಷ್ಟಾಚಾರ'ವನ್ನು ಸ್ಥಿರೀಕರಿಸಿದ್ದರೆ ಐ.ಸಿ.ಸಿ.ಪಿ.ಆರ್.ನ ಐಚ್ಛಿಕ ಶಿಷ್ಟಾಚಾರದ ವಿಧಿಗಳನ್ವಯ, ಒಡಂಬಡಿಕೆಯಲ್ಲಿನ ತಮ್ಮ ಹಕ್ಕುಗಳು ಉಲ್ಲಂಘನೆಯಾಗಿವೆಯೆಂದು ಆಪಾದಿಸಿದ ದೂರುಗಳನ್ನು ವ್ಯಕ್ತಿಗಳಿಂದ ಸಮಿತಿಯು ಸ್ವೀಕರಿಸಬಹುದು. ಸಮಿತಿಗೆ ಬರವಣಿಗೆಯ ಮೂಲಕ ದೂರುಗಳನ್ನು ನೀಡಬಹುದು. ಒಬ್ಬ ವ್ಯಕ್ತಿಯು ಸ್ವತಃ ಸಮಿತಿಗೆ ಅಹವಾಲು ಸಲ್ಲಿಸಲು ಅಸಮರ್ಥನಿದ್ದಲ್ಲಿ ಅವನ ಪರವಾಗಿ ಮತ್ತೊಬ್ಬ ವ್ಯಕ್ತಿಯು ಮನವಿ ಸಲ್ಲಿಸಬಹುದು. ಸಮಿತಿಯು ಈ ಪ್ರಕರಣವು ಪರಿಶೀಲನಾರ್ಹವೇ ಎಂಬುದನ್ನು ವಿಮರ್ಶಿಸುತ್ತದೆ. ನಂತರ ಕೇವಲ ಸಮಿತಿಯ ಸದಸ್ಯರು ಮಾತ್ರವಿರುವ ಗೌಪ್ಯ ಸಭೆಗಳಲ್ಲಿ ಅದರ ನಿಜಾಂಶಗಳನ್ನೂ ಸ್ವೀಕಾರಾರ್ಹತೆಯನ್ನೂ ಪರಿಶೀಲಿಸಲಾಗುತ್ತದೆ. ಪರಿಶೀಲನಾರ್ಹತೆಯನ್ನು ನಿರ್ಧರಿಸಲು ದೂರು ಅನಾಮಿಕವಾಗಿರಬಾರದು. ಸಾಧ್ಯವಿದ್ದ ಎಲ್ಲ ಆಂತರಿಕ ಪರಿಹಾರಗಳನ್ನು ಪ್ರಯತ್ನಿಸಿ ಮುಗಿಸಿರಬೇಕು.

ಮನವಿಯ ಗೌಪ್ಯ ಪರಿಶೀಲನೆಯ ನಂತರ ಯಾವುದೇ ವ್ಯಕ್ತಿಗತ ದೂರು, ಪರಿಶೀಲನಾರ್ಹವೆಂದು ಕಂಡುಬಂದಲ್ಲಿ ಅದನ್ನು ಸಂಬಂಧಿಸಿದ ಭಾಗಸ್ಥ ದೇಶದ ಗಮನಕ್ಕೆ ತರಲು ಸಮಿತಿಗೆ ಅಧಿಕಾರ ನೀಡಲಾಗಿದೆ. ಆ ದೇಶವು ಆರು ತಿಂಗಳೊಳಗೆ, ಸಮಿತಿಗೆ ವಿಷಯದ ಬಗ್ಗೆ ಮತ್ತು ಅದು ಕೈಗೊಂಡಿರಬಹುದಾದ ಪರಿಹಾರವೇನಾದರೂ ಇದ್ದಲ್ಲಿ ಅದರ ಬಗ್ಗೆ ಒಂದು ಲಿಖಿತ ವಿವರಣೆಯನ್ನು

ನೀಡಲು ಒಪ್ಪಿಕೊಳ್ಳುತ್ತದೆ. ಮೂಲತಃ ಮನವಿ ಮಾಡಿದವರು ಸಂತ್ರಸ್ಥ ವ್ಯಕ್ತಿ, ಸಂಬಂಧಿಸಿದ ದೇಶ, ಲಿಖಿತ ವಿವರಣೆ ಒದಗಿಸುವ ಎಲ್ಲ ಮಾಹಿತಿಗಳನ್ನು ಸಮಿತಿ ಗಣನೆಗೆ ತೆಗೆದುಕೊಳ್ಳುತ್ತದೆ. ಸಂಬಂಧಿಸಿದ ದೇಶವು ಆ ಬಗ್ಗೆ ಕ್ರಮ ತೆಗೆದುಕೊಳ್ಳುತ್ತದೆಯೆಂಬ ನಿರೀಕ್ಷೆಯಿಂದ ಸಮಿತಿ ಪ್ರಕರಣದ ನಿಜಾಂಶಗಳ ಬಗ್ಗೆ ತನ್ನ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಭಾಗಸ್ಥ ದೇಶಕ್ಕೆ ಮತ್ತು ಸಂಬಂಧಿಸಿದ ವ್ಯಕ್ತಿಗೆ ಕಳಿಸಿಕೊಡುತ್ತದೆ. ಅಲ್ಲದೆ ಸಮಿತಿ ತನ್ನ ನಿರ್ಧಾರ ಹಾಗೂ ಅಭಿಪ್ರಾಯಗಳನ್ನು ಬಹಿರಂಗಪಡಿಸುತ್ತದೆ.

### *16. ಸಮಿತಿಯ 'ಅಭಿಪ್ರಾಯ'ಗಳನ್ನು ದೇಶಗಳು ಗೌರವಿಸುತ್ತವೆಯೆ?*

ಮಾನವಹಕ್ಕುಗಳ ಸಮಿತಿ ತನ್ನ ಅಭಿಪ್ರಾಯಗಳನ್ನು ಶಾಸನಬದ್ಧ ತೀರ್ಪಿನ ರೂಪದಲ್ಲಿ ವ್ಯಕ್ತಪಡಿಸುತ್ತದೆ, ಆದರೆ ಅದನ್ನು ಶಾಸನಬದ್ಧವಾಗಿ ಜಾರಿಗೊಳಿಸುವ ವಿಧಾನಗಳೇನೂ ಜಾರಿಯಲ್ಲಿಲ್ಲ. ಹಾಗಾಗಿ ಅನುಪಾಲನೆಯ ಜವಾಬ್ದಾರಿ ಸಂಬಂಧಿಸಿದ ದೇಶಗಳ ಮೇಲಿದೆ. ದೇಶಗಳು ಒಡಂಬಡಿಕೆಯನ್ವಯದ ಕರ್ತವ್ಯಗಳನ್ನು ಪ್ರಾಮಾಣಿಕವಾಗಿ ನಿರ್ವಹಿಸುವ ಸದಿಚ್ಛೆಯಿಂದ ಮತ್ತು ತಮ್ಮ ಅಂತರರಾಷ್ಟ್ರೀಯ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವ ಆಸೆ ಮುಂತಾದ ಅನೇಕ



ಕಾರಣಗಳಿಗಾಗಿ ಅವುಗಳನ್ನು ಪಾಲಿಸುತ್ತವೆ. ಅನುಪಾಲನೆಯಾದಾಗ್ಯೂ, ಎಲ್ಲಾ ಸಂದರ್ಭಗಳಲ್ಲೂ ಅದು ಪರಿಪೂರ್ಣವಾಗಿರದೆ ಒಲ್ಲದ ಮನಸ್ಸಿನಿಂದ ಕೂಡಿರಬಹುದು. ನೆದರ್‌ಲ್ಯಾಂಡ್ಸ್‌ನ ವಿರುದ್ಧದ ಒಂದು ಪ್ರಕರಣದಲ್ಲಿ, ಸಮಿತಿಗೆ ಕಂಡುಬಂದ ಒಂದು ಉಲ್ಲಂಘನೆಯನ್ನು ನೆದರ್‌ಲ್ಯಾಂಡ್ಸ್ ಒಪ್ಪಿಕೊಳ್ಳಲಿಲ್ಲ. ಆದರೂ ಸಮಿತಿಯ ಮೇಲಿನ ಗೌರವದಿಂದಾಗಿ, ಫಿರ್ಯಾದಿಗೆ ವಿಶೇಷ ಸಹಾಯಧನವನ್ನು ನೀಡಿತು.

ಸಮಿತಿಯ ಅಭಿಪ್ರಾಯಗಳನ್ನು ಭಾಗಸ್ಥ ದೇಶಗಳು ಪರಿಪೂರ್ಣವಾಗಿ ಪಾಲಿಸಿದ ಅನೇಕ ಉದಾಹರಣೆಗಳಿವೆ. ಸಮಿತಿಯ ಅಭಿಪ್ರಾಯಗಳನ್ನು ಅನುಪಾಲಿಸಿ, ತನ್ನ ವಿದೇಶಿಗರ ಶಾಸನ, ಒಡಂಬಡಿಕೆಗೆ ಹೊಂದಿಕೊಳ್ಳುವಂತೆ ಫಿನ್ಲೆಂಡ್ ದೇಶವು ಶಾಸನದಲ್ಲಿ ವಿದೇಶಿಯರ ಬಂಧನಕ್ಕೆ ಸಂಬಂಧಿಸಿದ ವಿಧಿಗಳನ್ನು ಪರಿಷ್ಕರಿಸಿತು. ಅದು ಹಾನಿಗೊಳಗಾದ ವ್ಯಕ್ತಿಗೆ ಪರಿಹಾರಧನವನ್ನೂ ನೀಡಿತು. ಹಾಗೆಯೇ ಸರ್ಕಾರ ಕೌಟುಂಬಿಕ ವಿಚಾರಗಳಲ್ಲಿ ಹಸ್ತಕ್ಷೇಪ ಮಾಡಿ ಲಿಂಗದ ಆಧಾರದ ಮೇಲೆ ತಾರತಮ್ಯ ಮಾಡುತ್ತಿದೆಯೆಂದು ಮಾರಿಶಿಯಸ್‌ನ ಅನೇಕ ಹೆಂಗಸರ ದೂರನ್ನು ಸಮಿತಿಯು ಪುರಸ್ಕರಿಸಿದ್ದಕ್ಕೆ ಸ್ಪಂದಿಸಿ ಮಾರಿಶಿಯಸ್ ಸರ್ಕಾರ ತನ್ನ ಶಾಸನಗಳನ್ನು ತಿದ್ದುಪಡಿ ಮಾಡಿತು. ಕೆನಡಾ, ಕೊಲಂಬಿಯಾ, ಈಕ್ವೆಡಾರ್, ಪೆರು, ಟ್ರಿನಿಡಾಡ್ ಮತ್ತು ಟೊಬ್ಯಾಗೋ ದೇಶಗಳೂ ಸೇರಿದಂತೆ, ಅನೇಕ ದೇಶಗಳಿಂದ ಐಚ್ಛಿಕ ಶಿಷ್ಟಾಚಾರದ ಅನ್ವಯ ಬಂದ ಮನವಿಗಳ ಬಗ್ಗೆ ಸಮಿತಿಯ ಅಭಿಪ್ರಾಯಗಳಿಗೆ ಇತ್ಯರ್ಥಕ ಪ್ರತಿಕ್ರಿಯೆಗಳು ಬರುತ್ತಿವೆ.

ತನ್ನ ಅಭಿಪ್ರಾಯಗಳ ಅನುಪಾಲನೆಯನ್ನು ಪ್ರೋತ್ಸಾಹಿಸುವುದಕ್ಕಾಗಿ ಸಮಿತಿಯು ಭಾಗಸ್ಥ ದೇಶಗಳು ಸಮಿತಿಯ ಅಭಿಪ್ರಾಯಗಳನ್ನಾಧರಿಸಿ ತೆಗೆದುಕೊಂಡ ಯಾವುದೇ ಕ್ರಮಗಳ ಬಗ್ಗೆ ಲಿಖಿತ ಮಾಹಿತಿಯನ್ನು ಕೇಳುವ ಅಧಿಕಾರ ನೀಡಿ ಒಬ್ಬ ವಿಶೇಷ ಸಾಮರಸ್ಯಾಧಿಕಾರಿಯನ್ನು ನೇಮಕ ಮಾಡಿದೆ.

### *17. ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ, ಅಂತರರಾಷ್ಟ್ರೀಯ ಒಡಂಬಡಿಕೆ ಯಾವ ಹಕ್ಕುಗಳನ್ನು ರಕ್ಷಿಸುತ್ತದೆ? (ಐ.ಸಿ.ಇ.ಎಸ್.ಸಿ.ಆರ್.)*

ಒಡಂಬಡಿಕೆ ಮಾನ್ಯ ಮಾಡಿರುವ ಹಕ್ಕುಗಳಲ್ಲಿ ಈ ಕೆಳಕಂಡವು ಸೇರಿವೆ: ಉದ್ಯೋಗದ ಹಕ್ಕು, ಉದ್ಯೋಗಕ್ಕೆ ಅನುಕೂಲಕರವಾದ ವಾತಾವರಣದ ಹಕ್ಕು, ಸಮಾನ ಕೆಲಸಕ್ಕೆ ಸಮಾನ ವೇತನ, ಕಾರ್ಮಿಕ ಸಂಘಟನೆಯನ್ನು ಮಾಡಿಕೊಳ್ಳುವುದು ಹಾಗೂ ಅದರಲ್ಲಿ ಸೇರಿಕೊಳ್ಳುವುದು, ಸಾಮಾಜಿಕ ಭದ್ರತೆ, ಆಹಾರ ಪೂರೈಕೆ, ಬಟ್ಟೆ ಮತ್ತು ವಸತಿಯು ಸೇರಿದಂತೆ ಒಂದು ಯಥೋಚಿತ ಜೀವನಮಟ್ಟ, ಕುಟುಂಬದ ರಕ್ಷಣೆ, ಸಾಧ್ಯವಿದ್ದಷ್ಟು ಗರಿಷ್ಠ ಮಟ್ಟದ ದೈಹಿಕ ಹಾಗೂ ಮಾನಸಿಕ ಆರೋಗ್ಯ, ಶಿಕ್ಷಣ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಭಾಗಿಯಾಗುವಿಕೆ. ಒಡಂಬಡಿಕೆಗೆ ಭಾಗಸ್ಥವಾದ ಪ್ರತಿಯೊಂದು ದೇಶವೂ ತನ್ನ ಸಂಪನ್ಮೂಲಗಳ

ಶಕ್ತಿಮೀರಿ, ಒಡಂಬಡಿಕೆಯು ಮಾನ್ಯ ಮಾಡಿರುವ ಹಕ್ಕುಗಳ ಪೂರ್ಣಪ್ರಮಾಣದ ಅನುಷ್ಠಾನ ಸಾಧಿಸಲು ಅಗತ್ಯ ಕ್ರಮಕೈಗೊಳ್ಳುವುದಾಗಿ ಒಪ್ಪಿಕೊಳ್ಳುತ್ತವೆ. ಒಡಂಬಡಿಕೆಯಲ್ಲಿ ರಕ್ಷಿತವಾದ ಯಾವುದೇ ಹಕ್ಕುಗಳನ್ನು ಅಮಾನತ್ತುಗೊಳಿಸುವುದು ಸಾಧ್ಯವಿಲ್ಲ.

### *18. ಐ.ಸಿ.ಇ.ಎಸ್.ಸಿ.ಆರ್.ನ ಅನುಷ್ಠಾನಕ್ಕೆ ಯಾವ ಯಂತ್ರವ್ಯವಸ್ಥೆ ಅಸ್ತಿತ್ವದಲ್ಲಿದೆ?*

1985ರಲ್ಲಿ ಇ.ಸಿ.ಓ.ಎಸ್.ಓ.ಸಿ.ಯಿಂದ ಸ್ಥಾಪನೆಗೊಂಡ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಹಕ್ಕುಗಳ ಸಮಿತಿ ಒಡಂಬಡಿಕೆಯ ಅನುಷ್ಠಾನದ ಉಸ್ತುವಾರಿಯನ್ನು ನೋಡುವ ಘಟಕವಾಗಿದೆ. ಅದು ಭಾಗಸ್ಥ ದೇಶಗಳಿಂದ ಆಯ್ಕೆಗೊಂಡ ಹಾಗೂ ನಾಮನಿರ್ದೇಶಿತರಾದ, ತಮ್ಮ ವೈಯಕ್ತಿಕ ಸ್ಥಾನಬಲದ ಮೇಲೆ ಸ್ವತಂತ್ರರಾಗಿ ಕಾರ್ಯನಿರ್ವಹಿಸುವ ಹದಿನೆಂಟು ಜನ ತಜ್ಞರನ್ನೊಳಗೊಂಡಿದೆ. ಭಾಗಸ್ಥ ದೇಶಗಳು ನಿಯತಕಾಲಿಕವಾಗಿ ಒಪ್ಪಿಸುವ, ಒಡಂಬಡಿಕೆಯಲ್ಲಿನ ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ಆದ ಪ್ರಗತಿ ಹಾಗೂ ಕೈಗೊಂಡ ಕ್ರಮಗಳನ್ನು ಪ್ರತಿಬಿಂಬಿಸುವ ವರದಿಗಳನ್ನು ಸಮಿತಿ ಬಹಿರಂಗವಾಗಿ ಪರಿಶೀಲಿಸುತ್ತದೆ. ಸಮಿತಿ ವರದಿಗಳನ್ನು ಪರಿಶೀಲಿಸುವಾಗ ಹಾಗೂ ರಚನಾತ್ಮಕ ಸಂವಾದದಲ್ಲಿ ತೊಡಗಿದಾಗ, ಭಾಗಸ್ಥ ದೇಶಗಳ ಪ್ರತಿನಿಧಿಗಳಿಗೆ ಅಲ್ಲಿ ಹಾಜರಿರುವ ಅಧಿಕಾರವಿರುತ್ತದೆ. ಹೆಚ್ಚುವರಿ ಮಾಹಿತಿಗಳನ್ನು ಕೊಡುವಂತೆ ಅವರನ್ನು ಕೇಳಬಹುದು. ಅವುಗಳ ತಜ್ಞತೆಯ ವಲಯಕ್ಕೆ ಸಂಬಂಧಿಸಿದಂತೆ ವಿಶ್ವಸಂಸ್ಥೆಯ ವಿಶೇಷ ವಿಭಾಗಗಳಿಂದ ಪ್ರಸಂಗೋಚಿತವಾಗಿ ಸಿಗುವ ಮಾಹಿತಿಗಳನ್ನು ಸಹ ಸಮಿತಿ ಪರಿಗಣನೆಗೆ ತೆಗೆದುಕೊಳ್ಳುತ್ತದೆ ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳಿಂದ, ಲಿಖಿತ ಹಾಗೂ ಮೌಖಿಕ ಮನವಿಗಳನ್ನು ಆಹ್ವಾನಿಸುತ್ತದೆ. ಅನುಪಾಲನಾಪೂರಕ ಮಾಹಿತಿಗಳನ್ನು ಒದಗಿಸುವ ಮನವಿಗೆ ಸ್ಪಂದಿಸಲು ಯಾವುದೇ ದೇಶವು ತಪ್ಪಿದಲ್ಲಿ ಸಮಿತಿಯು ಅಂಥ ಭಾಗಸ್ಥ ದೇಶವು ಒಬ್ಬರು ಅಥವಾ ಇಬ್ಬರು ಸಮಿತಿಯ ಸದಸ್ಯರ ನಿಯೋಗವು ಅನುಪಾಲನೆಯ ಸಂಬಂಧ, ಸಹಾಯ ಮಾಡಲು ಮತ್ತು ತಾಂತ್ರಿಕ ಮತ್ತು ಸಲಹಾತ್ಮಕ ಸೇವೆಗಳ ಅಗತ್ಯತೆಯನ್ನು ಅಂದಾಜು ಮಾಡಲು ಸದರಿ ದೇಶಕ್ಕೆ ಭೇಟಿ ನೀಡುವುದನ್ನು ಒಪ್ಪಿಕೊಳ್ಳುವಂತೆ ಕೇಳಬಹುದು.

ಇ.ಸಿ.ಓ.ಎಸ್.ಓ.ಸಿ.ಗೆ ಸಮಿತಿ ವಾರ್ಷಿಕವಾಗಿ ದೇಶಗಳಿಂದ ಬಂದ ವರದಿಯ ಪರಿಶೀಲನೆಯ ಬಗ್ಗೆ ವರದಿ ಸಲ್ಲಿಸುತ್ತದೆ ಮತ್ತು ತನ್ನ ನಿರ್ಧಾರಿತ ಅಭಿಪ್ರಾಯಗಳನ್ನು ಒಪ್ಪಿಸುತ್ತದೆ. ಅದು ಚರ್ಚೆಯ ಮುಖ್ಯಾಂಶಗಳು, ಗುರುತಿಸಲ್ಪಟ್ಟ ಇತ್ಯರ್ಥಕ ಅಂಶಗಳು ಹಾಗೂ ಪ್ರಮುಖ ಕಾಳಜಿಗಳು, ಒಡಂಬಡಿಕೆಯ ಅನುಷ್ಠಾನಕ್ಕೆ ಬಾಧಕವಾಗಿರುವ ಅಂಶಗಳು ಹಾಗೂ ತೊಡಕುಗಳು ಇವುಗಳನ್ನೊಳಗೊಂಡಿರುತ್ತದೆ ಮತ್ತು ಸಲಹೆ ಶಿಫಾರಸುಗಳನ್ನು ಸಾದರಪಡಿಸುತ್ತದೆ. ಈ ಅಭಿಪ್ರಾಯ, ಸಾರ್ವತ್ರಿಕ ಮಾಹಿತಿಯ ಮುಖ್ಯವಾದ ಮೂಲಗಳಲ್ಲೊಂದಾಗಿದೆ. ವ್ಯಕ್ತಿಗತ ಹಾಗೂ


ನಿನ್ನೆ ರಾತ್ರಿ ನನಗೊಂದು ಭಯಂಕರ ಕನಸು ಬಿತ್ತು!... ಅವರು ಮತದಾನ ಮಾಡ್ತಿದ್ದರು!...
Plowk

ಅಂತರದೇಶೀಯ ದೂರುಗಳ ಬಗ್ಗೆ ಯಾವುದೇ ಕಾರ್ಯವಿಧಾನವೂ ಅಸ್ತಿತ್ವದಲ್ಲಿ ಇಲ್ಲ.

### *19. ಒಡಂಬಡಿಕೆಯನ್ನು ಅನುಷ್ಠಾನಗೊಳಿಸುವಲ್ಲಿ ಭಾಗಸ್ಥ ದೇಶಗಳಿಗೆ ಹೇಗೆ ನೆರವು ನೀಡಲಾಗುತ್ತದೆ?*

ಇ.ಸಿ.ಓ.ಎಸ್.ಓ.ಸಿ.ಯ ಆಹ್ವಾನದ ಮೇರೆಗೆ ಐ.ಸಿ.ಇ.ಎಸ್.ಸಿ.ಆರ್.ನ . ವಿವಿಧ ಕಲಮುಗಳು ಮತ್ತು ಅವಕಾಶಗಳ ಮೇಲೆ ಒಡಂಬಡಿಕೆಯಲ್ಲಿ ಮಾನ್ಯ ಮಾಡಿರುವ ಹಕ್ಕುಗಳ ಪ್ರಕಾರ ಅನುಷ್ಠಾನಕ್ಕೆ ನೆರವಾಗಲು ಮತ್ತು ಅದರ ಪ್ರಗತಿಯನ್ನು ಪ್ರೋತ್ಸಾಹಿಸಲು ಹಾಗೂ ಭಾಗಸ್ಥ ದೇಶಗಳಿಗೆ ವರದಿಗೆ ಸಂಬಂಧಿಸಿದ ಕರ್ತವ್ಯಪಾಲನೆಗೆ ನೆರವಾಗುವ ಉದ್ದೇಶದಿಂದ ಸಮಿತಿ 'ಸಾರ್ವತ್ರಿಕ ವ್ಯಾಖ್ಯಾನ'ವನ್ನು ಸಿದ್ಧಪಡಿಸುತ್ತದೆ. ಅದರ ಮೂರನೇ 'ಸಾರ್ವತ್ರಿಕ ವ್ಯಾಖ್ಯಾನ'ದಲ್ಲಿ ಸಮಿತಿಯು ಭಾಗಸ್ಥ ದೇಶಗಳು ತಕ್ಷಣವೇ ಕ್ರಮ ಕೈಗೊಳ್ಳಬೇಕಾದ ಎರಡು ಕಲಮುಗಳನ್ನು ನಿರ್ದಿಷ್ಟಪಡಿಸಿತು. ಇದರಲ್ಲಿ ಒಂದು ತಾರತಮ್ಯ ಮಾಡದಿರುವ ಕಲಮುಗಳಿಗೆ ಸಂಬಂಧಿಸಿದ್ದು, ಮತ್ತೊಂದು ಚಿಂತನಪೂರ್ವಕವಾಗಿ ವಾಸ್ತವಿಕವಾಗಿ ಒಡಂಬಡಿಕೆಯಲ್ಲಿನ ಕರ್ತವ್ಯಪಾಲನೆಯ ಗುರಿಯ ಕಡೆ ಸಾಧ್ಯವಿದ್ದಷ್ಟೂ ಸ್ಪಷ್ಟ ರೀತಿಯಲ್ಲಿ ಮುನ್ನಡೆಯಲು ಅಗತ್ಯ ಕ್ರಮ ಕೈಗೊಳ್ಳುವುದಕ್ಕೆ ಸಂಬಂಧಿಸಿದ್ದು. ಪ್ರತಿ ಒಡಂಬಡಿಕೆಯಲ್ಲಿನ ಪ್ರತಿಯೊಂದು ಹಕ್ಕನ್ನು ಅದರ ಅತ್ಯಾವಶ್ಯಕ ಕನಿಷ್ಠ ಸ್ತರದಲ್ಲಿ ಜಾರಿಗೊಳಿಸುವುದನ್ನು ಖಚಿತಪಡಿಸುವುದು ಎಲ್ಲ ಭಾಗಸ್ಥ ದೇಶಗಳ ಆದ್ಯ ಕರ್ತವ್ಯವೆಂಬುದನ್ನು ಸಮಿತಿ ಈ ವ್ಯಾಖ್ಯಾನದಲ್ಲಿ ಟಿಪ್ಪಣಿ ಮಾಡಿದೆ. ಇದಕ್ಕೆ ಅಪವಾದವೆಂದರೆ ಯಾವುದೇ ದೇಶವು ಸಂಪನ್ಮೂಲಗಳ ಕೊರತೆಯಿಂದಾಗಿ ಕ್ರಮಕೈಗೊಳ್ಳುವುದು ಅಸಾಧ್ಯವೆಂದು ತೋರಿಸಿಕೊಟ್ಟ ಸಂದರ್ಭಗಳು ಮಾತ್ರ. ಉಳಿದ 'ಸಾರ್ವತ್ರಿಕ ವ್ಯಾಖ್ಯಾನ'ಗಳು ಒಡಂಬಡಿಕೆಗೆ ಸಂಬಂಧಪಟ್ಟಂತೆ, ಯಥೋಚಿತ ವಸತಿ ಸೌಲಭ್ಯದ ಹಕ್ಕು ಮತ್ತು ಅಂತರರಾಷ್ಟ್ರೀಯ ನೆರವಿನ ಕ್ರಮಗಳ ಬಗ್ಗೆ ಗಮನಹರಿಸಿವೆ.

### *20. ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ಸಮಿತಿ ಇನ್ನೇನಾದರೂ ಕಾರ್ಯವಿಧಾನಗಳನ್ನು ಆರಂಭಿಸಿದೆಯೇ?*

ವಿಷಯಗಳನ್ನು ಇನ್ನಷ್ಟು ಅರ್ಥಮಾಡಿಕೊಳ್ಳುವ ದೃಷ್ಟಿಯಿಂದ ಅದರ ಪ್ರತಿಯೊಂದು ಅಧಿವೇಶನದಲ್ಲೂ, ಒಂದು ನಿರ್ದಿಷ್ಟ ಹಕ್ಕಿನ ಬಗ್ಗೆ ಅಥವಾ ಒಡಂಬಡಿಕೆಯಲ್ಲಿನ ಒಂದು ನಿರ್ದಿಷ್ಟ ವಿಷಯಾಂಶದ ವಿಚಾರದಲ್ಲಿ ಸಾರ್ವತ್ರಿಕ ಚರ್ಚೆಯನ್ನು ನಡೆಸುತ್ತದೆ. ಆಹಾರದ ಹಕ್ಕು, ವಸತಿಯ ಹಕ್ಕು, ಸಾಮಾಜಿಕ ಹಾಗೂ ಆರ್ಥಿಕ ಸೂಚ್ಯಾಂಕಗಳ ಪಾತ್ರ, ಹಿರಿಯರ ಹಾಗೂ ವಯೋವೃದ್ಧರ ಹಕ್ಕುಗಳು, ಸಾಂಸ್ಕೃತಿಕ ಜೀವನದಲ್ಲಿ ಪಾಲ್ಗೊಳ್ಳುವ ಹಕ್ಕು - ಇವು ಕೆಲವೊಂದು ಕೇಂದ್ರ ವಿಷಯಗಳು.

ಇ.ಸಿ.ಓ.ಎಸ್.ಓ.ಸಿ.ಗೆ ಸಮಿತಿಯು ನೀಡುವ ವಾರ್ಷಿಕ ವರದಿ ಈ ಚರ್ಚೆಗಳ ಸಾರಾಂಶಗಳನ್ನೊಳಗೊಂಡಿರುತ್ತದೆ.

## *21. ಮಾನವಹಕ್ಕುಗಳಿಗೆ ಸಂಬಂಧಿಸಿದ ಕರ್ತವ್ಯಗಳ ಅನುಪಾಲನೆಯ ಬಗ್ಗೆ ಅಂತರರಾಷ್ಟ್ರೀಯ ಪರಾಮರ್ಶೆಯಿಂದ, ರಾಷ್ಟ್ರಗಳ ಆಂತರಿಕ ವ್ಯವಹಾರದಲ್ಲಿ ಹಸ್ತಕ್ಷೇಪ ಉಂಟಾಗುತ್ತದೆಯೆ ?*

ರಾಷ್ಟ್ರವೇ ಮಾನವಹಕ್ಕುಗಳ ಹೊಣೆಗಾರ ಹಾಗೂ ರಕ್ಷಕ; ಮತ್ತು ದೇಶಗಳ ಮಧ್ಯದ ಸಂಬಂಧವನ್ನು ಕ್ರಮಪಡಿಸುವ ವಾಡಿಕೆಯ ನಿಯಮದಂತೆ, ಸರ್ಕಾರಗಳಿಗೆ ತತ್ವಶಃ ಯಾವುದೇ ಇನ್ನೊಂದು ದೇಶದ ಆಂತರಿಕ ವ್ಯವಹಾರಗಳಲ್ಲಿ ಮಧ್ಯೆ ಪ್ರವೇಶಿಸುವ ಹಕ್ಕು ಇಲ್ಲ.

ಮಾನವಹಕ್ಕುಗಳು ರಾಷ್ಟ್ರದ ಆಂತರಿಕ ಜವಾಬ್ದಾರಿಯೆಂದೇ ಬಹಳ ಕಾಲ ತಿಳಿಯಲ್ಪಟ್ಟಿತ್ತು. ಮಾನವಹಕ್ಕುಗಳ ಉಲ್ಲಂಘನೆ ವಿಶ್ವದ ಶಾಂತಿ ಮತ್ತು ಭದ್ರತೆಗೆ ಅಪಾಯ ಒಡ್ಡುತ್ತದೆಯೆಂಬ ಪರಿಜ್ಞಾನದಿಂದಾಗಿ ಈ ಭಾವನೆ ಕ್ರಮೇಣ ಬದಲಾಗಿದೆ.

1993ರಲ್ಲಿ ಮಾನವಹಕ್ಕುಗಳ ವಿಶ್ವ ಸಮ್ಮೇಳನ ಅಂಗೀಕರಿಸಿದ ವಿಯೆನ್ನಾ ಘೋಷಣೆ ಮತ್ತು ಕ್ರಿಯಾ ಯೋಜನೆ "ಎಲ್ಲ ಮಾನವಹಕ್ಕುಗಳ ಉತ್ತೇಜನ ಮತ್ತು ರಕ್ಷಣೆ ಅಂತರರಾಷ್ಟ್ರೀಯ ಸಮುದಾಯದ ನ್ಯಾಯಯುತ ಕಾಳಜಿಯಾಗಿದೆ" ಎಂದು ಸಾರಿತು (ಕಲಮು 4). ಅದೇ ರೀತಿ 20ನೇ ಡಿಸೆಂಬರ್ 1993ರ ನಿರ್ಣಯದ 3 ಮತ್ತು 5ನೇ ಪರಿಚ್ಛೇದಗಳ ಕ್ರಿಯಾಭಾಗದಲ್ಲಿ ವಿಶ್ವಸಂಸ್ಥೆಯ ಮಹಾಧಿವೇಶನವು "ಮಾನವಹಕ್ಕುಗಳ ಮತ್ತು ಮೂಲಭೂತ ಸ್ವಾತಂತ್ರ್ಯಗಳ ಬಗ್ಗೆ ಗೌರವವನ್ನು ಪ್ರೋತ್ಸಾಹಿಸಿ ಸಂವರ್ಧಿಸುವುದು ಮತ್ತು ಅದು ಎಲ್ಲೆಲ್ಲಿ ಸಂಭವಿಸುತ್ತದೆಯೋ ಅಲ್ಲೆಲ್ಲ ಮಾನವಹಕ್ಕುಗಳ ಉಲ್ಲಂಘನೆಯ ಬಗ್ಗೆ ಜಾಗೃತವಾಗಿರುವುದು ಎಲ್ಲ ಸದಸ್ಯ ರಾಷ್ಟ್ರಗಳ ಕೆಲಸವಾಗಿದೆ ಹಾಗೂ ವಿಶ್ವರಾಷ್ಟ್ರ ಸಂಸ್ಥೆಯ ಉದ್ದಿಶ್ಯವಾಗಿದೆ" ಎಂದು ಪುನಃ ದೃಢೀಕರಿಸಿತು. ಅದು ಎಲ್ಲ ಮಾನವಹಕ್ಕುಗಳ ಮತ್ತು ಮೂಲಭೂತ ಸ್ವಾತಂತ್ರ್ಯಗಳ ಸಂವರ್ಧನೆ, ರಕ್ಷಣೆ ಮತ್ತು ಪರಿಪೂರ್ಣ ಸಾಧನೆಯು ವಿಶ್ವರಾಷ್ಟ್ರ ಸಮೂಹದ ನ್ಯಾಯಯುತ ಕಾಳಜಿಯಾಗಿದ್ದು ಅದು ವಸ್ತುನಿಷ್ಠೆ, ನಿಷ್ಪಕ್ಷಪಾತ, ಸಾರ್ವತ್ರಿಕ ತಾತ್ವಿಕತೆಯಿಂದ ನಿರ್ದೇಶಿಸಲ್ಪಡತಕ್ಕದ್ದೆಂಬುದನ್ನು ಸಹ ದೃಢಪಡಿಸಿತು.

ಸಾಮಾನ್ಯವಾಗಿ ರಾಷ್ಟ್ರಗಳು ತಮ್ಮ ಮಾನವಹಕ್ಕುಗಳ ವ್ಯವಹಾರಗಳ ವಿಷಯದಲ್ಲಿ ಸೂಕ್ಷ್ಮಮನಸ್ಕ ಹಾಗೂ ರಕ್ಷಣಾರ್ಥಕವಾಗಿರುತ್ತವೆ ಮತ್ತು "ಅವಶ್ಯಕವಾಗಿ ರಾಷ್ಟ್ರಗಳ ಆಂತರಿಕ ವ್ಯಾಪ್ತಿಯಲ್ಲಿ ಬರುವ ವಿಚಾರಗಳಲ್ಲಿ" ವಿಶ್ವಸಂಸ್ಥೆ ಮಧ್ಯಪ್ರವೇಶ ಮಾಡಬಾರದೆಂಬ ವಿಶ್ವಸಂಸ್ಥೆಯ ಸಂವಿಧಾನದ 2(7) ವಿಧಿಯನ್ನು ಆವಾಹಿಸುತ್ತಲೇ ಇರುತ್ತವೆ. ಆದಾಗ್ಯೂ ಆ ರೀತಿಯ ವರ್ತನೆ ಅಂತರರಾಷ್ಟ್ರೀಯ ಶಾಸನದ ಅಡಿ ತಮ್ಮ ಕರ್ತವ್ಯ ನಿರ್ವಹಣೆಯನ್ನು ಮಾಡದಿರುವ ಪ್ರಯತ್ನವೆಂದು ಹೆಚ್ಚುಹೆಚ್ಚಾಗಿ ಗುರುತಿಸಲ್ಪಡುತ್ತಿದೆ. ಮತ್ತು ಅದರಿಂದಾಗಿ ವಿಶ್ವಸಂಸ್ಥೆಯ ವ್ಯವಸ್ಥೆಯಡಿಯಲ್ಲಿ ಮಾನವಹಕ್ಕುಗಳ ವಿಷಯಗಳು ಪ್ರಸ್ತಾಪಗೊಳ್ಳುವುದನ್ನು ತಡೆಯುವುದು

ಸಾಧ್ಯವಾಗಿಲ್ಲ. ಅದಕ್ಕಿಂತ ಹೆಚ್ಚಾಗಿ ವಿಶ್ವಸಂಸ್ಥೆಯ ಸಂವಿಧಾನವು ರಾಷ್ಟ್ರಗಳ ಮಧ್ಯದ ಶಾಂತಿ ಮತ್ತು ಭದ್ರತೆ, ಮಾನವಹಕ್ಕುಗಳ ಮಾನ್ಯತೆ, ಗೌರವಗಳಿಗೆ ಸಂಬಂಧಿಸಿದೆಯೆಂದು ಮಾನ್ಯ ಮಾಡುತ್ತದೆ ಮತ್ತು ಎಲ್ಲ ಜನರ ಸಾಮಾಜಿಕ ಹಾಗೂ ಆರ್ಥಿಕ ಪ್ರಗತಿಯನ್ನೊಳಗೊಂಡ ಶಾಂತಿ ಮತ್ತು ಮಾನವಹಕ್ಕುಗಳನ್ನು ಸಾಕಾರಗೊಳಿಸುವ ವಾತಾವರಣವನ್ನು ನಿರ್ಮಿಸಲು ಬಯಸುತ್ತದೆ.

## 22. ಅಂತರರಾಷ್ಟ್ರೀಯ ಮಾನವಹಕ್ಕುಗಳ ವಿಧೇಯಕವಲ್ಲದೆ ಬೇರೆ ಯಾವ ಪ್ರಮುಖ ವಿಶ್ವಸಂಸ್ಥೆಯ ಮಾನವಹಕ್ಕುಗಳ ದಸ್ತಾವೇಜುಗಳು ಇವೆ?

ಅಂತರರಾಷ್ಟ್ರೀಯ ಮಾನವಹಕ್ಕುಗಳ ವಿಧೇಯಕದಲ್ಲಿ ನಿರ್ದಿಷ್ಟಪಡಿಸಿಲ್ಲದ ಕೆಲವು ಹಕ್ಕುಗಳನ್ನೂ ದೃಢೀಕರಿಸುವ ವಿಶ್ವಮಾನ್ಯ ಘೋಷಣೆ ಮತ್ತು ಅಂತರರಾಷ್ಟ್ರೀಯ ದಸ್ತಾವೇಜುಗಳಲ್ಲಿ ನಮೂದಿಸಿರುವ ಹಕ್ಕುಗಳನ್ನು ಹೆಚ್ಚು ವಿವರಣಾತ್ಮಕವಾಗಿ ವಿಸ್ತಾರಗೊಳಿಸುವ ಬಹುಸಂಖ್ಯೆಯ ಒಡಂಬಡಿಕೆಗಳು, ಘೋಷಣೆಗಳು, ಮಹಾಧಿವೇಶನದಲ್ಲಿ ಮತ್ತು ವಿಶ್ವಸಂಸ್ಥೆಯ ವ್ಯವಸ್ಥೆಯ ಅಡಿಯಲ್ಲಿನ ಅನೇಕ ಶಾಸನರಚನಾ ಘಟಕಗಳಲ್ಲಿ ಅಂಗೀಕಾರಗೊಂಡ ಶಿಫಾರಸುಗಳು ಇವೆ. ಘೋಷಣೆಗಳು ಹಾಗೂ ಶಿಫಾರಸುಗಳು, ವಿಶ್ವಸಂಸ್ಥೆಯ ಎಲ್ಲ ಸದಸ್ಯ ರಾಷ್ಟ್ರಗಳಿಗೂ ಅನ್ವಯವಾಗುತ್ತವೆ. ಆದರೆ ಅವುಗಳಿಗೆ ಒಡಂಬಡಿಕೆಗಳಿಗೆ ಇರುವಂತೆ ಭಾಗಸ್ಥ ರಾಷ್ಟ್ರಗಳನ್ನು ಶಾಸನ ರೀತ್ಯಾ ಬದ್ಧಗೊಳಿಸುವ ಶಕ್ತಿ ಇರುವುದಿಲ್ಲ.



ಅಂತರರಾಷ್ಟ್ರೀಯ ಮಾನದಂಡಗಳನ್ನು ಆಚರಣೆಯಲ್ಲಿ ತರುವಂತೆ ಮತ್ತು ಅಂತರರಾಷ್ಟ್ರೀಯ ಮಾನವಹಕ್ಕುಗಳ ಒಪ್ಪಂದಗಳನ್ನು ಸ್ಥಿರೀಕರಿಸುವಂತೆ ಅಥವಾ ಒಪ್ಪಿಕೊಳ್ಳುವಂತೆ ಮತ್ತು ಅವುಗಳನ್ನು ಅವರ ದೇಶೀಯ ಶಾಸನಗಳಲ್ಲಿ ಅಳವಡಿಸಿಕೊಳ್ಳುವಂತೆ, ರಾಷ್ಟ್ರಗಳನ್ನು ಪ್ರೋತ್ಸಾಹಿಸಲು ಪ್ರತಿಯೊಂದು ಪ್ರಯತ್ನವನ್ನೂ ಮಾಡಲಾಗುತ್ತದೆ. ಈ ಮಾನದಂಡಗಳು ಪ್ರಜಾಪ್ರಭುತ್ವವನ್ನು ಬಲಪಡಿಸಲು ಆದರ್ಶದ ನೆಲೆಯನ್ನು ಒದಗಿಸುತ್ತವೆ. ಅಂತರರಾಷ್ಟ್ರೀಯ ದಸ್ತಾವೇಜುಗಳಲ್ಲಿ ಕೆಲವು ಜೀವದ ಹಕ್ಕು, ತಾರತಮ್ಯವನ್ನು ತಡೆಗಟ್ಟುವ ಮತ್ತು ಅಲ್ಪಸಂಖ್ಯಾತರ ಹಕ್ಕುಗಳು, ಅಂತೆಯೇ ಮೂಲನಿವಾಸಿಗಳ ಹಕ್ಕುಗಳು, ಯುದ್ಧಸಂತ್ರಸ್ತರು ಮತ್ತು ನಿರಾಶ್ರಿತರು ಮುಂತಾದ ಈ ಮುಂದೆ ಚರ್ಚಿಸಿರುವ ಎಲ್ಲ ಹಕ್ಕುಗಳಿಗೆ ಸಂಬಂಧಿಸಿವೆ. ಪ್ರಸ್ತಾಪಿಸಲ್ಪಟ್ಟ ಇನ್ನಿತರ ಮಾನದಂಡಗಳು ಚಿತ್ರಹಿಂಸೆ ಮತ್ತು ಅಮಾನುಷ ಅಥವಾ ಹೀನ ನಡವಳಿಕೆ ಅಥವಾ ಶಿಕ್ಷೆಯ ವಿರುದ್ಧದ ಒಡಂಬಡಿಕೆಯನ್ನು (ಭಾಗ II, ಕಲಮು 5ನ್ನೂ ನೋಡಿ), ಮಗುವಿನ ಹಕ್ಕುಗಳ ಮೇಲಿನ ಒಡಂಬಡಿಕೆಯನ್ನು (ನಂ. 33ನೇ ಪ್ರಶ್ನೆಯನ್ನು ನೋಡಿ), ಮತ್ತು ನಿರಾಶ್ರಿತರ ಸ್ಥಾನಮಾನಕ್ಕೆ ಸಂಬಂಧಿಸಿದ ಒಡಂಬಡಿಕೆಗಳನ್ನು ಮತ್ತು ಸಂಬಂಧಿಸಿದ ಶಿಷ್ಟಾಚಾರಗಳನ್ನು ಒಳಗೊಂಡಿದೆ (45ನೇ ಪ್ರಶ್ನೆಯನ್ನು ಸಹ ನೋಡಿ.).

### *23. ಜನಾಂಗಹತ್ಯೆಯನ್ನು ತಡೆಗಟ್ಟಲು ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ ?*

1948ರಲ್ಲಿ ವಿಶ್ವಸಂಸ್ಥೆಯ ಮಹಾಧಿವೇಶನವು ಜನಾಂಗಹತ್ಯೆಯ ಅಪರಾಧವನ್ನು ತಡೆಗಟ್ಟುವ ಹಾಗೂ ಶಿಕ್ಷಿಸುವ ಬಗ್ಗೆ ಒಡಂಬಡಿಕೆಯನ್ನು ಅಂಗೀಕರಿಸಿತು. ಅದು 1951ರಲ್ಲಿ ಜಾರಿಗೆ ಬಂದು ಈವರೆಗೆ ಸುಮಾರು 120 ರಾಷ್ಟ್ರಗಳಿಂದ ಸ್ಥಿರೀಕರಿಸಲ್ಪಟ್ಟಿದೆ.[11]

"ಒಂದು ರಾಷ್ಟ್ರೀಯ, ಜನಾಂಗೀಯ, ವರ್ಣೀಯ ಅಥವಾ ಧರ್ಮೀಯ ಗುಂಪನ್ನು ಪೂರ್ಣವಾಗಿ ಅಥವಾ ಭಾಗಶಃ ನಾಶಪಡಿಸುವ ಉದ್ದೇಶದಿಂದ ಮಾಡಿದ ಕೆಲವು ಕೃತ್ಯಗಳು" ಎಂದು ಜನಾಂಗಹತ್ಯೆಯನ್ನು ಒಡಂಬಡಿಕೆಯಲ್ಲಿ ವ್ಯಾಖ್ಯಾನಿಸಲಾಗಿದೆ. ಯುದ್ಧದ ಸಂದರ್ಭದಲ್ಲಿ ಮಾಡಿರಲಿ ಅಥವಾ ಶಾಂತಿಕಾಲದಲ್ಲಿ ಮಾಡಿರಲಿ, ಜನಾಂಗಹತ್ಯೆಯು ಅಂತರರಾಷ್ಟ್ರೀಯ ಶಾಸನದ ಅಡಿಯಲ್ಲಿ ಒಂದು ಅಪರಾಧವೆಂದು ಹೆಸರಿಸಲ್ಪಟ್ಟಿದೆ ಮತ್ತು ಅದನ್ನು ಮಾನವಜನಾಂಗದ ವಿರುದ್ಧವಾದ ಅಪರಾಧವೆಂದು ವ್ಯಾಖ್ಯಾನಿಸಲಾಗಿದೆ. ನರಮೇಧವನ್ನು ಎಸಗಿದ ಆರೋಪಿಗಳನ್ನು, ಆ ಅಪರಾಧವನ್ನು ಎಸಗಿದ ರಾಷ್ಟ್ರದ ಒಳಗಡೆ ಇರುವ ಯೋಗ್ಯ ನ್ಯಾಯಾಧಿಕರಣದ ಮುಂದೆ ಆಗಲೀ ಅಥವಾ ಒಡಂಬಡಿಕೆಗೆ ಭಾಗಸ್ಥ ದೇಶಗಳು ಯೋಗ್ಯವೆಂದು ಒಪ್ಪಿಕೊಳ್ಳುವ ಅಂತರರಾಷ್ಟ್ರೀಯ ಶಿಕ್ಷಾ ನ್ಯಾಯಾಧಿಕರಣದ ಮುಂದೆ ಆಗಲೀ ವಿಚಾರಣೆಗೆ ಒಳಪಡಿಸಲು ಒಡಂಬಡಿಕೆಯ 6ನೇ ಕಲಮಿನಲ್ಲಿ ಅವಕಾಶ ಮಾಡಲಾಗಿದೆ.

### *24. ತಾರತಮ್ಯವನ್ನು ತಡೆಗಟ್ಟುವ ತತ್ವವನ್ನು ಹೇಗೆ ಮತ್ತಷ್ಟು ವಿಸ್ತಾರಗೊಳಿಸಲಾಗಿದೆ ?*

ತಾರತಮ್ಯ ಕೂಡದೆಂಬ ಮೂಲಭೂತ ತತ್ವವು ವಿಶ್ವಸಂಸ್ಥೆಯ ಸಂವಿಧಾನದ 1ನೇ ವಿಧಿಯಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದೆ (6ನೇ ಪ್ರಶ್ನೆಯನ್ನು ನೋಡಿ) ಮತ್ತು ಅಂತರರಾಷ್ಟ್ರೀಯ ಮಾನವಹಕ್ಕುಗಳ ದಸ್ತಾವೇಜುಗಳಲ್ಲೂ ಪ್ರತಿಬಿಂಬಿಸಲ್ಪಟ್ಟಿದೆ. ಈ ವಲಯದಲ್ಲಿರುವ ಎರಡು ನಿರ್ದಿಷ್ಟ ದಸ್ತಾವೇಜುಗಳು ವರ್ಣೀಯ ಎಂದರೆ ಜನಾಂಗೀಯ ತಾರತಮ್ಯ ಮತ್ತು ಮಹಿಳೆಯರ ತಾರತಮ್ಯಕ್ಕೆ ಸಂಬಂಧಿಸಿವೆ.

### *25. ಜನಾಂಗೀಯ ತಾರತಮ್ಯಗಳನ್ನು ತೊಡೆದುಹಾಕಲು ಕಲ್ಪಿಸಿರುವ ಕ್ರಮಗಳೇನು ?*

ಎಲ್ಲ ಬಗೆಯ ವರ್ಣೀಯ ತಾರತಮ್ಯವನ್ನು ನಿರ್ಮೂಲನ ಮಾಡುವ ಅಂತರರಾಷ್ಟ್ರೀಯ ಒಡಂಬಡಿಕೆ 1969ರಲ್ಲಿ ಜಾರಿಗೆ ಬಂದು ಈವರೆಗೆ 140ಕ್ಕೂ ಹೆಚ್ಚು ರಾಷ್ಟ್ರಗಳಿಂದ[12] ಸ್ಥಿರೀಕರಿಸಲ್ಪಟ್ಟಿದೆ. ಜನಾಂಗ, ವರ್ಣ, ವಂಶ ಅಥವಾ ರಾಷ್ಟ್ರೀಯ ಅಥವಾ ಬುಡಕಟ್ಟುಗಳ ಮೇಲೆ ಆಧಾರಿತ ತಾರತಮ್ಯದ ವಿಚಾರದಲ್ಲಿ ಅದು ವಿಶ್ವಸಂಸ್ಥೆಯ ಸಮಗ್ರ ನಿಲುವನ್ನು ಪ್ರತಿನಿಧಿಸುತ್ತದೆ. ಒಡಂಬಡಿಕೆಗೆ ಭಾಗಸ್ಥರಾದ ರಾಷ್ಟ್ರಗಳು ಎಲ್ಲ ಬಗೆಯ ಜನಾಂಗೀಯ ತಾರತಮ್ಯವನ್ನು ನಿರ್ಮೂಲನ ಮಾಡುವ ನೀತಿಯನ್ನು ಅನುಸರಿಸುವ ಮತ್ತು ವಿಶೇಷವಾದ ಜನಾಂಗೀಯ ಗುಂಪುಗಳಿಗೆ ರಕ್ಷಣೆಯನ್ನು ಖಾತರಿಪಡಿಸುವ ಮತ್ತು ಆ ಗುಂಪಿನ ಸದಸ್ಯರಿಗೆ ಮಾನವಹಕ್ಕುಗಳು ಮತ್ತು ಮೂಲಭೂತ ಸ್ವಾತಂತ್ರ್ಯಗಳ ಪರಿಪೂರ್ಣ ಮತ್ತು ಸಮಾನ ಅನುಭೋಗವನ್ನು ಖಚಿತಪಡಿಸುವ ಹೊಣೆ ಹೊತ್ತುಕೊಳ್ಳುತ್ತವೆ.

### *26. ಎಲ್ಲ ಬಗೆಯ ಜನಾಂಗೀಯ ತಾರತಮ್ಯಗಳನ್ನು ನಿರ್ಮೂಲನ ಮಾಡುವುದನ್ನು ಕುರಿತ ಅಂತರರಾಷ್ಟ್ರೀಯ ಒಡಂಬಡಿಕೆಯನ್ನು ಹೇಗೆ ಕಾರ್ಯಗತಗೊಳಿಸಲಾಗಿದೆ ?*

ಸರ್ಕಾರಗಳ ಅನುಪಾಲನೆಯು ಹದಿನೆಂಟು ಜನ ತಜ್ಞರಿಂದ ಕೂಡಿದ, ಒಡಂಬಡಿಕೆಯ 8ನೇ ಕಲಮಿನ ಅನುಸಾರ ರಚನೆಗೊಂಡ, ಜನಾಂಗೀಯ ತಾರತಮ್ಯ ನಿರ್ಮೂಲನಾ ಸಮಿತಿಯ (ಸಿ.ಇ.ಆರ್.ಡಿ.) ಉಸ್ತುವಾರಿಗೆ ಒಳಪಟ್ಟಿದೆ. ಸಮಿತಿಗೆ ಹಲವಾರು ಕರ್ತವ್ಯಗಳಿವೆ. ಭಾಗಸ್ಥ ರಾಷ್ಟ್ರಗಳು ಒಡಂಬಡಿಕೆಯನ್ನು ಅನುಷ್ಠಾನಗೊಳಿಸುವಲ್ಲಿ ಕೈಗೊಂಡ ಕ್ರಮಗಳ ಬಗ್ಗೆ ನೀಡುವ ನಿಯತಕಾಲಿಕ ವರದಿಗಳನ್ನು ಪರಿಶೀಲಿಸುವುದು ಅದರ ಮುಖ್ಯ ಕೆಲಸ. ವರದಿಗಳ ಪರಿಶೀಲನೆಯ ಸಂದರ್ಭದಲ್ಲಿ ಸರ್ಕಾರಗಳು ಪ್ರತಿನಿಧಿಸಲ್ಪಟ್ಟಿರುತ್ತವೆ ಮತ್ತು ಸಮಿತಿಯು, ತಮ್ಮ ಕರ್ತವ್ಯಗಳನ್ನು ಸರ್ಕಾರಗಳು ಪಾಲಿಸುವಂತೆ ಪ್ರೋತ್ಸಾಹಿಸಲು ಅನೌಪಚಾರಿಕ ಸಂವಾದ ತಂತ್ರವನ್ನು ಅನುಸರಿಸುತ್ತದೆ. ತನ್ನ ಅಂತಿಮ ವರದಿಯಲ್ಲಿ ಸಮಿತಿಯು

ಪ್ರತಿ ರಾಷ್ಟ್ರೀಯ ವರದಿಯ ಬಗ್ಗೆ, ಇನ್ನಷ್ಟು ಪರಿಣಾಮಕಾರಿಯಾಗಿ ಒಡಂಬಡಿಕೆಯನ್ನು ಅನುಷ್ಠಾನಗೊಳಿಸುವ ಮಾರ್ಗಗಳ ಬಗ್ಗೆ, ಸಲಹೆ ಮತ್ತು ಶಿಫಾರಸುಗಳನ್ನು ಮತ್ತು ತನ್ನ ನಿರ್ಧಾರಾತ್ಮಕ ಅಭಿಪ್ರಾಯಗಳನ್ನು ತಿಳಿಸುತ್ತದೆ. ಕೆಲವು ದೇಶಗಳು ಇವುಗಳನ್ನು ಗಮನಕ್ಕೆ ತೆಗೆದುಕೊಂಡು, ಜನಾಂಗೀಯ ತಾರತಮ್ಯವನ್ನು ಶಿಕ್ಷಾರ್ಹ ಅಪರಾಧವನ್ನಾಗಿ ಮಾಡಲು ತಮ್ಮ ರಾಜ್ಯಾಂಗಗಳನ್ನೂ ಮತ್ತು ದೇಶೀಯ ಶಾಸನಗಳನ್ನೂ ತಿದ್ದುಪಡಿ ಮಾಡಿವೆ ಮತ್ತು ಜನಾಂಗೀಯ ತಾರತಮ್ಯ ಸಮಸ್ಯೆಯನ್ನು ವ್ಯವಹರಿಸಲು ಹೊಸ ವಿಭಾಗಗಳನ್ನು ಹಾಗೂ ಶೈಕ್ಷಣಿಕ ಕಾರ್ಯಕ್ರಮಗಳನ್ನು ಸ್ಥಾಪಿಸಿವೆ.

ಸಮಿತಿ ಪ್ರತಿವರ್ಷ ವಿಶ್ವಸಂಸ್ಥೆಯ ಮಹಾಧಿವೇಶನಕ್ಕೆ ವರದಿ ಸಲ್ಲಿಸುತ್ತದೆ ಮತ್ತು ಅದು ತನ್ನ ಸಲಹೆಗಳ ಹಾಗೂ ಸಾರ್ವತ್ರಿಕ ಶಿಫಾರಸುಗಳಿಗೆ ಅನುಮೋದನೆ ಮತ್ತು ಅಧಿಕಾರಮುದ್ರೆ ನೀಡಲು ಮಹಾಧಿವೇಶನವನ್ನೇ ಅವಲಂಬಿಸಿದೆ. ರಾಷ್ಟ್ರಗಳ ಮಧ್ಯದ ದೂರುಗಳ ಬಗ್ಗೆ ವ್ಯವಹರಿಸಲು ಇರುವ ಅವಕಾಶಗಳ ವಿಧಿವಿಧಾನಗಳನ್ನು ಜಾರಿಗೊಳಿಸುವುದು (ಈವರೆಗೂ ಯಾವ ದೇಶದಲ್ಲಿಯೂ ಇದು ನಡೆದಿಲ್ಲ) ಸಮಿತಿಯ ಇನ್ನಿತರ ಕೆಲಸಗಳಾಗಿವೆ.

### *27. ಜನಾಂಗೀಯ ತಾರತಮ್ಯ ನಿರ್ಮೂಲನಾ ಸಮಿತಿ (ಸಿ.ಇ.ಆರ್.ಡಿ) ಇನ್ನಿತರ ಏನು ಕ್ರಮಗಳನ್ನು ಕೈಗೊಳ್ಳುತ್ತದೆ?*

ಜನಾಂಗಭೇದವನ್ನು ತಡೆಗಟ್ಟುವ ಗುರಿಯುಳ್ಳ ಕ್ರಮಗಳನ್ನು ಸಮಿತಿ ರೂಪಿಸುತ್ತಿದೆ. ಅಸ್ತಿತ್ವದಲ್ಲಿರುವ ಸಮಸ್ಯೆಗಳು ಘರ್ಷಣೆಯಾಗಿ ಬೆಳೆಯದಂತೆ ತಡೆಯಲು ಮುನ್ನೆಚ್ಚರಿಕೆಯ ಕ್ರಮಗಳು, ಜನಾಂಗೀಯ ಸಹಿಷ್ಣುತೆ, ಶಾಂತಿಯುತ ಸಹಬಾಳ್ವೆಯನ್ನು ಬಲಗೊಳಿಸುವ ದಿಶೆಯಲ್ಲಿನ ಉಪಕ್ರಮಗಳು - ಇವುಗಳನ್ನು ಅದು ಒಳಗೊಂಡಿದೆ. ಒಡಂಬಡಿಕೆಯ ಉಲ್ಲಂಘನೆಯಿಂದ ಉಂಟಾಗುವ ತೀವ್ರ ಸಮಸ್ಯೆಗಳಿಗೆ ಸ್ಪಂದಿಸಿ ತುರ್ತು ಪ್ರತಿಬಂಧಕ ಕ್ರಮವನ್ನು ಅದು ಕೈಗೊಳ್ಳುತ್ತದೆ. ಇಂಥ ಸನ್ನಿವೇಶದಲ್ಲಿ, ಸಮಿತಿಯು ನಿರ್ದಿಷ್ಟವಾಗಿ ಸಂಬಂಧಿಸಿದ ಪ್ರದೇಶದಲ್ಲಿನ ಸ್ಥಳಕ್ಕೆ ನೇರವಾಗಿ ರಾಯಭಾರ ಮಂಡಳಿಗಳನ್ನು ಕಳಿಸಲೂ ಕ್ರಮಗಳನ್ನು ಕೈಗೊಂಡಿದೆ.[13]

### *28. ಒಡಂಬಡಿಕೆಯ ಉಲ್ಲಂಘನೆಗಳ ಬಗ್ಗೆ ವ್ಯಕ್ತಿಗಳು ಸಮಿತಿಗೆ ದೂರುಗಳನ್ನು ನೀಡಬಹುದೇ?*

ಸಂಬಂಧಿಸಿದ ದೇಶಗಳು ವ್ಯಕ್ತಿಗತ ಮನವಿಗಳಿಗೆ ಮಾನ್ಯತೆ ನೀಡಿದ್ದಲ್ಲಿ, ಒಡಂಬಡಿಕೆಯ 14ನೇ ಕಲಮು ಆ ದೇಶದ ವಿರುದ್ಧ ಒಬ್ಬ ವ್ಯಕ್ತಿ ಅಥವಾ ಗುಂಪು ಕೊಟ್ಟ ದೂರನ್ನು ಗೌಪ್ಯ ಸಭೆಯಲ್ಲಿ ಪರಿಶೀಲಿಸಲು ಅವಕಾಶ ನೀಡಿದೆ. ಈ ಕಾರ್ಯವಿಧಾನ ಡಿಸೆಂಬರ್ 1982ರಿಂದ ಜಾರಿಯಲ್ಲಿದೆ. ಇಪ್ಪತ್ತಕ್ಕಿಂತ[14] ಹೆಚ್ಚು ದೇಶಗಳು ಈ ಹಕ್ಕನ್ನು ಮಾನ್ಯ ಮಾಡಿವೆ; ಸಮಿತಿಯು ಅನೇಕ ಪ್ರಕರಣಗಳನ್ನು

ಪರಿಶೀಲಿಸಿ ತೀರ್ಮಾನ ಕೈಗೊಂಡಿದೆ ಮತ್ತು ಅವುಗಳ ಮೇಲೆ ತನ್ನ ಅಭಿಪ್ರಾಯಗಳನ್ನು ಪ್ರಕಟಿಸಿದೆ.[15]

## *29. ಬೇರೆ ಮಾನದಂಡಗಳಲ್ಲೂ ಈ ತಾತ್ವಿಕ ಅಂಶಗಳು ಪ್ರತಿಬಿಂಬಿಸಲ್ಪಟ್ಟಿವೆಯೇ ?*

1978ರಲ್ಲಿ ಜಯಘೋಷದೊಂದಿಗೆ ಸ್ವೀಕೃತವಾದ ಜನಾಂಗ ಹಾಗೂ ಜನಾಂಗೀಯ ಪೂರ್ವಗ್ರಹದ ಮೇಲಿನ ಯುನೆಸ್ಕೋ ಘೋಷಣೆ ಈ ವಿಚಾರದಲ್ಲಿ ಅತ್ಯಂತ ಪ್ರಮುಖ ದಸ್ತಾವೇಜಾಗಿದೆ. ಜತೆಯಲ್ಲಿಯೇ ಈ ಘೋಷಣೆಯ ತತ್ವಗಳನ್ನು ಜಾರಿಗೆ ತರಲು ತಾವು ಕೈಗೊಂಡ ಕ್ರಮಗಳ ಬಗ್ಗೆ, ಮಹಾ ನಿರ್ದೇಶಕರ ಮೂಲಕ, ಮಹಾಸಮ್ಮೇಳನಕ್ಕೆ ವರದಿ ಸಲ್ಲಿಸುವಂತೆ, ಸದಸ್ಯ ರಾಷ್ಟ್ರಗಳನ್ನು ಒತ್ತಾಯಿಸುವ ಘೋಷಣೆಯ ಅನುಷ್ಠಾನಕ್ಕೆ ಸಂಬಂಧಿಸಿದ ನಿರ್ಣಯವನ್ನು ಮಾಡಲಾಗಿದೆ. ಈ ಘೋಷಣೆಯಲ್ಲಿ ನಮೂದಿಸಿರುವ ತತ್ವಗಳನ್ನು ಅನುಷ್ಠಾನಕ್ಕೆ ತರುವ ಬಗ್ಗೆ ಸಹಕರಿಸಿ ನೆರವಾಗುವಂತೆ ಅಂತರರಾಷ್ಟ್ರೀಯ ಸರಕಾರೇತರ ಸಂಘಟನೆಗಳಿಗೂ ಕರೆ ನೀಡಲಾಗಿದೆ.

## *30. ಲಿಂಗಾಧಾರಿತ ತಾರತಮ್ಯವನ್ನೆದುರಿಸಲು ಕಲ್ಪಿಸಿರುವ ಅವಕಾಶಗಳೇನು ?*

ಮಹಿಳೆಯರ ವಿರುದ್ಧ ಎಲ್ಲ ಬಗೆಯ ತಾರತಮ್ಯವನ್ನು ನಿರ್ಮೂಲನ ಮಾಡುವ ಒಡಂಬಡಿಕೆಯು 18ನೇ ಡಿಸೆಂಬರ್ 1979ರಲ್ಲಿ ವಿಶ್ವಸಂಸ್ಥೆಯ ಮಹಾಧಿವೇಶನದಲ್ಲಿ ಸ್ವೀಕೃತವಾಯಿತು. 2ನೇ ಸೆಪ್ಟೆಂಬರ್ 1981ರಿಂದ ಅದು ಜಾರಿಗೆ ಬಂತು. ಈವರೆಗೆ ಈ ಒಡಂಬಡಿಕೆಗೆ 150ಕ್ಕೂ[16] ಹೆಚ್ಚು ದೇಶಗಳು ಸಮ್ಮತಿಸಿವೆ. ದೇಶ ದೇಶಗಳ ಮಧ್ಯದ ದೂರುಗಳಿಗಾಗಲೀ ಅಥವಾ ವ್ಯಕ್ತಿಗತ ದೂರುಗಳಿಗಾಗಲೀ ಈ ಒಡಂಬಡಿಕೆಯಲ್ಲಿ ಅವಕಾಶವಿಲ್ಲ.

ಈ ಒಡಂಬಡಿಕೆಯ ವಿಧಿಗಳನ್ನು ಅನುಪಾಲಿಸಿರುವುದರ ಬಗ್ಗೆ ಭಾಗಸ್ಥ ದೇಶಗಳು ಸಲ್ಲಿಸುವ ನಿಯತಕಾಲಿಕ ವರದಿಗಳನ್ನು ಇಪ್ಪತ್ಮೂರು ಸ್ವತಂತ್ರ ತಜ್ಞರಿರುವ, ಮಹಿಳೆಯರ ವಿರುದ್ಧ ತಾರತಮ್ಯ ನಿರ್ಮೂಲನಾ ಸಮಿತಿ ಪರಿಶೀಲಿಸುತ್ತದೆ. ಆ ತಜ್ಞ ಸಮಿತಿಯು ಒಡಂಬಡಿಕೆಯ 17ನೇ ಕಲಮಿನನ್ವಯ ರಚಿತವಾಗಿದೆ. ಸಮಿತಿಯು ಒಡಂಬಡಿಕೆಯ ನಿರ್ದಿಷ್ಟ ಕಲಮುಗಳ ಮೇಲೆ ಅಥವಾ ಒಡಂಬಡಿಕೆಗೆ ಸಂಬಂಧಿಸಿದ ವಿಷಯಗಳ ಮೇಲೆ ಸಾರ್ವತ್ರಿಕ ಶಿಫಾರಸುಗಳನ್ನು ಮಾಡುತ್ತದೆ. 1992ರಲ್ಲಿ ಮಹಿಳೆಯರ ಮೇಲಿನ ಹಿಂಸಾಚಾರದ ಬಗ್ಗೆ ಕ್ರಮಸಂಖ್ಯೆ 19 ಶಿಫಾರಸನ್ನು ಮಾಡಲಾಯಿತು. ಈ ಶಿಫಾರಸಿನಲ್ಲಿನ ವಿಷಯ ಒಡಂಬಡಿಕೆಯಲ್ಲಿ ನಿರ್ದಿಷ್ಟವಾಗಿ ಹೇಳಲ್ಪಟ್ಟಿಲ್ಲದಿದ್ದಾಗ್ಯೂ ಅದು ಮಹಿಳೆಯರ ವಿರುದ್ಧದ ತಾರತಮ್ಯವೆಂದು ಮತ್ತು ಒಡಂಬಡಿಕೆಯು ಇನ್ನಿತರ ಕಲಮುಗಳೂ ಸೇರಿದಂತೆ 1 ರಿಂದ 4ನೇ ಕಲಮುಗಳ ಉಲ್ಲಂಘನೆಯೆಂದು, ಸಮಿತಿ ಪರಿಗಣಿಸಿದೆ. ಈ ಶಿಫಾರಸು ಮಹಿಳೆಯರನ್ನು

ಹಿಂಸಾಚಾರದಿಂದ ರಕ್ಷಿಸುವ ಬಗ್ಗೆ ರಾಷ್ಟ್ರಗಳು ಕೈಗೊಳ್ಳಬೇಕಾದ ನಿರ್ದಿಷ್ಟ ಕ್ರಮಗಳನ್ನು ಸಲಹೆ ಮಾಡಿದೆ. ಸದಸ್ಯ ರಾಷ್ಟ್ರಗಳ.ವರದಿಯ ಪರಿಶೀಲನೆ, ನಿರ್ಧಾರಿತ ಅಭಿಪ್ರಾಯಗಳು ಮತ್ತು ಸಾರ್ವತ್ರಿಕ ಶಿಫಾರಸುಗಳ ದಾಖಲೆಗಳನ್ನೊಳಗೊಂಡ ವಾರ್ಷಿಕ ವರದಿಯನ್ನು ಸಮಿತಿ ವಿಶ್ವಸಂಸ್ಥೆಯ ಮಹಾಧಿವೇಶನಕ್ಕೆ ಸಲ್ಲಿಸುತ್ತದೆ.

### *31. ಮಹಿಳೆಯರ ಹಕ್ಕುಗಳ ಬಗ್ಗೆ ಒಂದು ಪ್ರತ್ಯೇಕ ಒಡಂಬಡಿಕೆ ಇರುವುದೇಕೆ?*

ಮಹಿಳೆಯ ವಿರುದ್ಧದ ಎಲ್ಲ ಬಗೆಯ ತಾರತಮ್ಯ ನಿರ್ಮೂಲನೆಯ ಒಡಂಬಡಿಕೆಯ ಉದ್ದೇಶ ಗಂಡು ಹೆಣ್ಣುಗಳ ಮಧ್ಯೆ ಸಮಾನತೆಯನ್ನು ಅನುಷ್ಠಾನಕ್ಕೆ ತರುವುದು ಹಾಗೂ ಬಲಾತ್ಕಾರದ ಮದುವೆಗಳು, ಕೌಟುಂಬಿಕ ಹಿಂಸೆ, ಶಿಕ್ಷಣ, ಆರೋಗ್ಯ, ಸಾರ್ವಜನಿಕ ಜೀವನ ಮತ್ತು ಕೆಲಸದ ಸ್ಥಳದಲ್ಲಿನ ತಾರತಮ್ಯ ಮುಂತಾದ ನಿರ್ದಿಷ್ಟ ಬಗೆಯ ತಾರತಮ್ಯವನ್ನು ತಡೆಗಟ್ಟುವುದು. ಲಿಂಗ ಸಮಾನತೆ ಕಾರ್ಯವನ್ನು ಮುಂದುವರಿಸಲು ಆಜ್ಞಪ್ತವಾಗಿ 1946ರಲ್ಲಿ ಸ್ಥಾಪನೆಯಾದ ಮಹಿಳಾ ಆಯೋಗ



(ಸರ್ಕಾರಿ ಪ್ರತಿನಿಧಿಗಳ ಒಂದು ಘಟಕ) ಈ ವಿಷಯಗಳನ್ನು ಪ್ರಾರಂಭಿಕ ಹಂತದಲ್ಲೇ ಮಾನ್ಯ ಮಾಡಿತ್ತು. ಆ ಆಯೋಗಕ್ಕೆ ಒಡಂಬಡಿಕೆಯ ಕರಡನ್ನು ಸಿದ್ಧಪಡಿಸುವ ಕೆಲಸವನ್ನು ವಹಿಸಲಾಗಿತ್ತು. ಮಾನವಹಕ್ಕುಗಳು ಅವಿಭಾಜ್ಯವೆಂಬುದಕ್ಕೆ ಒತ್ತು ಕೊಡುವುದರೊಂದಿಗೆ ಆಯೋಗವು ಪುರುಷ-ಮಹಿಳೆಯರ ನಡುವೆ ಅಸಮತೆ ತಗ್ಗುವಂತೆ ಪ್ರಭಾವ ಬೀರುವ ವಿಷಯಗಳಲ್ಲಿ ಮತ್ತು ಅಭಿವೃದ್ಧಿ ವಿಷಯಗಳ ಬಗ್ಗೆ ತನ್ನ ಲಕ್ಷ್ಯವನ್ನು ಕೇಂದ್ರೀಕರಿಸಿದೆ. ಇತ್ತೀಚೆಗೆ ಆಯೋಗವು ಮಹಿಳೆಯರ ಹಕ್ಕುಗಳ ಅನುಷ್ಠಾನವನ್ನು ಖಾತರಿಗೊಳಿಸುವ, ವ್ಯಾವಹಾರಿಕ ಕ್ರಮಗಳ ಬಗ್ಗೆ ಕಾಳಜಿ ವಹಿಸಿದೆ.

### *32. ಮಹಿಳಾ ಸಮಾನತೆಯನ್ನು ನಿಶ್ಚಿತಗೊಳಿಸಲು ಅನುಸರಿಸಲಾಗುತ್ತಿರುವ ಕಾರ್ಯತಂತ್ರಗಳೇನು?*

ಎಲ್ಲ ಚಟುವಟಿಕೆಗಳಲ್ಲೂ ಮಹಿಳೆಯರಿಗೆ ಸಂಬಂಧಿಸಿದ ಮಾನವಹಕ್ಕುಗಳನ್ನು ಅಂತರ್ಗತಗೊಳಿಸುವುದು ಮತ್ತು ಮಹಿಳೆಯರಿಗೇ ವಿಶೇಷವಾಗಿ ಸಂಬಂಧಿಸಿದ ಹಕ್ಕುಗಳ ಉಲ್ಲಂಘನೆಗಳ ಬಗ್ಗೆ ವ್ಯವಹರಿಸಲು, ವಿಶೇಷ ಸಾಂಸ್ಥಿಕ ವಿನ್ಯಾಸವನ್ನು ರೂಪಿಸುವುದು ವಿಶ್ವಸಂಸ್ಥೆಯ ಕಾರ್ಯತಂತ್ರಗಳ ಸ್ಥೂಲ ಗುರಿಯಾಗಿದೆ.

ಮಹಿಳೆಯರ ಹಕ್ಕುಗಳನ್ನು ಮತ್ತಷ್ಟು ಉತ್ತೇಜಿಸುವುದಕ್ಕಾಗಿ ವಿಶ್ವಸಂಸ್ಥೆ ಅನೇಕ ವಿಶ್ವ ಸಮ್ಮೇಳನಗಳನ್ನು ಏರ್ಪಡಿಸಿತು: ಮೆಕ್ಸಿಕೋ ದೇಶದ ಮೆಕ್ಸಿಕೋ ನಗರದಲ್ಲಿ (19ನೇ ಜೂನ್ - 2ನೇ ಜುಲೈ 1975)[17], ಕೋಪನ್‌ಹೇಗನ್, ಡೆನ್ಮಾರ್ಕ್ (24-30 ಜುಲೈ 1980)[18] ನೈರೋಬಿ, ಕೆನ್ಯಾ (15-26 ಜುಲೈ 1985). 1985ರಲ್ಲಿ ನಡೆದ ಮಹಿಳಾ ವಿಷಯಕ ವಿಶ್ವ ಸಮ್ಮೇಳನ 2000ನೇ ವರ್ಷದವರೆಗೆ ಮಹಿಳಾ ಮುನ್ನಡೆಗೆ ನೈರೋಬಿಯಲ್ಲಿ ಘೋಷಿತವಾದ ಪ್ರಗತಿಪರ ಕಾರ್ಯತಂತ್ರವನ್ನು ಸ್ವೀಕಾರ




ಮಾಡಿತು. ಇದು ಜೀವನದ ಎಲ್ಲ ಕ್ಷೇತ್ರಗಳಲ್ಲೂ ಮಹಿಳೆಯರ ನೈಜ ಸಮಾನತೆಯನ್ನು ಸಾಧಿಸುವ ಮತ್ತು ಮಹಿಳೆಯರ ವಿರುದ್ಧದ ಎಲ್ಲ ಬಗೆಯ ಮತ್ತು ಸ್ವರೂಪದ ತಾರತಮ್ಯವನ್ನು ನಿರ್ಮೂಲನ ಮಾಡುವ ಗುರಿ ಹೊಂದಿದೆ.

ವಿಯೆನ್ನಾ ಘೋಷಣೆ ಮತ್ತು ಕ್ರಿಯಾ ಯೋಜನೆ (1993) ವಿಶ್ವಸಂಸ್ಥೆಯ ಮಾನವಹಕ್ಕುಗಳ ವ್ಯವಸ್ಥೆಯೊಳಗೆ ಮಹಿಳೆಯರ ಹಕ್ಕುಗಳನ್ನು ಹೆಚ್ಚು ಹೆಚ್ಚು ಅಂತರ್ಗತಗೊಳಿಸಲು ಕರೆ ನೀಡಿತು. ಅದಕ್ಕಿಂತ ಹೆಚ್ಚಾಗಿ ಅದು ಮಹಿಳೆಯರ

ಹಕ್ಕುಗಳ ನಿರ್ದಿಷ್ಟತೆಯನ್ನು ಗುರುತಿಸುವ ಮತ್ತು ಮಹಿಳೆಯರ ವಿರುದ್ಧದ ಎಲ್ಲ ಬಗೆಯ ತಾರತಮ್ಯ ನಿರ್ಮೂಲನೆಯ ಒಡಂಬಡಿಕೆಯನ್ನು ಇನ್ನೂ ಹೆಚ್ಚು ಬಲಯುತವಾಗಿ ಅನುಷ್ಠಾನಕ್ಕೆ ತರುವುದೂ ಸೇರಿದಂತೆ, ಅವುಗಳ ಅನುಷ್ಠಾನದ ಮಾರ್ಗೋಪಾಯಗಳನ್ನು ಅಭಿವೃದ್ಧಿಪಡಿಸುವುದರ ಆವಶ್ಯಕತೆಯನ್ನು ದೃಢಪಡಿಸಿತು.

ವಿಯೆನ್ನಾ ಘೋಷಣೆಯ ಮುಂಬರಿಕೆಯ ಕ್ರಮವಾಗಿ ಮಾನವಹಕ್ಕುಗಳ ಆಯೋಗ ತನ್ನ ಐವತ್ತನೇ ಸಮಾವೇಶದಲ್ಲಿ "ವಿಶ್ವಸಂಸ್ಥೆಯ ವ್ಯಾಪಕ ವ್ಯವಸ್ಥಿತ ಚಟುವಟಿಕೆಗಳ ಮುಖ್ಯವಾಹಿನಿಯಲ್ಲಿ ಮಹಿಳಾ ಸಮಾನತೆ ಮತ್ತು ಮಹಿಳೆಯರಿಗೆ ಸಂಬಂಧಿಸಿದ ಮಾನವಹಕ್ಕುಗಳನ್ನು ಅಂತರ್ಗತಗೊಳಿಸಲು ಅಂತರರಾಷ್ಟ್ರೀಯ ಮಟ್ಟದ ತೀವ್ರ ಪ್ರಯತ್ನಗಳಿಗೆ" ಕರೆ ನೀಡುವ ನಿರ್ಣಯವನ್ನು ಅಂಗೀಕರಿಸಿತು.[19]

1993ರಲ್ಲಿ[20] ವಿಶ್ವಸಂಸ್ಥೆಯ ಮಹಾಧಿವೇಶನವು ಅಂಗೀಕರಿಸಿದ ಮಹಿಳೆಯರ ವಿರುದ್ಧ ಹಿಂಸಾಚಾರ ನಿರ್ಮೂಲನೆಯ ಘೋಷಣೆ, ಎಲ್ಲ ರಾಷ್ಟ್ರಗಳು ಮಹಿಳೆಯರ ವಿರುದ್ಧದ ಹಿಂಸಾಚಾರವನ್ನು ತಡೆಯಲು ಮತ್ತು ಅದನ್ನು ಶಿಕ್ಷಿಸಲು ಕ್ರಮಕೈಗೊಳ್ಳಬೇಕೆಂದು ಕರೆ ನೀಡಿದೆ. ಮಾರ್ಚ್ 1994ರಲ್ಲಿ ಮಾನವಹಕ್ಕುಗಳ ಆಯೋಗವು ಮಹಿಳೆಯರ ವಿರುದ್ಧದ ಹಿಂಸಾಚಾರದ ಕಾರಣಗಳನ್ನೂ ಪರಿಣಾಮಗಳನ್ನೂ ಪರಿಶೀಲಿಸುವ ಆದೇಶದೊಂದಿಗೆ ಮಹಿಳೆಯರ ವಿರುದ್ಧದ ಹಿಂಸಾಚಾರದ ಬಗ್ಗೆ ಒಬ್ಬ ವಿಶೇಷ ಸಾಮರಸ್ಯಾಧಿಕಾರಿಯನ್ನು ನೇಮಿಸಿತು.

4-15ನೇ ಸೆಪ್ಟೆಂಬರ್ 1995ರಲ್ಲಿ ಚೈನಾದ ಬೀಜಿಂಗ್‌ನಲ್ಲಿ 4ನೇ ವಿಶ್ವ ಮಹಿಳಾ ಸಮ್ಮೇಳನವು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಅವರ ಪೂರ್ಣ ಸಂಯೋಜನೆ, ಸಮಾಜದಲ್ಲಿ ಅವರ ಸ್ಥಾನಮಾನ, ಸುಧಾರಣೆ, ಶಿಕ್ಷಣದಲ್ಲಿ ಹೆಚ್ಚು ಹೆಚ್ಚು ಅವಕಾಶಗಳೂ ಸೇರಿದಂತೆ ಮಹಿಳೆಯರ ಪ್ರಗತಿಯನ್ನು ನಿಶ್ಚಿತಗೊಳಿಸುವ ಸಲುವಾಗಿ ಕ್ರಮ ಕೈಗೊಳ್ಳುವುದರ ಪ್ರಾಮುಖ್ಯತೆಯನ್ನು ದೃಢಪಡಿಸಿದೆ.

### *33. ಅಂತರರಾಷ್ಟ್ರೀಯ ಮಾನವಹಕ್ಕುಗಳ ಶಾಸನದಡಿಯಲ್ಲಿ ಮಗುವಿನ ಹಕ್ಕುಗಳು ರಕ್ಷಿಸಲ್ಪಟ್ಟಿವೆಯೇ?*

20ನೇ ನವೆಂಬರ್ 1989ರಲ್ಲಿ ವಿಶ್ವಸಂಸ್ಥೆಯ ಮಹಾಧಿವೇಶನ ಅದನ್ನು ಅಂಗೀಕರಿಸಿದ ನಂತರ ಒಂದು ವರ್ಷದೊಳಗೇ, 2ನೇ ಸೆಪ್ಟೆಂಬರ್ 1990ರಲ್ಲಿ ಮಗುವಿನ ಹಕ್ಕುಗಳ ಮೇಲಿನ ಒಡಂಬಡಿಕೆ ಜಾರಿಗೆ ಬಂತು. ಇಲ್ಲಿಯವರೆಗೆ ಅತಿ ಹೆಚ್ಚು ದಾಖಲೆ ಸಂಖ್ಯೆಯ 180ಕ್ಕೂ ಹೆಚ್ಚು ದೇಶಗಳು ಒಡಂಬಡಿಕೆಯನ್ನು ಸ್ಥಿರೀಕರಿಸಿವೆ.[21] ಒಡಂಬಡಿಕೆಗೆ ಭಾಗಸ್ಥ ದೇಶಗಳು ಅದರಲ್ಲಿ ಮಾನ್ಯ ಮಾಡಿರುವ ಹಕ್ಕುಗಳನ್ನು ಅನುಷ್ಠಾನಕ್ಕೆ ತರಲು ಎಲ್ಲ ಯುಕ್ತ ಕ್ರಮಗಳನ್ನು ಕೈಗೊಳ್ಳಲು, ಮತ್ತು ಹಾಗೆ ಮಾಡುವಾಗ ಮಗುವಿನ ಹಿತವೇ ಪ್ರಮುಖ ಕಾಳಜಿ ಮತ್ತು ಮಾರ್ಗದರ್ಶಿ ಸೂತ್ರವಾಗಿರುವುದಾಗಿಯೂ ಒಪ್ಪಿಕೊಂಡಿವೆ. ಒಡಂಬಡಿಕೆಯಲ್ಲಿನ ಅವಕಾಶಗಳು

ವಿಸ್ತೃತ ವ್ಯಾಪ್ತಿಯನ್ನು ಹೊಂದಿವೆ ಮತ್ತು ಮಗುವಿನ ಕೌಟುಂಬಿಕ ಜೀವನದ ಮಹತ್ವಕ್ಕೆ ಮಾನ್ಯತೆಯನ್ನೂ ಒಳಗೊಂಡಿವೆ.

ಒಡಂಬಡಿಕೆಯ ಅನುಷ್ಠಾನದ ಬಗ್ಗೆ ಭಾಗಸ್ಥ ದೇಶಗಳು ಒಪ್ಪಿಸುವ ವರದಿಗಳನ್ನು, ಒಡಂಬಡಿಕೆಯನ್ವಯ ಸ್ಥಾಪಿಸಿರುವ ಹತ್ತು ಸ್ವತಂತ್ರ ತಜ್ಞರಿಂದೊಡಗೂಡಿದ ಮಗುವಿನ ಹಕ್ಕುಗಳ ಸಮಿತಿ ಪರಿಶೀಲಿಸುತ್ತದೆ. ಅಂಥ ನಿಯತಕಾಲಿಕ ವರದಿಗಳ ಮೇಲೆ ಸಲಹೆ ಶಿಫಾರಸುಗಳನ್ನು ಒಳಗೊಂಡಂತೆ ಸಮಿತಿ ತನ್ನ ನಿರ್ಧಾರಿತ ಅಭಿಪ್ರಾಯಗಳನ್ನು ನೀಡುತ್ತದೆ. ಭಾಗಸ್ಥ ದೇಶಗಳ ವರದಿಯ ಪರಿಶೀಲನೆಯ ಸಂದರ್ಭದಲ್ಲಿ ತಜ್ಞ ವಿಭಾಗಗಳು ಹಾಜರಿರಬಹುದು ಮತ್ತು ಅವುಗಳನ್ನೇ ತಮ್ಮ ತಮ್ಮ ತಜ್ಞತೆಯ ವಲಯಕ್ಕೆ ಸಂಬಂಧಿಸಿದಂತೆ ತಿಳಿವಳಿಕೆ ಅಥವಾ ಸಲಹೆ ನೀಡುವಂತೆ ಸಮಿತಿಯು ಆಹ್ವಾನಿಸಬಹುದು. ದೇಶಗಳಿಂದ ಬಂದ ವರದಿಗಳಿಂದ ಉದ್ಭವಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಸಮಿತಿಯು ತಜ್ಞ ವಿಭಾಗಗಳಿಗೆ ತಾಂತ್ರಿಕ ಸಲಹೆ ಅಥವಾ ನೆರವಿನ ಅವಶ್ಯಕತೆಯ ಬಗ್ಗೆ ಕೋರಿಕೆಗಳನ್ನು ಕಳಿಸಬಹುದು. ಈ ಒಡಂಬಡಿಕೆಯ ಅನುಷ್ಠಾನದಲ್ಲಿ ಮುಖ್ಯ ಪಾತ್ರವಹಿಸುವ ವಿಶ್ವಸಂಸ್ಥೆಯ ಮಕ್ಕಳನಿಧಿ (ಯೂನಿಸೆಫ್)[22] ಈ ಕಾರ್ಯಕಲಾಪಗಳಲ್ಲಿ ಗಣನೀಯ ಪಾತ್ರ ನಿರ್ವಹಿಸುತ್ತದೆ.

ಮಗುವಿನ ಹಕ್ಕುಗಳಿಗೆ ಸಂಬಂಧಿಸಿದ ನಿರ್ದಿಷ್ಟ ವಿಷಯಗಳ ಮೇಲೆ ಮಹಾಕಾರ್ಯದರ್ಶಿಗಳು, ಅಧ್ಯಯನವನ್ನು ಕೈಗೊಳ್ಳಬೇಕೆಂದು ಸಮಿತಿಯು



ಮಹಾಧಿವೇಶನಕ್ಕೆ ಶಿಫಾರಸು ಮಾಡಬಹುದು. ('ಸಶಸ್ತ್ರ ಘರ್ಷಣೆಯ ಸಂದರ್ಭದಲ್ಲಿ ಮಕ್ಕಳು' ಎಂಬುದು ಇತ್ತೀಚಿನ ಅಧ್ಯಯನದ ಒಂದು ವಿಷಯವಾಗಿತ್ತು.) ಈ ಕೃತ್ಯಗಳು ಹೆಚ್ಚು ಹೆಚ್ಚಾಗಿ ಅಂತರ ರಾಷ್ಟ್ರೀಯವಾಗುತ್ತಿರುವುದನ್ನು ಗಮನಿಸಿ, ಮಾನವಹಕ್ಕುಗಳ ಆಯೋಗ ನೇಮಿಸಿರುವ ವಿಶೇಷ ಸಾಮರಸ್ಯಾಧಿಕಾರಿ (7ನೇ ಪ್ರಶ್ನೆಯನ್ನು ನೋಡಿ)ಗಳು ಮಕ್ಕಳ ಮಾರಾಟ, ಬಾಲ ವೇಶ್ಯಾವೃತ್ತಿ ಮತ್ತು ಅಶ್ಲೀಲ ಸಾಹಿತ್ಯಕ್ಕೆ ಮಕ್ಕಳ ಬಳಕೆ ಇವುಗಳ ಬಗ್ಗೆ ತನಿಖೆ ನಡೆಸುತ್ತಿದ್ದಾರೆ. ಆಫ್ರಿಕಾ ಐಕ್ಯತಾ ಸಂಘಟನೆ (73ನೇ ಪ್ರಶ್ನೆಯನ್ನು ನೋಡಿ) ಸ್ವೀಕಾರ ಮಾಡಿರುವ ಮಕ್ಕಳ ಹಕ್ಕು ಹಾಗೂ ಯೋಗಕ್ಷೇಮದ ಸಂವಿಧಾನ, ಹದಿನೈದು ಭಾಗಸ್ಥ ದೇಶಗಳು[23] ಅದನ್ನು ಸ್ವೀಕರಿಸಿದ ನಂತರ ಜಾರಿಗೆ ಬರಲಿದೆ.

### *34. ಅಲ್ಪಸಂಖ್ಯಾತರ ರಕ್ಷಣೆಗೆ ಏನು ಕ್ರಮಕೈಗೊಳ್ಳಲಾಗಿದೆ?*

ಅಲ್ಪಸಂಖ್ಯಾತರ ಸಮಸ್ಯೆ ಬಹಳ ಕಾಲದ್ದು ಮತ್ತು 1947ರಲ್ಲಿ ಮಾನವಹಕ್ಕುಗಳ ಆಯೋಗದ ಅಧೀನ ಘಟಕವಾಗಿ, ತಾರತಮ್ಯ ನಿವಾರಣೆ ಮತ್ತು ಅಲ್ಪಸಂಖ್ಯಾತರ ರಕ್ಷಣಾ ಉಪ-ಆಯೋಗವನ್ನು ಸ್ಥಾಪಿಸುವುದಕ್ಕೆ ಅದೂ ಒಂದು ಕಾರಣ. ಬುಡಕಟ್ಟು, ಧಾರ್ಮಿಕ ಮತ್ತು ಭಾಷಿಕ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಜನರ ಹಕ್ಕುಗಳು ಅದರ ಪ್ರಾರಂಭಿಕ ಅಧ್ಯಯನದ ವಿಷಯವಾಗಿತ್ತು.[24] ಈ ವಿಷಯದ ಮೇಲಿನ ಮುಂದುವರಿದ ಸಮಗ್ರ ಅಧ್ಯಯನ ಇತ್ತೀಚೆಗೆ ಮುಕ್ತಾಯಗೊಂಡಿದೆ.[25] ಅಲ್ಪಸಂಖ್ಯಾತರಿಗೆ ಪರಿಣಾಮಕಾರಿ ಅಂತರರಾಷ್ಟ್ರೀಯ ರಕ್ಷಣೆ ಒದಗಿಸುವುದರತ್ತ ಹೊಸ ಅನುಸಂಧಾನಗಳು ಈಗ ಹೊರಹೊಮ್ಮಲು ಪ್ರಾರಂಭಿಸಿವೆ.

### *35. ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ವ್ಯಕ್ತಿಗಳ ರಕ್ಷಣೆಗಾಗಿ ಏನು ಅವಕಾಶಗಳನ್ನು ಮಾಡಲಾಗಿದೆ?*

ವಿಶ್ವಸಂಸ್ಥೆಯ ಮಹಾಧಿವೇಶನ 1992ರಲ್ಲಿ[26] ಒಟ್ಟಾಭಿಪ್ರಾಯದ ಮೇರೆಗೆ ಅಂಗೀಕರಿಸಿದ ರಾಷ್ಟ್ರೀಯ ಅಥವಾ ಬುಡಕಟ್ಟು, ಧಾರ್ಮಿಕ, ಭಾಷಿಕ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಜನರ ಹಕ್ಕುಗಳ ಘೋಷಣೆ ಅಲ್ಪಸಂಖ್ಯಾತರ ಹಕ್ಕುಗಳಿಗೆ ಮಾತ್ರವೇ ಮೀಸಲಾದ ವಿಶ್ವಸಂಸ್ಥೆಯ ಅತ್ಯಂತ ಹೆಚ್ಚು ಸಮಗ್ರವಾದ ಮಾನವಹಕ್ಕುಗಳ ದಸ್ತಾವೇಜಾಗಿದೆ. ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ವ್ಯಕ್ತಿಗಳ ಹಕ್ಕುಗಳ ಸಂವರ್ಧನೆ ಮತ್ತು ಸಾಧನೆ, ಶಾಸನಬದ್ಧ ಪ್ರಜಾಪ್ರಭುತ್ವದ ಚೌಕಟ್ಟಿನಡಿಯಲ್ಲಿ ಸಮಾಜದ ಅಭಿವೃದ್ಧಿಯ ಅವಿಭಾಜ್ಯ ಅಂಗವೆಂದು ಘೋಷಣೆಯ ಪ್ರಸ್ತಾವನೆಯಲ್ಲಿ ಹೇಳಲಾಗಿದೆ. ಘೋಷಣೆಯ 1 ನೇ ಕಲಮಿನಲ್ಲಿ ರಾಷ್ಟ್ರಗಳು ಅಂಥಾ ಅಲ್ಪಸಂಖ್ಯಾತ ವರ್ಗಗಳ ಅಸ್ತಿತ್ವವನ್ನು ಗುರುತಿಸಿ ಅವುಗಳ ಅನನ್ಯತೆಯನ್ನು ಸಂವರ್ಧಿಸಬೇಕೆಂದು ಅಪೇಕ್ಷಿಸಲಾಗಿದೆ. ಈ ಘೋಷಣೆಯ ತತ್ವಗಳಿಗೆ ಉತ್ತೇಜನ ನೀಡಿ ಅನುಷ್ಠಾನ ಗೊಳಿಸಲು ಶಾಸನರಚನೆ ಹಾಗೂ ಇನ್ನಿತರ ಎಲ್ಲ ಕ್ರಮಗಳನ್ನು ಯಥೋಚಿತವಾಗಿ ಕೈಗೊಳ್ಳಬೇಕೆಂದು ಮಹಾಧಿವೇಶನವು ರಾಷ್ಟ್ರಗಳಿಗೆ ಮನವಿ ಮಾಡಿದೆ.[27]

### *36. ಉಳಿದ ಯಾವ ಮಾನವಹಕ್ಕುಗಳ ದಸ್ತಾವೇಜುಗಳು ಅಲ್ಪಸಂಖ್ಯಾತರ ಹಕ್ಕುಗಳ ಬಗ್ಗೆ ಪ್ರಸ್ತಾಪ ಮಾಡಿವೆ?*

ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಜನರಿಗೆ (ಅಲ್ಪಸಂಖ್ಯಾತರ ಗುಂಪು ಎಂದೇ ಏನು ಅಲ್ಲ) ತಮ್ಮದ್ರೇ ಸಂಸ್ಕೃತಿಯ ಅನುಭೋಗ, ತಮ್ಮದ್ರೇ ಧಾರ್ಮಿಕ ಆಚರಣೆಯ ಅಥವಾ ತಮ್ಮದ್ರೇ ಭಾಷೆಯನ್ನು ಉಪಯೋಗಿಸುವ ಹಕ್ಕುಗಳನ್ನು ನಿರಾಕರಿಸಬಾರದೆಂದು ಅಂತರರಾಷ್ಟ್ರೀಯ ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಒಡಂಬಡಿಕೆಯ 27ನೇ ಕಲಮು ಮತ್ತು ಮಗುವಿನ ಹಕ್ಕುಗಳ ಮೇಲಿನ ಒಡಂಬಡಿಕೆಯ 30ನೇ ಕಲಮು ಎರಡರಲ್ಲೂ ಹೇಳಲಾಗಿದೆ. ಅಂತರರಾಷ್ಟ್ರೀಯ ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಒಡಂಬಡಿಕೆಯ ಒಪ್ಪಂದದ ಘಟಕವಾದ ಮಾನವಹಕ್ಕುಗಳ ಸಮಿತಿ (ಪ್ರಶ್ನೆ 13ನ್ನು ಸಹ ನೋಡಿ) ಕಲಮು 27ರ ಉಲ್ಲಂಘನೆಯ ಸಂಬಂಧದ ಐಚ್ಛಿಕ ಶಿಷ್ಟಾಚಾರದ ಕೆಳಗೆ ವ್ಯಕ್ತಿಗಳಿಂದ ದೂರುಗಳನ್ನು ಸ್ವೀಕಾರ ಮಾಡಿದೆ.[28]

ಯುನೆಸ್ಕೋದ ಮಹಾಧಿವೇಶನ (1960) ಶೈಕ್ಷಣಿಕ ತಾರತಮ್ಯದ ವಿರುದ್ಧ ಸ್ವೀಕರಿಸಿರುವ ಒಡಂಬಡಿಕೆ ಶೈಕ್ಷಣಿಕ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ರಾಷ್ಟ್ರೀಯ ಅಲ್ಪಸಂಖ್ಯಾತರ ಹಕ್ಕುಗಳನ್ನು (ಕಲಮು 5) ಅದರಂತೆಯೇ ಯಾವುದೇ ಒಂದು ಜನರ ಗುಂಪಿನ ಬಗ್ಗೆ ತಾರತಮ್ಯವನ್ನು ನಿಷೇಧಿಸುವುದಕ್ಕೆ ಅವಕಾಶ ಮಾಡಿದೆ (ಕಲಮು 1).

### *37. ಅಲ್ಪಸಂಖ್ಯಾತರ ವಿಷಯವನ್ನು ಈಗ ಹೆಚ್ಚು ತುರ್ತಾಗಿ ಕೈಗೆತ್ತಿಕೊಂಡಿರುವುದೇಕೆ?*

1980ರ ದಶಕದ ಉತ್ತರಭಾಗ ಮತ್ತು 1990ರ ದಶಕದ ಪೂರ್ವಭಾಗದಲ್ಲಿ ಮಾನವ ಸಂಕಷ್ಟಗಳು, ಜನರ ಸ್ಥಳಾಂತರ - ಇವು ಆರ್ಥಿಕ ಮತ್ತು ಸಾಮಾಜಿಕ ವಿಚ್ಛಿದ್ರತೆಯಲ್ಲಿ ಪರ್ಯವಸಾನಗೊಂಡು, ಭಾರಿ ಬೆಲೆತೆತ್ತ ಆಂತರಿಕ ಸಂಘರ್ಷಗಳ ಹೆಚ್ಚಳದಿಂದಾಗಿ, ಅಲ್ಪಸಂಖ್ಯಾತರ ಹಕ್ಕುಗಳ ಪ್ರಶ್ನೆ ವಿಶ್ವವ್ಯಾಪಿ ಕಾಳಜಿಯ ವಿಷಯವಾಯಿತು. ಮೊದಲಿನ ಸೋವಿಯಟ್ ಒಕ್ಕೂಟದ ವಿಲಯನ, 'ಬುಡಕಟ್ಟು ಶುದ್ಧೀಕರಣ'ದಂಥ ಹೇಯ ಪಾತಕತನದ ಜತೆಗೂಡಿಕೊಂಡ ಮೊದಲಿನ ಯುಗೋಸ್ಲಾವಿಯಾದ ವಿಘಟನೆ - ಇವುಗಳ ಪರಿಣಾಮವಾಗಿ ಮೇಲ್ನೋಟಕ್ಕೆ ನಿಯಂತ್ರಿಸಲಾಗದಂತೆ ಆಫ್ರಿಕಾ, ಏಷ್ಯಾ ಮತ್ತು ಲ್ಯಾಟಿನ್ ಅಮೇರಿಕಾಗಳಲ್ಲಿ ನಡೆಯುತ್ತಿದ್ದ ಆಂತರಿಕ ಘರ್ಷಣೆಗಳು ಇನ್ನೂ ಹೆಚ್ಚಾದವು. ಬಹುಕಾಲದ ಕುಂದುಕೊರತೆಗಳು ಮತ್ತು ತಾರತಮ್ಯದಿಂದ ಅಲ್ಪಸಂಖ್ಯಾತರಲ್ಲಿ ಉದ್ಭವಿಸಿದ ಅಸಂತೋಷದಲ್ಲಿ ಈ ಅನೇಕ ಘರ್ಷಣೆಗಳ ಬೇರುಗಳಿವೆ. ತತ್ಫಲವಾದ ಅಸ್ತಿತ್ವದ ಪ್ರತಿಪಾದನೆ ಆಗಾಗ್ಗೆ ರಾಜಕೀಯ ಕೈವಾಡಕ್ಕೆ ಒಳಗಾಗಿ ಸ್ವಯಂ ನಿರ್ಣಯದ ಹಕ್ಕು ಪ್ರತಿಪಾದನೆಯಾಗಿ ಅಭಿವ್ಯಕ್ತಗೊಂಡಿತು. ಈ ಹಕ್ಕುಗಳ ನಿರಾಕರಣೆ ಮತ್ತು

ಇಂಥವುಗಳನ್ನು ನಿರ್ವಹಿಸಬಲ್ಲ ಸಾಂಸ್ಥಿಕ ವಿನ್ಯಾಸದ ಅಭಾವದಿಂದಾಗಿ ಇವು ಹಿಂಸಾತ್ಮಕ ಘರ್ಷಣೆ ಮತ್ತು ಅಂತಃಕಲಹದಲ್ಲಿ ಕೂಡ ಪರ್ಯವಸಾನಗೊಂಡವು.

'ಶಾಂತಿಗಾಗಿ ಒಂದು ಕಾರ್ಯಸೂಚಿ'[29]ಎಂಬ ಮಂಡನೆಯಲ್ಲಿ ಪ್ರಾದೇಶಿಕ ಮತ್ತು ವಿವಿಧ ಭೂಖಂಡಗಳಲ್ಲಿನ ದೇಶಗಳು, ಸಂಘಟನೆ ಇವೆರಡರ ಅತ್ಯಂತ ಹೆಚ್ಚಿನ ಸಹಕಾರವಿದ್ದಾಗ್ಯೂ, ಉಗ್ರವಾದ ರಾಷ್ಟ್ರೀಯತೆ ಮತ್ತು ಸಾರ್ವಭೌಮತೆಯ ಹೊಸ ಪ್ರತಿಪಾದನೆಗಳು ಪುಟಿದೆದ್ದಿವೆ, ಮತ್ತು ಬುಡಕಟ್ಟು, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಅಥವಾ ಭಾಷಿಕ ಪಾಶವೀ ಕಲಹಗಳಿಂದಾಗಿ ರಾಷ್ಟ್ರಗಳ ಆಂತರಿಕ ಹೊಂದಾಣಿಕೆ ಅಪಾಯಕ್ಕೆ ಗುರಿಯಾಗಿದೆಯೆಂಬುದರ ಬಗ್ಗೆ ವಿಶ್ವಸಂಸ್ಥೆಯ ಮಹಾ ಕಾರ್ಯದರ್ಶಿಯವರಾಗಿದ್ದ ಬಟ್ರೋಸ್ ಬಟ್ರೋಸ್ ಘಾಲಿಯವರು ಗಮನ ಸೆಳೆದಿದ್ದಾರೆ. ಬುಡಕಟ್ಟು, ಧಾರ್ಮಿಕ, ಸಾಮಾಜಿಕ ಅಥವಾ ಭಾಷಿಕ ಮುಂತಾದ ಯಾವುದೇ ಅಲ್ಪಸಂಖ್ಯಾತರ ಬಗ್ಗೆ ವಿಶೇಷ ಸಂವೇದನಾಶೀಲತೆಯಿಂದ ಕೂಡಿದ ಮಾನವಹಕ್ಕುಗಳಿಗೆ ಬದ್ಧತೆ ಈ ಎಲ್ಲ ಸಮಸ್ಯೆಗಳ ಪರಿಹಾರದ ಪೂರ್ವಭಾವಿ ಅವಶ್ಯಕತೆಯಾಗಿದೆಯೆಂಬುದನ್ನು ಅದರಲ್ಲಿ ಸೂಚಿಸಲಾಗಿದೆ.

### *38. ಈ ಸಮಸ್ಯೆಗಳ ನಿರ್ವಹಣೆಗೆ ವಿಶ್ವವ್ಯಾಪಿ ವಿಧಾನಗಳೇನಾದರೂ ಇವೆಯೇ?*

ಇಂಥಾ ಸನ್ನಿವೇಶಗಳಲ್ಲಿ ಯಾವುದೇ ಪರಿಣಾಮಕಾರಿ ಮತ್ತು ಸಮರ್ಪಕ ಪ್ರತಿಕ್ರಿಯೆ ಕಂಡುಕೊಳ್ಳುವುದರಲ್ಲಿ, ಅಂತರರಾಷ್ಟ್ರೀಯ ಸಮುದಾಯ ವಿಫಲವಾಗಿದೆ. 'ಶಾಂತಿಗಾಗಿ ಒಂದು ಕಾರ್ಯಸೂಚಿ'ಯಲ್ಲಿ ವ್ಯಕ್ತಪಡಿಸಿರುವ, ಉದ್ವಿಗ್ನ ಸ್ಥಿತಿಗಳು ಘರ್ಷಣೆಗೆ ಮುಂದಾಗದಂತೆ ತಿಳಿಗೊಳಿಸಲು ಪ್ರತಿಬಂಧಕ ವ್ಯಾವಹಾರಿಕ ಚಾತುರ್ಯವನ್ನು ರೂಪಿಸುವ ಆವಶ್ಯಕತೆಯನ್ನು ಇದು ದೃಢಪಡಿಸುತ್ತದೆ. ಆದ್ದರಿಂದ ಹಿಂಸಾಕೃತ್ಯಗಳು ಸಂಭವಿಸುವುದನ್ನು ತಪ್ಪಿಸಲು ಮತ್ತು ಸಾಧ್ಯವಿದ್ದಾಗಲೆಲ್ಲ ಕಷ್ಟನಿಷ್ಠುರಗಳ ಅಂತರ್ಗತ ಕಾರಣಗಳನ್ನು ಬಗೆಹರಿಸಲು ಶಾಂತಿಯುತ ಮಾರ್ಗಗಳನ್ನು ಹುಡುಕಬೇಕು ಮತ್ತು ಮುನ್ನೆಚ್ಚರಿಕೆಯ ವ್ಯವಸ್ಥೆಗಳೂ ಒಳಗೊಂಡಂತೆ ಪ್ರತಿಬಂಧಕ ಕ್ರಮಗಳನ್ನು ರೂಪಿಸಬೇಕು.

### *39. ಈ ಸಮಸ್ಯೆಗಳ ನಿರ್ವಹಣೆಗೆ ಪ್ರಾದೇಶಿಕ ವಿಧಾನಗಳೇನಾದರೂ ಇವೆಯೇ?*

ಯೂರೋಪಿನ ಭದ್ರತೆ ಮತ್ತು ಸಹಕಾರದ ಸಮ್ಮೇಳನವು (ಸಿ.ಎಸ್.ಸಿ.ಇ., 81ನೇ ಪ್ರಶ್ನೆಯನ್ನು ನೋಡಿರಿ)[30] ಡಿಸೆಂಬರ್ 1992ರಲ್ಲಿ ಸಂಘರ್ಷ ಪ್ರತಿಬಂಧಕ ಕ್ರಮವಾಗಿ ರಾಷ್ಟ್ರೀಯ ಅಲ್ಪಸಂಖ್ಯಾತರ ವಿಚಾರವಾಗಿ ಒಬ್ಬ ರಾಯಭಾರಿಯನ್ನು ನೇಮಿಸಿತು. ರಾಷ್ಟ್ರೀಯ ಅಲ್ಪಸಂಖ್ಯಾತರ ವಿಚಾರಗಳನ್ನೊಳಗೊಂಡ ಪ್ರಕ್ಷುಬ್ಧತೆಗಳ ಬಗ್ಗೆ ಮುನ್ನೆಚ್ಚರಿಕೆಯ ಮತ್ತು ಮುಂಚಿತವಾಗಿ ತೆಗೆದುಕೊಳ್ಳಬೇಕಾದ ಕ್ರಮಗಳನ್ನು ಸೂಚಿಸುವುದು ಅವರ ಕೆಲಸವಾಗಿದೆ. ಯಾವುದೇ ಭಾಗಸ್ಥ ದೇಶಗಳಲ್ಲಿನ

ಪ್ರದೇಶಗಳಿಗೆ ರಾಯಭಾರಿಗೆ ಅನಿರ್ಬಂಧಿತ ಪ್ರವೇಶಕ್ಕೆ ಅವಕಾಶ ಮಾಡಲಾಗಿದೆ ಮತ್ತು ಆ ಅಧಿಕಾರಿಯು ಸರ್ಕಾರೇತರ ಸಂಘಟನೆಗಳೂ ಸೇರಿದಂತೆ ನೇರವಾಗಿ ಯಾವುದೇ ಮೂಲದಿಂದ ಮಾಹಿತಿಗಳನ್ನು ಪಡೆದುಕೊಳ್ಳಬಹುದು. ಒಂದು ನಿಷ್ಪಕ್ಷಪಾತ ಹಾಜರಾತಿ ಸಂಘರ್ಷದಲ್ಲಿ ಭಾಗಸ್ಥರಾದವರ ಮಧ್ಯೆ ಚರ್ಚೆ ಮತ್ತು ಸಂವಾದಕ್ಕೆ ಅವಕಾಶ ಮಾಡಿ ವಿವಾದಗಳ ನಿವಾರಣೆಯನ್ನು ಸುಲಭಗೊಳಿಸಬಹುದೆಂದು ಆಶಿಸಲಾಗಿದೆ.

### *40. ಮೂಲನಿವಾಸಿಗಳ ಹಕ್ಕುಗಳನ್ನು ರಕ್ಷಿಸಲು ಏನು ವಿಧಾನಗಳಿವೆ?*

ವಿಶ್ವದ ವಿವಿಧ ಭಾಗಗಳಲ್ಲಿ ಅಂದಾಜು ಎಪ್ಪತ್ತು ರಾಷ್ಟ್ರಗಳಲ್ಲಿ ಕನಿಷ್ಠ 300 ದಶಲಕ್ಷ ಮೂಲನಿವಾಸಿಗಳಿದ್ದಾರೆ. ಜೂನ್ 1989ರಲ್ಲಿ ಸ್ವೀಕಾರವಾಗಿ ಸೆಪ್ಟೆಂಬರ್ 1991[31]ರಲ್ಲಿ ಜಾರಿಗೊಂಡ ಸ್ವತಂತ್ರ ರಾಷ್ಟ್ರಗಳೊಳಗಿನ ಮೂಲನಿವಾಸಿಗಳು ಮತ್ತು ಬುಡಕಟ್ಟು ಜನಾಂಗಗಳಿಗೆ ಸಂಬಂಧಿಸಿದ ಒಡಂಬಡಿಕೆ (ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆಯ ಸಂಖ್ಯೆ 169ರ ಒಡಂಬಡಿಕೆ) ಅವರುಗಳ ಹಕ್ಕನ್ನು ರಕ್ಷಿಸುವ ಮುಖ್ಯ ಅಂತರರಾಷ್ಟ್ರೀಯ ದಸ್ತಾವೇಜಾಗಿದೆ. ಯಾವುದೇ ರಾಷ್ಟ್ರ ಅಥವಾ ಸಾಮಾಜಿಕ ಗುಂಪಿಗೆ ಮೂಲನಿವಾಸಿಗಳ ಅಸ್ತಿತ್ವವನ್ನು ಅಲ್ಲಗಳೆಯುವ ಹಕ್ಕಿಲ್ಲವೆಂಬುದನ್ನು ಅದು ದೃಢೀಕರಿಸುತ್ತದೆ ಮತ್ತು ಮೂಲನಿವಾಸಿಗಳ ಪಾಲ್ಗೊಳ್ಳುವಿಕೆಯೊಂದಿಗೆ ಅವರ ಹಕ್ಕುಗಳು ಮತ್ತು ಸಮಗ್ರತೆಯನ್ನು ಖಚಿತಪಡಿಸುವ ಜವಾಬ್ದಾರಿಯನ್ನು ಅದು ರಾಷ್ಟ್ರಗಳಿಗೆ ವಿಧಿಸಿದೆ.

ವಿಶ್ವಸಂಸ್ಥೆಯ ಒಳಗಡೆ ಜನಾಂಗೀಯ ಭೇದ ನಿರ್ಮೂಲನ ಸಮಿತಿ (ಸಿ.ಇ.ಆರ್.ಡಿ.; 26-28 ಸಂಖ್ಯೆಯ ಪ್ರಶ್ನೆಗಳನ್ನೂ ನೋಡಿರಿ) ಮೂಲನಿವಾಸಿಗಳ ಸ್ಥಿತಿಗತಿಗಳನ್ನು ಪರಿಶೀಲಿಸಿದೆ ಮತ್ತು ಮಾನವಹಕ್ಕುಗಳ ಸಮಿತಿ (13-16ರ ಪ್ರಶ್ನೆಗಳನ್ನೂ ಸಹ ನೋಡಿರಿ) ಬುಡಕಟ್ಟು, ಧರ್ಮ ಅಥವಾ ಭಾಷಿಕ ಸ್ಥಾನಮಾನ ಆಧಾರಿತವಾಗಿ ತಾರತಮ್ಯವನ್ನು ನಿಷೇಧಿಸುವ ಸಾಮಾಜಿಕ ಹಾಗೂ ರಾಜಕೀಯ ಹಕ್ಕುಗಳ ಅಂತರರಾಷ್ಟ್ರೀಯ ಒಡಂಬಡಿಕೆಯ 27ನೇ ಕಲಮಿನ ಅನ್ವಯ, ಅವರ ಹಕ್ಕುಗಳ ಉಲ್ಲಂಘನೆಯ ಬಗ್ಗೆ ಮೂಲನಿವಾಸಿಗಳು ನೀಡಿದ ದೂರಿನ ಪ್ರಕರಣಗಳನ್ನು ಪರಿಶೀಲಿಸಿದೆ.

1982ರಲ್ಲಿ ರಚಿತಗೊಂಡ ವಿಶ್ವಸಂಸ್ಥೆಯ ಮೂಲನಿವಾಸಿಗಳ ಮೇಲಿನ ಕಾರ್ಯತಂಡ ವಿಶ್ವಸಂಸ್ಥೆಯ ವ್ಯವಸ್ಥೆಯಡಿಯಲ್ಲಿ ಮೂಲನಿವಾಸಿಗಳ ಹಕ್ಕುಗಳ ಚಟುವಟಿಕೆಯ ಕೇಂದ್ರವಾಗಿದೆ. ಸರ್ಕಾರಿ ನೀತಿಗಳನ್ನು ಪರಾಮರ್ಶಿಸಿ, ಅಲ್ಪಸಂಖ್ಯಾತರ ತಾರತಮ್ಯ ಪ್ರತಿಬಂಧ ಮತ್ತು ರಕ್ಷಣಾ ಉಪಸಮಿತಿಗೆ ತನ್ನ ಶಿಫಾರಸುಗಳನ್ನು ಮಾಡುವುದರ ಜತೆಗೇ, ಅದು ಪ್ರತಿವರ್ಷ ಸುಮಾರು 500 ರಿಂದ 600 ಜನ ಮೂಲನಿವಾಸಿಗಳ ಪ್ರತಿನಿಧಿಗಳು ಮುಕ್ತ ಮತ್ತು ಪ್ರಜಾಪ್ರಭುತ್ವಾತ್ಮಕ ರೀತಿಯಲ್ಲಿ ಸರ್ಕಾರಗಳ ಜತೆ, ಸರ್ಕಾರೇತರ ಸಂಘಟನೆಗಳು ಮತ್ತು ವಿಶ್ವಸಂಸ್ಥೆಯ ವಿಭಾಗಗಳ ಜತೆ ವಿಚಾರವಿನಿಮಯ ಮಾಡಿಕೊಳ್ಳುವ ವೇದಿಕೆಯಾಗಿಯೂ ಕೆಲಸ

ಮಾಡುತ್ತದೆ. ಸ್ವಯಂ ನಿರ್ಧಾರದ ಹಕ್ಕುಗಳು, ತಮ್ಮ ಭೂಮಿ ಮತ್ತು ಸಂಪನ್ಮೂಲಗಳ ನಿಯಂತ್ರಣ, ತಮ್ಮ ಭಾಷೆಯನ್ನಾಡುವ ಹಕ್ಕುಗಳು ಸೇರಿದಂತೆ ಮೂಲನಿವಾಸಿಗಳ ಹಕ್ಕುಗಳ ಮೇಲಿನ ವಿಶ್ವಸಂಸ್ಥೆಯ ಕರಡು ಘೋಷಣೆಯನ್ನು 1994ರಲ್ಲಿ ಉಪ ಆಯೋಗ ಅಂಗೀಕರಿಸಿದೆ; ಮತ್ತು ಅದನ್ನು ಮಾನವಹಕ್ಕುಗಳ ಆಯೋಗ 1995ರಲ್ಲಿ ರಚಿಸಿದ ತೆರೆದ ಮನಸ್ಸಿನ ಕಾರ್ಯತಂಡವೊಂದು, ಮುಂದುವರಿಸಿ ವಿಶದೀಕರಿಸತೊಡಗಿದೆ. (1995/32ರ ದಿನಾಂಕ 3 ಮಾರ್ಚ್ 1995ರ ನಿರ್ಣಯ). ಮೂಲ ನಿವಾಸಿಗಳ ಸಾಂಸ್ಕೃತಿಕ ಹಾಗೂ ಬೌದ್ಧಿಕ ಹಕ್ಕುಗಳ ಸಂರಕ್ಷಣೆಗೆ ಕರಡು ಮಾರ್ಗಸೂಚಿ ಮತ್ತು ತತ್ವಗಳನ್ನು ವಿಸ್ತರಿಸುವ ಸಾಧ್ಯತೆಯೂ ಪರಿಶೀಲನೆಯಲ್ಲಿದೆ.

ಎಲ್ಲ ದೇಶಗಳಲ್ಲಿ, ಮೂಲನಿವಾಸಿಗಳು ಅತ್ಯಂತ ಹೆಚ್ಚಿನ ತಾರತಮ್ಯಕ್ಕೆ ಗುರಿಯಾಗಿ ನೊಂದಿರುವ ಗುಂಪಾಗಿ ಇಂದಿಗೂ ಮುಂದುವರಿದಿದ್ದಾರೆ. ನಿಕೃಷ್ಟ ವಸತಿ ಮತ್ತು ಆರೋಗ್ಯ ಹಾಗೂ ಉದ್ಯೋಗ ಸ್ಥಿತಿಗತಿ, ಶೈಕ್ಷಣಿಕ ಅವಕಾಶಗಳ ಜತೆಗೆ ಅವರುಗಳು ತಮ್ಮ ಉಳಿವಿಗೇ ಆಧಾರವಾದ ಭೂಮಿ ಮತ್ತು ಸಂಪನ್ಮೂಲಗಳನ್ನೂ ಕಳೆದುಕೊಳ್ಳುತ್ತಿದ್ದಾರೆ. ಕೆಲವು ದೇಶಗಳಲ್ಲಿ, ಮನಸೋಇಚ್ಛೆ ಹತ್ಯೆ ಹಾಗೂ ಕಾಣೆಯಾಗುವಿಕೆಯಂಥ ಇನ್ನಿತರ ಗಂಭೀರ ಮಾನವಹಕ್ಕುಗಳ ಉಲ್ಲಂಘನೆಗೆ ಅವರು ಒಳಗಾಗಿದ್ದಾರೆ. ಇದನ್ನು ಸರಿಪಡಿಸುವ ಪ್ರಯತ್ನವಾಗಿ ವಿಶ್ವಸಂಸ್ಥೆಯ ಮಹಾಧಿವೇಶನವು 10ನೇ ಡಿಸೆಂಬರ್ 1994ರಿಂದ ಹತ್ತು ವರ್ಷಗಳನ್ನು 'ವಿಶ್ವ ಮೂಲನಿವಾಸಿಗಳ ದಶಕ'ವೆಂದು[32] ಘೋಷಿಸಿದೆ. ಮೂಲನಿವಾಸಿಗಳು ಎದುರಿಸುತ್ತಿರುವ ಸಮಸ್ಯೆಯ ಪರಿಹಾರಕ್ಕೆ ಅಂತರರಾಷ್ಟ್ರೀಯ ಸಹಕಾರವನ್ನು ಬಲಪಡಿಸುವುದು ಈ ದಶಕದ ಗುರಿಯಾಗಿದೆ. ಪ್ರತಿವರ್ಷ ಒಂದು ದಿನವನ್ನು (ಆಗಸ್ಟ್ 9) 'ಅಂತರರಾಷ್ಟ್ರೀಯ ಮೂಲನಿವಾಸಿಗಳ ದಿನ'ವನ್ನಾಗಿ ಆಚರಿಸಲಾಗುವುದು.

### *41. ಸಶಸ್ತ್ರ ಘರ್ಷಣೆಗಳ ಸಂದರ್ಭಗಳಲ್ಲಿ ಮಾನವಹಕ್ಕುಗಳ ರಕ್ಷಣೆಗೆ ಯಾವ ಅವಕಾಶಗಳನ್ನು ಮಾಡಲಾಗಿದೆ?*

ಸಶಸ್ತ್ರ ಘರ್ಷಣೆಗಳ ಸಂದರ್ಭಗಳಲ್ಲಿ ಮಾನವಹಕ್ಕುಗಳ ಸಂಪೂರ್ಣ ರಕ್ಷಣೆ ಅಸಾಧ್ಯವೆಂಬುದು ಗೊತ್ತೇ ಇದೆ. ಆದಾಗ್ಯೂ ಕೆಲವು ಮೂಲಭೂತ ಹಕ್ಕುಗಳ ರಕ್ಷಣೆಯನ್ನು ಖಚಿತಪಡಿಸುವುದು ಅತ್ಯಗತ್ಯ ಮತ್ತು ಇದೇ ಅಂತರರಾಷ್ಟ್ರೀಯ ಮಾನವಿಕ ಶಾಸನದ ವಿಷಯವಾಗಿದೆ. ಅಂತರರಾಷ್ಟ್ರೀಯ ಮಾನವಿಕ ಶಾಸನದ ಈ ಚರಿತ್ರೆ ರೆಡ್‌ಕ್ರಾಸ್‌ಗೆ ನಿಕಟವಾಗಿ ಸಂಬಂಧಿಸಿದೆ. 1859ರ ಸೋಲ್‌ಫೆರಿನೋ ಯುದ್ಧದಲ್ಲಿ ಸ್ವಿಸ್ ಮಾನವತಾವಾದಿ ಹೆನ್ರಿ ಡ್ಯೂನಂಟ್ ಎಂಬವನು ಸಂಘಟಿಸಿದ ತುರ್ತು ಸಹಾಯ ಸೇವೆಗಳ ಕಾರ್ಯದಿಂದಾಗಿ ರೆಡ್‌ಕ್ರಾಸ್ (ಈಗ 'ಅಂತರರಾಷ್ಟ್ರೀಯ ರೆಡ್‌ಕ್ರಾಸ್ ಮತ್ತು ರೆಡ್‌ಕ್ರೆಸೆಂಟ್ ಚಳುವಳಿ' ಎಂದು ಹೆಸರಾಗಿರುವ) ಸಂಸ್ಥೆಯ ಉದಯವಾಯಿತು.

ಪ್ರಪ್ರಥಮ ಮಾನವಿಕ ಶಾಸನದ ಮೇಲಿನ ಬಹುಸ್ತರದ ಒಪ್ಪಂದವಾದ 1864ರ ಜಿನೀವಾ ಒಡಂಬಡಿಕೆ, ಶತ್ರುವೇ ಇರಲಿ ಮಿತ್ರನೇ ಇರಲಿ ಯುದ್ಧ ಗಾಯಾಳುಗಳ ಆರೈಕೆಯಾಗಬೇಕು-ಎಂಬುದಕ್ಕೆ ಸರ್ಕಾರಗಳನ್ನು ಬದ್ಧಗೊಳಿಸಿತು. ಈ ಒಡಂಬಡಿಕೆಯನ್ನು 1906ರ ಜಿನೀವಾ ಒಡಂಬಡಿಕೆ 1899-1907ರ ಹೇಗ್ ಒಡಂಬಡಿಕೆಗಳು ಮತ್ತು 1929ರ ಜಿನೀವಾ ಒಡಂಬಡಿಕೆಗಳಿಂದ ವಿಸ್ತೃತ ಗೊಳಿಸಲಾಯಿತು. ಮಾನವಿಕ ಶಾಸನದ ತತ್ವಗಳು ವ್ಯಾಪಕ ಉಲ್ಲಂಘನೆಗೆ ಗುರಿಯಾದದ್ದು ಎರಡನೇ ಮಹಾಯುದ್ಧದಲ್ಲಿ. ಅನಂತರ ಅಸ್ತಿತ್ವದಲ್ಲಿದ್ದ ಅವಕಾಶಗಳನ್ನು ಇನ್ನಷ್ಟು ವಿಸ್ತರಿಸಿ ಕ್ರೋಢೀಕರಿಸಲಾಯಿತು. ಯೋಧರ ಮತ್ತು ಜನಸಾಮಾನ್ಯರ ಶಾಸನಬದ್ಧ ರಕ್ಷಣೆ 'ಹೇಗ್ ಶಾಸನ'ವೆಂದು ಕರೆಯಲ್ಪಡುವ, ಯುದ್ಧವಿಧಾನಗಳನ್ನು ನಿಯಂತ್ರಿಸುವ ನಿಯಮಾವಳಿಗಳು ಮತ್ತು 1949ರ[33] ನಾಲ್ಕು ಜಿನೀವಾ ಒಡಂಬಡಿಕೆಗಳಲ್ಲಿ ನಮೂದಿಸಿರುವ ಯುದ್ಧಸಂತ್ರಸ್ತರ ರಕ್ಷಣೆಯ ಶಾಸನಗಳನ್ನೂ ಒಳಗೊಂಡಿವೆ. ಹೆಚ್ಚುಕಡಿಮೆ ವಿಶ್ವದ ಎಲ್ಲಾ ರಾಷ್ಟ್ರಗಳು ಈ ಒಡಂಬಡಿಕೆಗಳಿಗೆ ಭಾಗಸ್ಥರಾಗಿವೆ.[34] ಜಿನೀವಾ ಒಡಂಬಡಿಕೆಗೆ 1977ರಲ್ಲಿ ಸೇರಿಸಿದ ಎರಡು ಹೆಚ್ಚುವರಿ ಶಿಷ್ಟಾಚಾರಗಳು ಎರಡೂ ಬಗೆಯ ನಿಯಮಗಳನ್ನೊಳ ಗೊಂಡಿರುವುದರಿಂದಾಗಿ 'ಜಿನೀವಾ ಶಾಸನ' ಮತ್ತು 'ಹೇಗ್ ಶಾಸನ' ಎಂಬ ವಿಂಗಡಣೆಗೆ ಈಗ ಹೆಚ್ಚಿನ ಅರ್ಥ ಉಳಿದಿಲ್ಲ.

1ನೇ[35] ಹೆಚ್ಚುವರಿ ಶಿಷ್ಟಾಚಾರವು ಅಂತರರಾಷ್ಟ್ರೀಯ ಸಶಸ್ತ್ರ ಘರ್ಷಣೆಗಳ ಸಂತ್ರಸ್ತರ ರಕ್ಷಣೆಗೆ ಸಂಬಂಧಿಸಿದ್ದರೆ 11ನೇ[36] ಹೆಚ್ಚುವರಿ ಶಿಷ್ಟಾಚಾರವು ಅಂತರರಾಷ್ಟ್ರೀಯವಲ್ಲದ ಸಶಸ್ತ್ರ ಘರ್ಷಣೆಯ ಸಂತ್ರಸ್ತರ ರಕ್ಷಣೆಗೆ ಸಂಬಂಧಪಟ್ಟಿದೆ.

### *42. ಸಶಸ್ತ್ರ ಘರ್ಷಣೆಗಳ ಕಾಲದಲ್ಲಿ ವ್ಯಕ್ತಿಗಳಿಗೆ ಯಾವ ರಕ್ಷಣೆಯನ್ನು ಆಲೋಚಿಸಲಾಗಿದೆ ?*

ಜಿನೀವಾ ಒಡಂಬಡಿಕೆಯು ಗಾಯಾಳುಗಳು, ರೋಗಗ್ರಸ್ತರು, ನೌಕಾಘಾತಕ್ಕೆ ತುತ್ತಾದ ಸೈನಿಕರು, ಹಾಗೂ ಯುದ್ಧಕೈದಿಗಳು - ಅವರೆಲ್ಲರಿಗೂ ತಾರತಮ್ಯರಹಿತ ಗೌರವ ಮತ್ತು ರಕ್ಷಣೆಯನ್ನು ಅಪೇಕ್ಷಿಸುತ್ತದೆ ಮತ್ತು ಆ ರೀತಿಯಿಂದ ಎಲ್ಲಾ ಯುದ್ಧಸಂತ್ರಸ್ತರ ರಕ್ಷಣೆಯ ಬಗ್ಗೆಯೂ ಸಮಾನ ಹಕ್ಕನ್ನು ಖಚಿತಪಡಿಸುತ್ತದೆ. ನಾಲ್ಕನೆಯ ಒಡಂಬಡಿಕೆ ಯುದ್ಧಕಾಲದಲ್ಲಿ ನಾಗರಿಕರ ರಕ್ಷಣೆಗೆ ಸಂಬಂಧಿಸಿದೆ. ಹೆಚ್ಚುವರಿ ಶಿಷ್ಟಾಚಾರಗಳು ಸಶಸ್ತ್ರ ಘರ್ಷಣೆಯಿಂದ ತೊಂದರೆಗೊಳಗಾದವ ರೆಲ್ಲರಿಗೂ ರಕ್ಷಣೆಯನ್ನು ವಿಸ್ತರಿಸಿದೆ ಮತ್ತು ಅದು ಆಂತರಿಕವಿರಲಿ ಅಥವಾ ಅಂತರರಾಷ್ಟ್ರೀಯವಿರಲಿ, ಘರ್ಷಣೆಗೆ ಭಾಗಸ್ಥರು ಮತ್ತು ಯುದ್ಧನಿರತರು, ಸಾಮಾನ್ಯ ನಾಗರಿಕರು ಹಾಗೂ ವಸ್ತುಗಳ ಮೇಲೆ ಆಕ್ರಮಣವೆಸಗುವುದನ್ನು ನಿಷೇಧಿಸಿದೆ.[37]

ಮಾನವಹಕ್ಕುಗಳ ವಿಶ್ವ ಸಮ್ಮೇಳನ (1993) ಈಗಾಗಲೇ ಹಾಗೆ ಮಾಡಿಲ್ಲದ ದೇಶಗಳು, 12ನೇ ಆಗಸ್ಟ್ 1949ರ ಜಿನೀವಾ ಒಡಂಬಡಿಕೆಗಳನ್ನು ಮತ್ತು ಅದರ

ಜತೆಗಿನ ಶಿಷ್ಟಾಚಾರಗಳನ್ನು ಒಪ್ಪಿಕೊಳ್ಳುವಂತೆ ಮತ್ತು ಅವುಗಳ ಪೂರ್ಣ ಅನುಷ್ಠಾನಕ್ಕೆ ಶಾಸನ ರಚನೆಯೂ ಸೇರಿದಂತೆ ಎಲ್ಲಾ ಸೂಕ್ತ ರಾಷ್ಟ್ರೀಯ ಕ್ರಮ ಕೈಗೊಳ್ಳುವಂತೆ ರಾಷ್ಟ್ರಗಳಿಗೆ ಮನವಿ ಮಾಡಿದೆ.

ಸಶಸ್ತ್ರ ಘರ್ಷಣೆಯ ಸಂದರ್ಭಗಳಲ್ಲಿ ಒಬ್ಬ ತಟಸ್ಥ ಮಧ್ಯಸ್ಥಗಾರನಾಗಿ ರೆಡ್‌ಕ್ರಾಸ್‌ನ ಅಂತರರಾಷ್ಟ್ರೀಯ ಸಮಿತಿಯು (ಐ.ಸಿ.ಆರ್.ಸಿ.)[38] ಸ್ವಇಚ್ಛೆಯಿಂದಾಗಲೀ, ಅಥವಾ ಜಿನೀವಾ ಒಡಂಬಡಿಕೆಯ ಮತ್ತು ಅದರ ಹೆಚ್ಚುವರಿ ಶಿಷ್ಟಾಚಾರಗಳ ಅನ್ವಯವಾಗಿಯಾಗಲೀ, ಅಂತರರಾಷ್ಟ್ರೀಯ ಅಥವಾ ಅಂತರರಾಷ್ಟ್ರೀಯವಲ್ಲದ, ಸಶಸ್ತ್ರ ಘರ್ಷಣೆಗಳಲ್ಲಿ ಮತ್ತು ಆಂತರಿಕ ದೊಂಬಿ ಮತ್ತು ಪ್ರಕ್ಷುಬ್ಧತೆಗಳಿಂದ ಸಂತ್ರಸ್ತರಾದವರಿಗೆ ರಕ್ಷಣೆ ಒದಗಿಸಲು ಪ್ರಯತ್ನಿಸುತ್ತದೆ.

### *43. ಮಾನವಿಕ ಶಾಸನದ ಅಸಹ್ಯ ಉಲ್ಲಂಘನೆಗಳ ಬಗ್ಗೆ ವ್ಯವಹರಣೆಗೆ ಮಾರ್ಗಗಳಿವೆಯೇ ?*

ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ 808 ಮತ್ತು 827 (1993) ನಿರ್ಣಯಗಳನುಸಾರ, ಹಿಂದಿನ ಯುಗೋಸ್ಲಾವಿಯಾದ ಭೂಭಾಗದಲ್ಲಿ 1991ರಿಂದ ನಡೆದ ಅಂತರರಾಷ್ಟ್ರೀಯ ಮಾನವಿಕ ಶಾಸನದ ಗಂಭೀರ ಉಲ್ಲಂಘನೆಗೆ ಜವಾಬ್ದಾರ ರಾದ ಜನರನ್ನು ಕಾನೂನು ಕ್ರಮಕ್ಕೊಳಪಡಿಸುವುದಕ್ಕಾಗಿ ಅಂಥಾ ಒಂದು ಘಟಕ ವನ್ನು ಸ್ಥಾಪಿಸತಕ್ಕದ್ದೆಂದು ನಿರ್ಧರಿಸಿ ಒಂದು ಅಂತರರಾಷ್ಟ್ರೀಯ ನ್ಯಾಯಾಧಿಕರಣ ವನ್ನು ಸ್ಥಾಪಿಸಲಾಗಿದೆ. ಜನಾಂಗ ಹತ್ಯಾ ಪ್ರತಿಬಂಧ ಮತ್ತು ಶಿಕ್ಷಾ ಒಡಂಬಡಿಕೆಯಲ್ಲಿ ವ್ಯಾಖ್ಯಾನಿಸಿರುವ ಜನಾಂಗ ಹತ್ಯಾ ಆರೋಪಿಗಳನ್ನು ಕಾನೂನು ಕ್ರಮಕ್ಕೆ ಒಳಪಡಿಸಲು (ಪ್ರಶ್ನೆ 23ನ್ನೂ ನೋಡಿರಿ) ಅಂತರರಾಷ್ಟ್ರೀಯ ನ್ಯಾಯಾಧಿಕರಣಕ್ಕೆ ಅಧಿಕಾರ ನೀಡಲಾಗಿದೆ. ಆ ರೀತಿಯ ಉಲ್ಲಂಘನೆಗಳನ್ನು ಮಾಡಿದವರನ್ನು ಕಾನೂನು ಕ್ರಮಕ್ಕೊಳಪಡಿಸುವುದೇ ಅಂತರರಾಷ್ಟ್ರೀಯ ನ್ಯಾಯಾಧಿಕರಣದ ಏಕೈಕ ಉದ್ದೇಶವಾಗಿದೆ ಮತ್ತು ಆ ಭಾಗದಲ್ಲಿ ಅಂತರರಾಷ್ಟ್ರೀಯ ಶಾಂತಿ ಮತ್ತು ಭದ್ರತೆ ಪುನಃ ಸ್ಥಾಪನೆಗೊಳ್ಳುವವರೆಗೂ ಅದು ಕಾರ್ಯನಿರತವಾಗಿ ಇರುತ್ತದೆ.[39]

ಅಂತರರಾಷ್ಟ್ರೀಯ ನ್ಯಾಯಾಧಿಕರಣ ಹನ್ನೊಂದು ಸ್ವತಂತ್ರ ನ್ಯಾಯಮೂರ್ತಿಗಳನ್ನು ಮತ್ತು ತನಿಖೆ ಹಾಗೂ ಕಾನೂನು ಕ್ರಮಕ್ಕೆ ಜವಾಬ್ದಾರನಾದ ಒಬ್ಬ ಸ್ವತಂತ್ರ ಶಾಸನಾಧಿಕಾರಿಯನ್ನು (ಪ್ರಾಸಿಕ್ಯೂಟರ್) ಹೊಂದಿದೆ. ವ್ಯವ[illegible] ಬಗ್ಗೆ ಶಾಸನಾಧಿಕಾರಿ ಮಾತ್ರವೇ ಉಪಕ್ರಮ ಕೈಗೊಳ್ಳಬಹುದು. ತ[illegible] ನಡೆಸುವಾಗ ಅನುಮಾನಿತರು, ಸಂತ್ರಸ್ತರು ಮತ್ತು ಸಾಕ್ಷಿದಾರರನ್ನು ಪ್ರ[illegible] ಸಾಕ್ಷ್ಯಾಧಾರಗಳನ್ನು ಸಂಗ್ರಹಿಸಲು ಮತ್ತು ಸ್ಥಳ ತನಿಖೆಗಳನ್ನು ನಡೆಸಲು ಶಾಸನಾಧಿಕಾರಿ ಅಧಿಕಾರ ಹೊಂದಿರುತ್ತಾನೆ. ಅವನು ಯಾವುದೇ ಮೂಲದಿಂದ ಮಾಹಿತಿಗಳನ್ನು ಪಡೆದುಕೊಳ್ಳಬಹುದು ಮತ್ತು ಸಂಗ್ರಹಿಸಬಹುದು. ಮಾಹಿತಿಗಳನ್ನು ಒದಗಿಸಿಕೊಡುವ ಮತ್ತು ಆರೋಪಿಗಳನ್ನು ಒಪ್ಪಿಸುವುದೂ ಸೇರಿದಂತೆ ಪ್ರಕರಣದ ಸಿದ್ಧತೆ ಮತ್ತು ಅಂತಿಮ ತೀರ್ಮಾನಗಳನ್ನು

ಕಾರ್ಯಗತಗೊಳಿಸುವುದು - ಈ ಎರಡೂ ವಿಚಾರದಲ್ಲೂ ವಿಶ್ವಸಂಸ್ಥೆಯ ಎಲ್ಲಾ ಸದಸ್ಯ ರಾಷ್ಟ್ರಗಳು ಅಂತರರಾಷ್ಟ್ರೀಯ ನ್ಯಾಯಾಧಿಕರಣದೊಂದಿಗೆ ಪೂರ್ಣವಾಗಿ ಸಹಕರಿಸಲು ಬಾಧ್ಯಸ್ಥರಾಗಿದ್ದಾರೆ. ಆಪಾದಿತ ವ್ಯಕ್ತಿ, ಒಂದು ನ್ಯಾಯಯುತ ವಿಚಾರಣೆಯ ಎಲ್ಲ ಸೌಲಭ್ಯವನ್ನೂ ಹೊಂದಿರುತ್ತಾನೆ. ಅಂತರರಾಷ್ಟ್ರೀಯ ಮಾನವಿಕ ಶಾಸನದ ಗಂಭೀರ ಉಲ್ಲಂಘನೆಯ ಅಪರಾಧ ಮಾಡಿರುವುದಾಗಿ ಅಂತರರಾಷ್ಟ್ರೀಯ ನ್ಯಾಯಪೀಠ ತೀರ್ಮಾನಿಸಿದಲ್ಲಿ ಅವನು ತೆರಬೇಕಾದ ದಂಡ, ಜೈಲುವಾಸ. ಹಾಗೆ ಮಾಡಲು ಒಪ್ಪಿಕೊಂಡ ದೇಶದ ಭೂಭಾಗದಲ್ಲಿ ಈ ಶಿಕ್ಷೆಯನ್ನು ಜಾರಿಗೊಳಿಸಲಾಗುವುದು. ಅಂತರರಾಷ್ಟ್ರೀಯ ನ್ಯಾಯಪೀಠದ ನಿಬಂಧನೆಗಳ ಪ್ರಕಾರ ಮರಣದಂಡನೆಗೆ ಪರವಾನಿಗೆ ಇಲ್ಲ. ಮೇಲ್ಮನವಿಯ ಪ್ರಕ್ರಿಯೆಗೆ ಅವಕಾಶ ಮಾಡಲಾಗಿದೆ.

ತನ್ನ ಚಟುವಟಿಕೆಗಳ ಬಗ್ಗೆ ಅಂತರರಾಷ್ಟ್ರೀಯ ನ್ಯಾಯಾಧಿಕರಣವು ಭದ್ರತಾಮಂಡಲಿ ಮತ್ತು ಮಹಾಧಿವೇಶನಕ್ಕೆ ವಾರ್ಷಿಕ ವರದಿ ಸಲ್ಲಿಸತಕ್ಕದ್ದು.

### *44. ಅಂತರರಾಷ್ಟ್ರೀಯ ಮಾನವಿಕ ಶಾಸನದ ಉಲ್ಲಂಘನೆಗಳ ಬಗ್ಗೆ ವಿಶ್ವಸಂಸ್ಥೆ ಇನ್ನಿತರ ಯಾವ ರೀತಿಗಳಲ್ಲಿ ವ್ಯವಹರಿಸುತ್ತದೆ?*

ಭದ್ರತಾ ಮಂಡಳಿ 955ನೇ (1994) ನಿರ್ಣಯದನ್ವಯ ರ್‍ವಾಂಡಾ ಭೂಭಾಗ ಮತ್ತು ರ್‍ವಾಂಡಾ ಜನರ ಮೇಲೆ ಜನಾಂಗ ಹತ್ಯೆ ಮತ್ತು ಇನ್ನಿತರ ಅಂತರರಾಷ್ಟ್ರೀಯ ಮಾನವಿಕ ಶಾಸನದ ಗಂಭೀರ ಉಲ್ಲಂಘನೆಗಳಿಗೆ ಮತ್ತು ಅಕ್ಕಪಕ್ಕದ ದೇಶಗಳ ಭೂಭಾಗದಲ್ಲೆಸಗಿದ ಜನಾಂಗ ಹತ್ಯೆ ಮತ್ತು ಅಂಥದೇ ಉಲ್ಲಂಘನೆಗಳಿಗೆ ಜವಾಬ್ದಾರರಾದವರನ್ನು ಕಾನೂನು ಕ್ರಮಕ್ಕೊಳಪಡಿಸುವ ಉದ್ದೇಶ್ಯಕ್ಕಾಗಿ ಒಂದು ಅಂತರರಾಷ್ಟ್ರೀಯ ನ್ಯಾಯಾಧಿಕರಣವನ್ನು ಸ್ಥಾಪನೆ ಮಾಡಿದೆ.

### *45. ಅಂತರರಾಷ್ಟ್ರೀಯ ಶಾಸನದಲ್ಲಿ ನಿರಾಶ್ರಿತರಿಗೆ ರಕ್ಷಣೆಗಳಿವೆಯೇ?*

ಅಂತರರಾಷ್ಟ್ರೀಯ ಮತ್ತು ಆಂತರಿಕ ಘರ್ಷಣೆಗಳು ಹಾಗೂ ಅಂತಃಕಲಹಗಳು, ತಮ್ಮ ಮಾನವಹಕ್ಕುಗಳ ಅಸಹ್ಯ ಮತ್ತು ವ್ಯಾಪಕ ಉಲ್ಲಂಘನೆಗಳಿಂದ ತಪ್ಪಿಸಿಕೊಳ್ಳುವ ಅಥವಾ ಪ್ರಾಣ ರಕ್ಷಿಸಿಕೊಳ್ಳುವ ಪ್ರಯತ್ನದಲ್ಲಿ ಜನರು ತಮ್ಮ ಮನೆಮಠಗಳನ್ನು ಬಿಟ್ಟುಹೋಗುವಂಥ ಪರಿಸ್ಥಿತಿಯನ್ನು ನಿರ್ಮಿಸುತ್ತವೆ. ಅವರ ದೇಶದೊಳಗಡೆಗೆ ಇನ್ನೊಂದೆಡೆಗೆ ಹೋದವರನ್ನು 'ಆಂತರಿಕ ಸ್ಥಾನಪಲ್ಲಟ ಹೊಂದಿದವರು' ಎಂದು ಕರೆಯುತ್ತಾರೆ. ದೇಶಬಿಟ್ಟು ಹೊರಗೆ ಹೋದಂಥವರು 'ನಿರಾಶ್ರಿತ'ರೆನಿಸುತ್ತಾರೆ.

ಮಾನವಿಕ ಹಕ್ಕುಗಳ ಅಪಚಾರ ಮತ್ತು ಸಶಸ್ತ್ರ ಘರ್ಷಣೆಯಿಂದಾಗಿ ಸ್ಫೋಟಗೊಂಡ, ನಿರಾಶ್ರಿತರ ವಲಸೆಯ ಅನೇಕ ಪ್ರಕರಣಗಳು, ಅನಾವೃಷ್ಟಿ, ಬರಗಾಲ ಮತ್ತು ಕೆಲವು ಪ್ರದೇಶಗಳಲ್ಲಿನ ಸಂಪೂರ್ಣ ಅನಾಯಕತ್ವದಿಂದಾಗಿ ಉಲ್ಬಣಗೊಳ್ಳುತ್ತವೆ.

ನಿರಾಶ್ರಿತರ ಸ್ಥಾನಮಾನದ ಸಂಬಂಧದ ಒಡಂಬಡಿಕೆ (1951) ಮತ್ತು ಅದರ ಶಿಷ್ಟಾಚಾರಗಳು (1966)[40] ಜನಾಂಗ, ಧರ್ಮ, ರಾಷ್ಟ್ರೀಯತೆ, ನಿರ್ದಿಷ್ಟ ಸಾಮಾಜಿಕ ಗುಂಪಿನ ಸದಸ್ಯತ್ವ ಅಥವಾ ರಾಜಕೀಯ ಅಭಿಪ್ರಾಯ ಇವುಗಳ ಕಾರಣಕ್ಕಾಗಿ ಹಿಂಸೆಗೊಳಗಾಗುವ ಸಕಾರಣವಾದ ಭಯದ ದೆಸೆಯಿಂದಾಗಿ ತಮ್ಮ ದೇಶವನ್ನು ಪರಿತ್ಯಜಿಸುವ ಜನರನ್ನು ಮಾತ್ರ ನಿರಾಶ್ರಿತರೆಂದು ಮಾನ್ಯ ಮಾಡುತ್ತವೆ. (ಒಡಂಬಡಿಕೆಯ 1ನೇ ಕಲಮು). ನಿರಾಶ್ರಿತರ ಭದ್ರತೆ ಮತ್ತು 'ನಾನ್ ರಿಫೌಲ್‌ಮೆಂಟ್', ಅಂದರೆ ಯಾವುದೇ ಒಬ್ಬ ವ್ಯಕ್ತಿ ಮತ್ತೊಂದು ದೇಶವನ್ನು ಪ್ರವೇಶಿಸಿದಾಗ, ಮೇಲ್ಕಾಣಿಸಿದ ಕಾರಣಗಳಿಂದಾಗಿ ಅವನ ಅಥವಾ ಅವಳ ಜೀವ ಅಥವಾ ಸ್ವಾತಂತ್ರ್ಯ ಅಪಾಯಕ್ಕೊಳಗಾಗಬಹುದಾದ ದೇಶಕ್ಕೆ ಮತ್ತೆ ಕಡ್ಡಾಯವಾಗಿ ಹಿಂದಿರುಗಿಸದಿರುವ ಅಥವಾ ಗಡಿ ಪ್ರದೇಶದಿಂದ ಹೊರದಬ್ಬದಿರುವ ತತ್ವದ ಅನುಸರಣೆಯನ್ನು ಅವಲಂಬಿಸಿದೆ.

### *46. ಈ ರಕ್ಷಣೆಯನ್ನು ಹೇಗೆ ಕಾರ್ಯಗತಗೊಳಿಸಲಾಗಿದೆ?*

ನಿರಾಶ್ರಿತರ ರಕ್ಷಣೆಯ ಅಂತರರಾಷ್ಟ್ರೀಯ ನಿಯಮಗಳ ಉಸ್ತುವಾರಿ ಮತ್ತು ನಿರಾಶ್ರಿತರು ಸ್ವದೇಶಕ್ಕೆ ಹಿಂದಿರುಗುವುದನ್ನು ಸುಗಮಗೊಳಿಸಲು ಸಂಬಂಧಿಸಿದ ಸರ್ಕಾರಗಳಿಗೆ ನೆರವು ನೀಡುವ ಮತ್ತು/ಅಥವಾ ಅವರುಗಳನ್ನು ಹೊಸ ರಾಷ್ಟ್ರೀಯ ಸಮುದಾಯಗಳ ಜತೆ ಒಗ್ಗೂಡಿಸುವುದರ ಮೂಲಕ ದೀರ್ಘಕಾಲಿಕ ಪರಿಹಾರವನ್ನು ಕಂಡುಹಿಡಿಯುವುದು ವಿಶ್ವಸಂಸ್ಥೆಯ ನಿರಾಶ್ರಿತರ ರಾಯಭಾರಿ ಕಛೇರಿಯ (ಯು.ಎನ್.ಹೆಚ್.ಸಿ.ಆರ್.) ಜವಾಬ್ದಾರಿಯಾಗಿದೆ.

1951ರಲ್ಲಿ ಸದರಿ ಕಛೇರಿಯ ಸ್ಥಾಪನೆಯಾದಾಗ ಅಂದಾಜು 1 ದಶಲಕ್ಷ ಜನ ನಿರಾಶ್ರಿತರಿದ್ದರು. 1994ರ ಕೊನೆಗೆ 45 ದಶಲಕ್ಷ ನಿರಾಶ್ರಿತರು ಮತ್ತು ಆಂತರಿಕ ಸ್ಥಾನಪಲ್ಲಟಗೊಂಡವರು ಐದು ಖಂಡಗಳಲ್ಲಿದ್ದರು. ಅವರುಗಳಲ್ಲಿ 18-20 ದಶಲಕ್ಷ ಜನರು 'ನಿರಾಶ್ರಿತರು' ಎಂಬ ಅರ್ಥವಿವರಣೆಯೊಳಗೆ ಬರುವಂಥವರು ಮತ್ತು ಯು.ಎನ್.ಹೆಚ್.ಸಿ.ಆರ್.ನ ಆದೇಶದ ಕೇಂದ್ರ ಲಕ್ಷ್ಯಕ್ಕೆ ಪಾತ್ರರಾದವರು.[41] 25 ದಶಲಕ್ಷಕ್ಕೂ ಹೆಚ್ಚು ಅಂದಾಜಿನಲ್ಲಿರುವ ಆಂತರಿಕ ಸ್ಥಾನಪಲ್ಲಟ ಜನಗಳಿಗೂ ನೆರವು ನೀಡುವಂತೆ ಮಾನವಿಕ ನೆರವು ಮತ್ತು ರಕ್ಷಣೆಯ ವಿಚಾರದಲ್ಲಿ ಅದಕ್ಕಿರುವ ವಿಶಿಷ್ಟ ತಜ್ಞತೆಯ ಕಾರಣದಿಂದಾಗಿ ಯು.ಎನ್.ಹೆಚ್.ಸಿ.ಆರ್.ನ್ನೇ ಹೆಚ್ಚಾಗಿ ಕೇಳಲಾಗುತ್ತಿದೆ.

ನಿರಾಶ್ರಿತರ ಶಾಸನ ನೇರವಾಗಿ ಆಂತರಿಕ ಸ್ಥಾನಪಲ್ಲಟರಿಗೆ ಅನ್ವಯಿಸದಿದ್ದಾಗ್ಯೂ ಯು.ಎನ್.ಹೆಚ್.ಸಿ.ಆರ್. ಅವರುಗಳಿಗೆ ಮಾನವಹಕ್ಕುಗಳ ಶಾಸನ, ಮಾನವಿಕ ಶಾಸನಗಳ ಸಾರ್ವತ್ರಿಕ ನಿಯಮಗಳನ್ವಯ ತಾತ್ಕಾಲಿಕ ಕಾರ್ಯನಿರ್ವಹಣೆಯ ಆಧಾರದ ಮೇಲೆ ನೆರವನ್ನು ಒದಗಿಸುತ್ತದೆ. ಈ ರಕ್ಷಣೆಯು ನಿರಾಶ್ರಿತರಿಗೆ ಒದಗಿಸುವ ರಕ್ಷಣೆಯಂಥಹದೇ ಆಗಿದೆ.[42]

ಘರ್ಷಣೆಯ ಮೂಲಕಾರಣಗಳ ಬಗ್ಗೆ ಮತ್ತು ನಿರಾಶ್ರಿತರ ವಲಸೆಗಳನ್ನು ಮತ್ತು ಆಂತರಿಕ ಸ್ಥಾನಪಲ್ಲಟನೆಯನ್ನು ಬಗೆಹರಿಸಿ, ತಪ್ಪಿಸುವ, ಪ್ರತಿಬಂಧಕ

ಕಾರ್ಯತಂತ್ರಗಳು ಮತ್ತು ಮುನ್ನೆಚ್ಚರಿಕೆಯ ಆವಶ್ಯಕತೆಯ ಬಗ್ಗೆ ಯು.ಎನ್.ಹೆಚ್.ಸಿ.ಆರ್. ಹೆಚ್ಚು ಕಾಳಜಿ ವಹಿಸುತ್ತಿದೆ. ವಿಶ್ವಸಂಸ್ಥೆಯ ನಿರಾಶ್ರಿತರ ರಾಯಭಾರಿಯ ಪ್ರಕಾರ ಪ್ರತಿಬಂಧಕ ಕಾರ್ಯತಂತ್ರಕ್ಕೆ ಅಭಿವೃದ್ಧಿ ನೆರವನ್ನು ಒಳಗೊಂಡ ಸಮಗ್ರ ಅನುಸಂಧಾನದ, ಅಂತೆಯೇ ಮಾನವಿಕ ಕ್ರಿಯಾಶೀಲತೆ ಮತ್ತು ಮಾನವಹಕ್ಕುಗಳ ರಕ್ಷಣೆಯ[43] ಆವಶ್ಯಕತೆಯಿದೆ.

## *47. ನಿರಾಶ್ರಿತರಿಗೆ ಪ್ರಾದೇಶಿಕ ರಕ್ಷಣೆಯ ವ್ಯವಸ್ಥೆಗಳಿವೆಯೇ?*

ಆಫ್ರಿಕಾ ಐಕ್ಯತೆಯ ಸಂಘಟನೆ 1969ರಲ್ಲಿ ಸ್ವೀಕರಿಸಿ, (73ನೇ ಪ್ರಶ್ನೆಯನ್ನೂ ನೋಡಿ) 1974ರಲ್ಲಿ[44] ಜಾರಿಗೊಂಡ ಆಫ್ರಿಕಾದ ನಿರಾಶ್ರಿತರ ಸಮಸ್ಯೆಯ ನಿರ್ದಿಷ್ಟ ವಿಶಯಾಂಶಗಳನ್ನು ನಿಯಂತ್ರಿಸುವ ಒಡಂಬಡಿಕೆಯೇ ಅತ್ಯಂತ ಸಮಗ್ರವೂ ಮಹತ್ವವೂ ಆದ ಪ್ರಾದೇಶಿಕ ದಸ್ತಾವೇಜಾಗಿದೆ. ಅನ್ಯಾಕ್ರಮಣ ಪರಾಧೀನತೆ ಮತ್ತು ಆಂತರಿಕ ನಾಗರಿಕ ಗಲಭೆಯ ಕಾರಣಗಳೂ ಸೇರಿದಂತೆ, ಅವನ ಅಥವಾ ಅವಳ ಹುಟ್ಟಿನ ಅಥವಾ ರಾಷ್ಟ್ರೀಯತೆಯ ದೇಶವನ್ನು ಬಿಟ್ಟು ಹೊರಗೆ ಆಶ್ರಯ ಕೋರುವುದು ಅನಿವಾರ್ಯವಾದ ಪ್ರತಿಯೊಬ್ಬ ವ್ಯಕ್ತಿಗೂ ಅನ್ವಯಿಸುವ 'ನಿರಾಶ್ರಿತ' ಶಬ್ದದ ವಿಸ್ತೃತ ವ್ಯಾಖ್ಯಾನವನ್ನು ಈ ಒಡಂಬಡಿಕೆ ಒಳಗೊಂಡಿದೆ.

## *48. ಅವನ/ಅವಳ ಮಾನವ ಹಕ್ಕುಗಳು ಉಲ್ಲಂಘನೆಯಾಗುತ್ತಿದೆಯೆಂದು ಒಬ್ಬ ವ್ಯಕ್ತಿಗೆ ಅನ್ನಿಸಿದಾಗ ವಿಶ್ವಸಂಸ್ಥೆಗೆ ಮನವಿ ಮಾಡಬಹುದೇ?*

ಮಾನವಹಕ್ಕುಗಳು ಉಲ್ಲಂಘನೆಯಾಗಿವೆಯೆಂದು ಆಪಾದಿಸಿರುವ ನೂರಾರು ಸಾವಿರ ದೂರುಗಳನ್ನು ವ್ಯಕ್ತಿಗಳು ಹಾಗೂ ಸಂಘಟನೆಗಳಿಂದ ವಿಶ್ವಸಂಸ್ಥೆ ಸ್ವೀಕಾರ ಮಾಡಿದೆ. ಈ ವಿಷಯದಲ್ಲಿ ವಿಶೇಷ ಕಾರ್ಯವಿಧಾನವನ್ನು ಪ್ರಾರಂಭಿಸಿದಾಗಿನಿಂದ (ಪ್ರಶ್ನೆ 49ನ್ನು ನೋಡಿ) ದೂರಿನ ಸಂಖ್ಯೆ ಗಣನೀಯವಾಗಿ ಬೆಳೆದಿದೆ. ಉದಾಹರಣೆಗೆ ಕೇವಲ 1993ರಲ್ಲೇ 2,80,000 ಅಂಥಾ ಮನವಿಗಳು ವಿಶ್ವಸಂಸ್ಥೆಯಿಂದ ಸ್ವೀಕರಿಸಲ್ಪಟ್ಟವು. ಯಾವಾಗಲೂ ವ್ಯಕ್ತಿಗಳಿಗೆ ಮಾತ್ರ ಸೀಮಿತವಾಗದ ದೂರುಗಳ ವ್ಯವಹರಣೆಗೆ ಅನೇಕ ಕಾರ್ಯವಿಧಾನಗಳು ರೂಪುಗೊಂಡಿವೆ. ಅದಲ್ಲದೆ ವ್ಯಕ್ತಿಗತ ಪ್ರಕರಣಗಳನ್ನು ಮಾನವಹಕ್ಕುಗಳ ಸಮಿತಿ (ಪ್ರಶ್ನೆ 13ರನ್ನು ನೋಡಿ) ಜನಾಂಗಭೇದ ನಿರ್ಮೂಲನ ಸಮಿತಿ (ಸಿ.ಇ.ಆರ್.ಡಿ) (26ನೇ ಪ್ರಶ್ನೆಯನ್ನು ನೋಡಿ) ಮತ್ತು ಕಾನೂನುಬಾಹಿರ ಬಂಧನಗಳ ಮೇಲಿನ ಕಾರ್ಯತಂಡ (ಭಾಗ II, ಕಲಮು 5) ಇವುಗಳ ಪರಿಶೀಲನೆಗೆ ಅವಕಾಶ ಮಾಡುವ ಕಾರ್ಯವಿಧಾನಗಳು ಅಸ್ತಿತ್ವದಲ್ಲಿವೆ.

## *49. ದೂರುಗಳ ಬಗ್ಗೆ ಏನು ಮಾಡಲಾಗುವುದು?*

ವಿಶ್ವಸಂಸ್ಥೆಯ ಮಾನವಹಕ್ಕುಗಳ ಆಯೋಗ ಈ ದೂರುಗಳೂ ಸೇರಿದಂತೆ, ಮಾನವಹಕ್ಕುಗಳ ವಿಷಯಗಳ ವ್ಯವಹರಣೆಯ ಪ್ರಾಥಮಿಕ ಜವಾಬ್ದಾರಿ ಹೊಂದಿರುವ ಘಟಕವಾಗಿದೆ. (ಪ್ರಶ್ನೆ 7ನ್ನೂ ನೋಡಿರಿ.)

ಆಯೋಗ ರಚನೆಯ ಸಂದರ್ಭದಲ್ಲಿ ವ್ಯಕ್ತಿಗಳು, ಸಂಘಟನೆಗಳು ಮಾನವಹಕ್ಕುಗಳ ಉಲ್ಲಂಘನೆಯ ವಿಷಯದಲ್ಲಿ ಪರಿಹಾರ ಕೇಳಿಕೊಳ್ಳಲು ಯಾವ ಅವಕಾಶಗಳನ್ನೂ ಮಾಡಿರಲಿಲ್ಲ ಮತ್ತು ಆ ರೀತಿ ಮಾನವಹಕ್ಕುಗಳ ವಿಷಯದಲ್ಲಿ ಬಂದಿರುವ ದೂರುಗಳ ಬಗ್ಗೆ ಕ್ರಮ ತೆಗೆದುಕೊಳ್ಳುವ ಅಧಿಕಾರ ತನಗಿಲ್ಲವೆಂದು ಆಯೋಗ ಸತತವಾಗಿ ಮಾನ್ಯ ಮಾಡಿಕೊಂಡು ಬಂದಿತ್ತು. ಆದಾಗ್ಯೂ ಬಂದಿರುವ ದೂರುಗಳಿಂದ ಎರಡು ಬಗೆಯ ಪಟ್ಟಿಯನ್ನು ಸಿದ್ಧಪಡಿಸುವ ಕಾರ್ಯವಿಧಾನವನ್ನು (ಇ.ಸಿ.ಓ.ಎಸ್.ಓ.ಸಿ. ನಿರ್ಣಯ 728 ಎಫ್ 1959) ರೂಪಿಸಲಾಯಿತು. ಮಾನವಹಕ್ಕುಗಳ ರಕ್ಷಣೆ ಹಾಗೂ ಉತ್ತೇಜನಕ್ಕೆ ಸಂಬಂಧಿಸಿದ ಗೌಪ್ಯವಲ್ಲದ ಪಟ್ಟಿ, ಮತ್ತು ರಾಷ್ಟ್ರಗಳ ವಿರುದ್ಧ ಬಂದಿರುವ ದೂರುಗಳಿಂದ ಕೂಡಿದ ಗೌಪ್ಯಪಟ್ಟಿ.

ಮಾನವಹಕ್ಕುಗಳ ಹಾಗೂ ಮೂಲಭೂತ ಸ್ವಾತಂತ್ರ್ಯಗಳ ಅಸಹ್ಯ ಮತ್ತು ವಿಶ್ವಾಸಾರ್ಹವಾಗಿ ದೃಢೀಕರಿಸಿರುವ ಉಲ್ಲಂಘನೆಗಳ ಸತತ ಮಾದರಿಗಳನ್ನು ಸ್ಪಷ್ಟಗೊಳಿಸುವ ದೂರುಗಳನ್ನು ಪರಿಶೀಲಿಸುವ ಸಂಕೀರ್ಣ ಗೌಪ್ಯ ಕಾರ್ಯವಿಧಾನದ ಸ್ಥಾಪನೆಯನ್ನು 1970ರಲ್ಲಿ ಇ.ಸಿ.ಓ.ಎಸ್.ಓ.ಸಿ.ಯ 1503 (48) ನಿರ್ಣಯದ ಪ್ರಕಾರ ಅಧಿಕೃತಗೊಳಿಸಲಾಯಿತು. ಪ್ರಪ್ರಥಮ ಬಾರಿಗೆ, ಉಲ್ಲಂಘನೆಗಳಿಂದ ಸಂತ್ರಸ್ತರಾದವರಷ್ಟೇ ಅಲ್ಲದೆ, ಉಲ್ಲಂಘನೆಗಳ ವಿಷಯದಲ್ಲಿ ನೇರ ಮತ್ತು ವಿಶ್ವಾಸಾರ್ಹ ಮಾಹಿತಿಯಿರುವ ಯಾವುದೇ ವ್ಯಕ್ತಿ, ಗುಂಪು ಅಥವಾ ಸರ್ಕಾರೇತರ ಸಂಘಟನೆ ಪುರಾವೆಗಳನ್ನು ಒದಗಿಸುವುದು ಸಾಧ್ಯವಾಯಿತು. ತಾರತಮ್ಯ ಪ್ರತಿಬಂಧಕ ಮತ್ತು ಅಲ್ಪಸಂಖ್ಯಾತರ ರಕ್ಷಣಾ ಉಪ ಆಯೋಗದ ಕಾರ್ಯತಂಡ, ಈ ದೂರುಗಳನ್ನು ಪ್ರಥಮವಾಗಿ ಪರಿಶೀಲಿಸುತ್ತದೆ (ಪ್ರಶ್ನೆ 34ನ್ನೂ ನೋಡಿ). ಅನಂತರ ಅವುಗಳನ್ನು ಮಾನವಹಕ್ಕುಗಳ ಆಯೋಗದ ಕಾರ್ಯತಂಡ ಪರಿಶೀಲಿಸುತ್ತದೆ.

ಮಾನವಹಕ್ಕುಗಳ ಆಯೋಗವು ಸನ್ನಿವೇಶದ ಆಮೂಲಾಗ್ರ ಅಧ್ಯಯನ ಮಾಡಲು ಅಥವಾ ಸಂಬಂಧಪಟ್ಟ ದೇಶದ ಸಮ್ಮತಿಯೊಂದಿಗೆ ಪರಿಸ್ಥಿತಿಯನ್ನು ತನಿಖೆ ಮಾಡಲು ತಾತ್ಕಾಲಿಕ ಸಮಿತಿಯೊಂದನ್ನು ರಚಿಸಲು ನಿರ್ಧರಿಸಬಹುದು ಮತ್ತು ಇವೆರಡರಲ್ಲಿ ಯಾವುದೇ ಮಾಡಿದ್ದಾಗ್ಯೂ ತತ್ಫಲವಾದ ವರದಿಯನ್ನು ಇ.ಸಿ.ಓ.ಎಸ್.ಓ.ಸಿ.ಗೆ ಒಪ್ಪಿಸುತ್ತದೆ. ಈ ಹೊತ್ತಿಗೆ ಮಾಹಿತಿಗಳು ಬಹಿರಂಗಗೊಳ್ಳುತ್ತವೆ. ಆಯೋಗವು ಎಂದೂ ಬಹಿರಂಗವಾಗಿ ಈ ಎರಡರಲ್ಲಿ ಯಾವ ಕ್ರಮವನ್ನೂ ಕೈಗೊಂಡಿಲ್ಲ. ಆದಾಗ್ಯೂ ಅಧಿವೇಶನಗಳ ಮಧ್ಯಂತರಗಳಲ್ಲಿ ಆಯೋಗವು ಪದೇಪದೇ ಪರಿಸ್ಥಿತಿಯನ್ನು ಪರಿಶೀಲಿಸಿ ವರದಿ ಸಲ್ಲಿಸಲು ಸ್ವತಂತ್ರ ತಜ್ಞರನ್ನು ನೇಮಿಸುವ ಕ್ರಿಯಾವಿನ್ಯಾಸವನ್ನು ಗೌಪ್ಯವಾಗಿ ರೂಪಿಸಿಕೊಂಡಿರುವುದಾಗಿ ತಿಳಿದುಬಂದಿದೆ. ಆಯೋಗ ತನ್ನದೇ ಉಪಕ್ರಮದ ಮೇಲೆ ಒಂದು ನಿರ್ದಿಷ್ಟ ಪರಿಸ್ಥಿತಿಯ ಬಗ್ಗೆ ಗೌಪ್ಯತೆಯನ್ನು ಮನ್ನಾಯಿತು ಮಾಡಬಹುದು ಮತ್ತು ತನಿಖೆಗಾಗಿ ಒಂದು ಬಹಿರಂಗ ವ್ಯವಸ್ಥೆಯನ್ನು ಏರ್ಪಡಿಸಬಹುದು.

ಆಯೋಗವು ಆಯಾ ವರ್ಷದ ಅದರ ಅಧಿವೇಶನದಲ್ಲಿ ನಿರ್ಣಯ 1503ರ ಕಾರ್ಯವಿಧಾನದ[45] ಪ್ರಕಾರ ಪರಿಶೀಲನೆಗೆ ತೆಗೆದುಕೊಂಡ ದೇಶಗಳ ಹೆಸರನ್ನು ಬಹಿರಂಗವಾಗಿ ಪ್ರಕಟಿಸುತ್ತದೆ. ಆ ರೀತಿ ಹೆಸರಿಸಲ್ಪಟ್ಟ ದೇಶಗಳು ಇನ್ನಿತರ ವಿಷಯ ಸೂಚಿಯಡಿಯಲ್ಲಿ, ಮಾನವಹಕ್ಕುಗಳನ್ನು ಉಲ್ಲಂಘಿಸಿರುವುದರ ಬಗ್ಗೆ ಬಹಿರಂಗ ಚರ್ಚೆಯ ವಸ್ತುವಾಗಬಹುದು. ಈ ಕಾರ್ಯವಿಧಾನದ ಪರಿಣಾಮಕಾರಿತ್ವ ರಾಷ್ಟ್ರಗಳ ಸ್ವಯಂ ಸಹಕಾರವನ್ನು ಬಹುಮಟ್ಟಿಗೆ ಅವಲಂಬಿಸಿದೆ. ಅದಕ್ಕಿರುವ ಪ್ರಮುಖ ಕಾರ್ಯವೆಂದರೆ, ಅದು ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆ ಮತ್ತು ಅಂತರರಾಷ್ಟ್ರೀಯ ಒಡಂಬಡಿಕೆ ಮಾನ್ಯ ಮಾಡಿರುವ ಎಲ್ಲ ಹಕ್ಕುಗಳನ್ನು ಒಳಗೊಂಡಿರುತ್ತದೆ ಮತ್ತು ವಿಶ್ವಸಂಸ್ಥೆಯ ಎಲ್ಲ ಸದಸ್ಯರಿಗೂ ಅನ್ವಯವಾಗುತ್ತದೆ. ಒಪ್ಪಂದಕ್ಕೆ ಭಾಗಸ್ಥ ದೇಶಗಳಿಗೆ ಮಾತ್ರ ಅನ್ವಯವಾಗುವ ನಿರ್ದಿಷ್ಟ ಹಕ್ಕುಗಳಿಗೆ ಸಂಬಂಧಿಸಿದ ಇನ್ನಿತರ ಕಾರ್ಯವಿಧಾನಗಳಿಗೆ ಇದು ಪೂರಕವಾಗಿರುತ್ತದೆ.

ಬಹಿರಂಗ ಕಾರ್ಯವಿಧಾನಕ್ಕೆ ಸಂಬಂಧಿಸಿದಂತೆ 1967ರಲ್ಲಿ ಇ.ಸಿ.ಓ.ಎಸ್.ಓ.ಸಿ.ಯು ಜನಾಂಗಭೇದವನ್ನು ಎತ್ತಿ ತೋರಿಸುವ ಮಾನವಹಕ್ಕುಗಳ ಸತತ ಉಲ್ಲಂಘನೆಯನ್ನು ಪ್ರಕಟಿಸುವ ಸನ್ನಿವೇಶಗಳ ಆಮೂಲಾಗ್ರ ಅಧ್ಯಯನಕ್ಕೆ ವರದಿ ಹಾಗೂ ಶಿಫಾರಸ್ಸುಗಳನ್ನು ಪಡೆದುಕೊಳ್ಳಲು ಮಾನವಹಕ್ಕುಗಳ ಆಯೋಗಕ್ಕೆ ಅಧಿಕಾರ ನೀಡುವ 1235ರ ನಿರ್ಣಯವನ್ನು ಅಂಗೀಕರಿಸುವ ಮೂಲಕ ಒಂದು ಹೊಸ ಮೈಲಿಗಲ್ಲನ್ನು ಸ್ಥಾಪಿಸಿತು. ವಾಸ್ತವಾಂಶಗಳ ಅಧ್ಯಯನಗಳು ಅಲ್ಲಿಂದ ಪ್ರಾರಂಭಗೊಂಡವು. 1967ರಲ್ಲಿ ದಕ್ಷಿಣ ಆಫ್ರಿಕಾದ ಬಗ್ಗೆ ಒಂದು ತಜ್ಞರ ಕಾರ್ಯತಂಡ ನೇಮಿಸಲ್ಪಟ್ಟಿತು. ತದನಂತರ ಆಕ್ರಮಿತ ಅರಬ್ ಭೂಭಾಗಗಳಲ್ಲಿ ನಡೆಯಿತೆನ್ನಲಾದ ಮಾನವಹಕ್ಕುಗಳ ಉಲ್ಲಂಘನೆಗಳ ಬಗ್ಗೆ ಒಂದು ತಂಡ ಮತ್ತು ಚಿಲಿ (1979ರಲ್ಲಿ ಬರಖಾಸ್ತುಗೊಳಿಸಲಾಯಿತು)ಯ ಬಗ್ಗೆ ಒಂದು ತಾತ್ಕಾಲಿಕ ಕಾರ್ಯತಂಡವನ್ನು ರಚಿಸಲಾಯಿತು. ಈ ಸಂದರ್ಭಗಳಲ್ಲುಂಟಾದ ರಾಜಕೀಯ ಇಚ್ಛಾಶಕ್ತಿಯ ಸಾಧನೆ ಮತ್ತು ಈ ಸನ್ನಿವೇಶಗಳ ಬಗ್ಗೆ ಸಹಮತದಿಂದಾಗಿ ಮಾನವಹಕ್ಕುಗಳ ಆಯೋಗಕ್ಕೆ ಪ್ರಪಂಚ ಯಾವುದೇ ಭಾಗದಲ್ಲಿ ಮಾನವಹಕ್ಕುಗಳ ಹಾಗೂ ಮೂಲಭೂತ ಸ್ವಾತಂತ್ರ್ಯಗಳ ಉಲ್ಲಂಘನೆಯಾದ ಸಂದರ್ಭಗಳನ್ನು ಬಹಿರಂಗವಾಗಿ ಪರಿಶೀಲಿಸಲು ಈಗಾಗಲೇ ಇದ್ದ ಆದೇಶವನ್ನು ಅನುಸರಿಸುವ ಅವಕಾಶ ಉಂಟಾಯಿತು.

### *50. ಮಾನವಹಕ್ಕುಗಳ ಆಯೋಗ ಮಾನವಹಕ್ಕುಗಳ ಉಲ್ಲಂಘನೆಗಳ ವ್ಯವಹರಣೆಗೆ ಬೇರೆ ಯಾವ ಉಪಕ್ರಮ ಕೈಗೊಂಡಿದೆ?*

ನಿಧಾನವಾಗಿ ಮತ್ತು ತಾತ್ಕಾಲಿಕವಾಗಿ, ಯಾವುದೇ ನಿರ್ದಿಷ್ಟ ಮಾನವಹಕ್ಕುಗಳ ದಸ್ತಾವೇಜಿನಿಂದ ಶಾಸನಾಧಿಕಾರ ಪಡೆದಿಲ್ಲದ ಕ್ರಿಯಾವಿನ್ಯಾಸದ ಶ್ರೇಣಿಯೊಂದು ರೂಪಗೊಳ್ಳುತ್ತಿದೆ. ಆರ್ಥಿಕ, ಸಾಮಾಜಿಕ ಪರಿಷತ್ತಿನ ಒಪ್ಪಿಗೆಯಂತೆ, ಆಯೋಗದ ನಿರ್ಣಯಾನುಸಾರ ಅವು ಒಂದೊಂದೂ ನಿರ್ದಿಷ್ಟ ಆದೇಶದೊಂದಿಗೆ ರಚಿಸಲ್ಪಟ್ಟಿವೆ.

ಮೂಲತಃ ಇವುಗಳು ಅನುಷ್ಠಾನದ ಕ್ರಿಯಾವಿನ್ಯಾಸವಾಗಿದ್ದು ಈ ವಿಶೇಷ ಕಾರ್ಯವಿಧಾನಗಳು ಒಪ್ಪಿಕೊಂಡಿರುವ ಮಾನವಹಕ್ಕುಗಳ ಮಾನದಂಡಗಳನ್ನು ಸರ್ಕಾರಗಳು ಅನುಪಾಲಿಸುವಂತೆ ಉತ್ತೇಜಿಸುತ್ತವೆ. ಒಟ್ಟಾರೆಯಾಗಿ ಮಾನವಹಕ್ಕುಗಳ ಆಯೋಗದ "ವಿಶೇಷ ಕಾರ್ಯ ವಿಧಾನಗಳು" ಎಂದು ಕರೆಯಲ್ಪಡುವ ಈ ಕ್ರಿಯಾವಿನ್ಯಾಸಗಳು ಎರಡು ಗುಂಪುಗಳಿಗೆ ಸೇರಿವೆ. ವಿಷಯಾಧಾರಿತವಾಗಿ, ಮಾನವಹಕ್ಕುಗಳ ಬಗ್ಗೆ ವಿಶ್ವವ್ಯಾಪಿಯಾಗಿ ವ್ಯವಹರಿಸುವ ಗುಂಪು ಮತ್ತು ಒಂದು ನಿರ್ದಿಷ್ಟ ದೇಶದಲ್ಲಿನ ಒಟ್ಟಾರೆ ಮಾನವಹಕ್ಕುಗಳ ಪರಿಸ್ಥಿತಿಯ ಬಗ್ಗೆ ವ್ಯವಹರಿಸುವ ಗುಂಪು.[46]

ವಿಶೇಷ ಸಂಪರ್ಕಾಧಿಕಾರಿಗಳ ಮೂಲಕ ಅಥವಾ ಕಾರ್ಯತಂಡಗಳ ಮೂಲಕವಾಗಿ ಈ ಕ್ರಿಯಾವಿನ್ಯಾಸವನ್ನು ಸ್ಥಾಪಿಸಲಾಗುತ್ತದೆ. ಕಾರ್ಯತಂಡದ ಸದಸ್ಯರು ಮತ್ತು ವಿಶೇಷ ಸಾಮುರಸ್ಯಾಧಿಕಾರಿಗಳು ಸ್ವತಂತ್ರ ತಜ್ಞರಾಗಿದ್ದು ಸರ್ಕಾರದ ಪ್ರತಿನಿಧಿಗಳಾಗಿರುವುದಿಲ್ಲ. ಮೇಲಿನವುಗಳಲ್ಲದೆ ವಿವಿಧ ನಿರ್ದಿಷ್ಟ ವಿಷಯಗಳ ಮೇಲೆ ವರದಿ ತಯಾರಿಸುವಂತೆ ಕೋರಿ ಮಹಾಕಾರ್ಯದರ್ಶಿಗೆ ಮಾಡುವ ಆದೇಶಗಳೂ ಇವೆ. ಇವುಗಳು ವಿಷಯಾಧಾರಿತವಿರಬಹುದು ಅಥವಾ ಪ್ರತ್ಯೇಕ ಸನ್ನಿವೇಶಕ್ಕೆ ಸಂಬಂಧಿಸಿರಬಹುದು.

### *51. ವಿಷಯಾಧಾರಿತ ಕಾರ್ಯವಿಧಾನಗಳು ಯಾವುವು ?*

ಬಲವಂತದ ಅಥವಾ ಅನೈಚ್ಛಿಕ ಕಾಣೆಯಾಗುವಿಕೆಯ ವಿಚಾರದಲ್ಲಿ 1980ರಲ್ಲಿ ನೇಮಿಸಲ್ಪಟ್ಟ ಕಾರ್ಯತಂಡವೇ ವಿಷಯಾಧಾರಿತ ಕಾರ್ಯವಿಧಾನಗಳಲ್ಲಿ ಮೊದಲನೆಯದು. ಕಾಣೆಯಾದ ವ್ಯಕ್ತಿ ಇರುವ ಸ್ಥಳವನ್ನು ಸ್ಪಷ್ಟವಾಗಿಸುವಲ್ಲಿ ಸರ್ಕಾರಗಳಿಗೂ ಮತ್ತು ಕಾಣೆಯಾದವರ ಕುಟುಂಬಗಳಿಗೂ ನಡುವೆ ಮಧ್ಯಸ್ಥಗಾರನಾಗಿ ಕೆಲಸ ಮಾಡುವುದು ಅದರ ಪ್ರಥಮ ಪಾತ್ರ. ಈ ಗುರಿಸಾಧನೆಗಾಗಿ ಕಾರ್ಯತಂಡ ಕಾಣೆಯಾದ ವ್ಯಕ್ತಿಗಳ ಪ್ರಕರಣವನ್ನು ವಿಶ್ಲೇಷಿಸುತ್ತದೆ. ಸರ್ಕಾರ ಮತ್ತು ಸರ್ಕಾರೇತರ ಮೂಲಗಳಿಂದ ಮಾಹಿತಿಯನ್ನು ಪಡೆದುಕೊಳ್ಳುತ್ತದೆ. ಪ್ರಕರಣಗಳನ್ನು ಸಂಬಂಧಿಸಿದ ಸರ್ಕಾರಕ್ಕೆ ತನಿಖೆ ಮಾಡಬೇಕೆಂಬ ಮನವಿಯೊಂದಿಗೆ ಕಳಿಸಿಕೊಡುತ್ತದೆ; ಸರ್ಕಾರಗಳ ಉತ್ತರವನ್ನು ಕಾಣೆಯಾದ ಕುಟುಂಬದವರಿಗೆ ತಲುಪಿಸುತ್ತದೆ. ತನಿಖೆಗಳನ್ನು ಮತ್ತಿತರ ವಿಚಾರಣೆಗಳನ್ನು ಮುಂಬರಿಸುತ್ತದೆ. ನಿರ್ದಿಷ್ಟ ದೇಶಗಳಿಗೆ ಸಂಬಂಧಿಸಿದ ಸಾರ್ವತ್ರಿಕ ಸ್ವರೂಪದ ಆರೋಪಗಳನ್ನೂ ಪರಿಶೀಲಿಸುತ್ತದೆ. ಕಾರ್ಯತಂಡದ ಜತೆ ಸಹಕರಿಸಿದ್ದರಿಂದಾಗಿ, ಕಾಣೆಯಾದವರ ಸಂಬಂಧಿಗಳು ಮತ್ತು ಇನ್ನಿತರರು ಬೆದರಿಕೆ ಅಥವಾ ಪ್ರತೀಕಾರಕ್ಕೆ ಒಳಗಾದಾಗ ಮಧ್ಯಪ್ರವೇಶಿಸಿ ಸಂಬಂಧಿಸಿದ ಸರ್ಕಾರದ ಜತೆ ವ್ಯವಹರಿಸುತ್ತದೆ. ಕಾರ್ಯತಂಡ ಸಾರ್ವತ್ರಿಕ ತೀರ್ಮಾನಗಳನ್ನು ತೆಗೆದುಕೊಳ್ಳುತ್ತದೆ ಮತ್ತು ಶಿಫಾರಸುಗಳನ್ನು ಮಾಡುತ್ತದೆ. ಅವುಗಳನ್ನು ಮಾನವಹಕ್ಕುಗಳ ಆಯೋಗಕ್ಕೆ ಅದು ಸಲ್ಲಿಸುವ ವರದಿಗಳಲ್ಲಿ ಅಳವಡಿಸಲಾಗುತ್ತದೆ.[47]


'ಅವನು ನನ್ನ ತಲೇನೆ ತಿಂತಾನೆ!'
ಮಾನವ ಹಕ್ಕುಗಳ ಆಯೋಗ
PLANTU

ಡಿಸೆಂಬರ್ 18,1992ರಲ್ಲಿ ವಿಶ್ವಸಂಸ್ಥೆಯ ಮಹಾಧಿವೇಶನಗಳಲ್ಲಿ ಬಲವಂತದಿಂದ ಕಾಣೆಯಾಗುವವರೆಲ್ಲರಿಗೆ ರಕ್ಷಣೆ ನೀಡುವ ಘೋಷಣೆ ಸ್ವೀಕಾರವಾಯಿತು. ಕಾಣೆಯಾಗುವಂತೆ ಮಾಡುವ ವ್ಯವಸ್ಥಿತ ಪದ್ಧತಿ, ಮಾನವತೆಯ ವಿರುದ್ಧದ ಅಪರಾಧವೆಂದು ಮತ್ತು ಶಾಸನದ ಅಡಿಯಲ್ಲಿ ವ್ಯಕ್ತಿಯೆಂಬ ಪರಿಗಣನೆಯ ಹಕ್ಕಿನ, ವ್ಯಕ್ತಿಸ್ವಾತಂತ್ರ್ಯದ ಭದ್ರತೆಯ ಮತ್ತು ಚಿತ್ರಹಿಂಸೆಗೆ ಗುರಿಯಾಗುವುದರ ವಿರುದ್ಧದ ಹಕ್ಕಿನ ಉಲ್ಲಂಘನೆಯೆಂದು ಘೋಷಣೆಯಲ್ಲಿ ಸ್ಪಷ್ಟಪಡಿಸಲಾಗಿದೆ. ಅದು ಜೀವಿಸುವ ಹಕ್ಕಿನ ಉಲ್ಲಂಘನೆ ಅಥವಾ ಅದಕ್ಕೆ ಬೆದರಿಕೆಯೊಡ್ಡುವ ಕ್ರಮವೂ ಆಗಿದೆ. ಬಲವಂತದ ಕಾಣೆಯಾಗುವಿಕೆಗಳನ್ನು ನಿಲ್ಲಿಸಲು ಮತ್ತು ಅದರಿಂದ ರಕ್ಷಣೆ ನೀಡಲು ಕ್ರಮಕೈಗೊಳ್ಳಲು ರಾಷ್ಟ್ರಗಳು ಬಾಧ್ಯಸ್ಥರಾಗಿವೆ.

ಸ್ವೇಚ್ಛಾನುಸಾರಿಯಾಗಿ ಅಥವಾ ಸಂಬಂಧಿಸಿದ ರಾಷ್ಟ್ರಗಳು ಒಪ್ಪಿಕೊಂಡಿರುವ ಅಂತರರಾಷ್ಟ್ರೀಯ ಮಾನದಂಡಗಳ ವಿರುದ್ಧವಾಗಿ, ಜಾರಿಗೊಳಿಸಿದ ಬಂಧನದ ಪ್ರಕರಣಗಳ ವಿಚಾರಣೆಗಾಗಿ 1991ರಲ್ಲಿ ಸ್ವೇಚ್ಛಾನುಸಾರಿ ಬಂಧನಗಳ ಮೇಲಿನ ಕಾರ್ಯತಂಡದ ರಚನೆಯಾಯಿತು. ನ್ಯಾಯಬಾಹಿರ, ಅವಸರದ ಸ್ವೇಚ್ಛಾನುಸಾರಿ ಮರಣ ದಂಡನೆಗಳ ಬಗೆಗೆ ವಿಶೇಷ ಸಾಮರಸ್ಯಾಧಿಕಾರಿಯ ಹುದ್ದೆಯನ್ನು 1982ರಲ್ಲಿ ಸ್ಥಾಪಿಸಲಾಯಿತು (ಭಾಗ IIರ ಕಲಮು 3ನೋಡಿ) ಮತ್ತು ಚಿತ್ರಹಿಂಸೆಯ ಬಗೆಗಿನ ಸಂಪರ್ಕಾಧಿಕಾರಿಯ ಹುದ್ದೆ 1985ರಲ್ಲಿ ಸ್ಥಾಪನೆಯಾಯಿತು (ಭಾಗ IIರ ಕಲಮು 5 ನೋಡಿರಿ). ಇವರುಗಳು ಬಲಾತ್ಕಾರದ ಅಥವಾ ಅನೈಚ್ಛಿಕ ಕಾಣೆಯಾಗುವಿಕೆಯ ಮೇಲಿನ ಕಾರ್ಯತಂಡದೊಂದಿಗೆ ಸೇರಿ ಕಾಳಜಿವಹಿಸಬೇಕಾದ ಸನ್ನಿವೇಶಗಳ ಬಗ್ಗೆ ತಕ್ಷಣವೇ ಪ್ರತಿಕ್ರಿಯಿಸಲು ತುರ್ತುಕ್ರಮವನ್ನು ಕೈಗೊಳ್ಳುತ್ತಾರೆ.

ಉಳಿದ ವಿಶೇಷ ಕಾರ್ಯವಿಧಾನಗಳಲ್ಲಿ ಆಂತರಿಕ ಸ್ಥಾನಪಲ್ಲಟ (ಭಾಗ IIರ ಕಲಮು 14 ನೋಡಿರಿ), ಮಕ್ಕಳ ಮಾರಾಟ, ಮಕ್ಕಳ ವೇಶ್ಯಾವೃತ್ತಿ, ಲಂಪಟ ಸಾಹಿತ್ಯಕ್ಕೆ ಮಕ್ಕಳ ಬಳಕೆ (ಭಾಗ IIರ ಕಲಮು 25 ನೋಡಿರಿ), ನ್ಯಾಯಾಂಗದ ಸ್ವಾತಂತ್ರ್ಯ ಮತ್ತು ನಿಷ್ಪಕ್ಷಪಾತತೆ, ಪಂಚಾಯತರ, ಸಲಹೆಗಾರರ, ನ್ಯಾಯವಾದಿಗಳ ಸ್ವಾತಂತ್ರ್ಯ (ಭಾಗ IIರ ಕಲಮು 10 ನೋಡಿರಿ), ಮಹಿಳೆಯರ ವಿರುದ್ಧದ ಹಿಂಸಾಚಾರದ ನಿರ್ಮೂಲನ (32ನೇ ಪ್ರಶ್ನೆಯನ್ನೂ ನೋಡಿರಿ), ಪ್ರಚಲಿತ ಜನಾಂಗೀಯತೆಯ, ಜನಾಂಗ ಭೇದದ ಮತ್ತು ವಿದೇಶೀಯರ ಭಯದ ರೂಪಗಳ (ಭಾಗ IIರ ಕಲಮು 2ನ್ನು ನೋಡಿರಿ), ಧಾರ್ಮಿಕ ಅಸಹಿಷ್ಣುತೆ (ಭಾಗ IIರ ಕಲಮು 18ನೋಡಿರಿ), ಅಭಿಪ್ರಾಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ (ಭಾಗ IIರ ಕಲಮು 19 ನೋಡಿರಿ) ಮತ್ತು ಜನರ ಸ್ವಯಂನಿರ್ಧಾರದ ಹಕ್ಕುಗಳ ಚಲಾವಣೆಗೆ ಅಡ್ಡಿಪಡಿಸಲು ಬಾಡಿಗೆ ಸಿಪಾಯಿಗಳನ್ನು ಉಪಯೋಗಿಸುವ ವಿಚಾರಗಳ ಮೇಲೆ ನೇಮಕಗೊಂಡ ವಿಶೇಷ ಸಾಮರಸ್ಯಾಧಿಕಾರಿಗಳನ್ನು ಹೆಸರಿಸುವುದು ಅತ್ಯಗತ್ಯ.

### *52. ಯಾವುದೇ ನಿರ್ದಿಷ್ಟ ದೇಶದೊಳಗಿನ ಸನ್ನಿವೇಶವು ಪರಾಮರ್ಶೆಗೆ ಒಳಗಾಗಬಹುದೇ ?*

ವಿಶ್ವಸಂಸ್ಥೆಯ ಮಹಾಧಿವೇಶನಕ್ಕೆ ಮತ್ತು ಮಾನವಹಕ್ಕುಗಳ ಆಯೋಗಕ್ಕೆ ವರದಿ ಸಲ್ಲಿಸುವ ವಿಶೇಷ ಸಾಮರಸ್ಯಾಧಿಕಾರಿಗಳ ಪರಾಮರ್ಶೆಗೆ 1994ರಲ್ಲಿ ಎಂಟು[48] ದೇಶಗಳು ಒಳಗಾಗಿದ್ದವು. ಕೆಲವು ದೇಶಗಳಲ್ಲಿನ ಇನ್ನೊಂದಿಷ್ಟು ಸನ್ನಿವೇಶಗಳು, ಮಾನವಹಕ್ಕುಗಳ ಆಯೋಗಕ್ಕೆ[49] ಮಾತ್ರ ವರದಿ ಸಲ್ಲಿಸುವ ವಿಶೇಷ ಸಾಮರಸ್ಯಾಧಿಕಾರಿಯಿಂದ ಪರಿಶೀಲಿಸಲ್ಪಟ್ಟವು.

### *53. ಈ ವಿಶೇಷ ಕಾರ್ಯವಿಧಾನಗಳ ಉದ್ದಿಶ್ಯವೇನು ?*

ಅಂತರರಾಷ್ಟ್ರೀಯ ಮಾನವಹಕ್ಕುಗಳ ಪರಿಣಾಮಕಾರಿ ಅನುಷ್ಠಾನದ ಮಾನದಂಡಗಳ ಹಿನ್ನೆಲೆಯಲ್ಲಿ ಮಾನವಹಕ್ಕುಗಳ ಉಲ್ಲಂಘನೆಗಳ ಸನ್ನಿವೇಶದ ಅಧ್ಯಯನ ಅಥವಾ ಪರಿಶೀಲನೆಗೆ ಎಲ್ಲಾ ವಿಶೇಷ ಕಾರ್ಯವಿಧಾನಗಳು ಆದೇಶ ಹೊಂದಿರುತ್ತವೆ. ಹಾಗೆ ಮಾಡುವಲ್ಲಿ ಅವು ಸರ್ಕಾರ ಮತ್ತು ಮಾನವಹಕ್ಕು ಉಲ್ಲಂಘನೆಯ ಸಂತ್ರಸ್ತರೂ ಸೇರಿದಂತೆ ಸರ್ಕಾರಿ ಹಾಗೂ ಸರ್ಕಾರೇತರ ಮೂಲಗಳಿಂದ ಮಾಹಿತಿ ಪಡೆದುಕೊಳ್ಳಬಹುದು. ಸರ್ಕಾರಗಳಿಗೆ ಆ ಮಾಹಿತಿಗಳ ಬಗ್ಗೆ ಅನಿಸಿಕೆಗಳನ್ನು ತಿಳಿಸುವಂತೆ ಕೇಳಬಹುದು. ಸಂಬಂಧಿಸಿದ ದೇಶಗಳ ಒಪ್ಪಿಗೆಯೊಂದಿಗೆ ಆ ದೇಶಗಳಿಗೆ ಭೇಟಿ ನೀಡಬಹುದು. ಸರ್ಕಾರಗಳೊಂದಿಗೆ ರಚನಾತ್ಮಕ ಸಂವಾದವನ್ನು ಸ್ಥಾಪಿಸುವುದು ಮತ್ತು ಮಾನವಹಕ್ಕುಗಳ ರಕ್ಷಣಾ ವಿಧಾನಗಳನ್ನು ಉತ್ತಮಪಡಿಸುವುದಕ್ಕೆ ಅಗತ್ಯ ಶಿಫಾರಸುಗಳನ್ನು ಮಾಡುವುದೇ ಅವುಗಳ ಒಟ್ಟಾರೆ ಗುರಿ. ವಿಶೇಷ ಸಾಮರಸ್ಯಾಧಿಕಾರಿಗಳು ಮತ್ತು ಕಾರ್ಯತಂಡಗಳ ಆದೇಶಗಳು ನವೀಕರಿಸಲ್ಪಡಬಹುದು ಮತ್ತು ಅವರ ವರದಿಗಳು ಅವರವರ ವ್ಯಾಪ್ತಿಯಲ್ಲಿದ್ದ ಮಾನವಹಕ್ಕುಗಳ ಉಲ್ಲಂಘನೆಯ ಸನ್ನಿವೇಶಗಳ ಗಂಭೀರತೆ ಮತ್ತು ಸ್ವರೂಪಗಳನ್ನು ಸೂಚಿಸುವ ಸಾರ್ವತ್ರಿಕ ತೀರ್ಮಾನಗಳನ್ನು ಮತ್ತು ಶಿಫಾರಸುಗಳನ್ನು ಒಳಗೊಳ್ಳಬಹುದು.

ಕೆಲವೊಂದು ನಿರ್ದಿಷ್ಟ ಆದೇಶಗಳ ವಿಷಯದಲ್ಲಿ ಕ್ಷೇತ್ರಾಧಿಕಾರಿಗಳನ್ನು ಉಪಯೋಗಿಸುವ ಉಪಕ್ರಮ ಇತ್ತೀಚೆಗೆ ಪ್ರಾರಂಭವಾಗಿದೆ.[50]

### *54. ವಿಶೇಷ ಕಾರ್ಯವಿಧಾನಗಳ ಮಹತ್ವವೇನು ?*

ಮಾನದಂಡಗಳ ಸ್ಥಾಪನೆಯಿಂದ ಪ್ರಾರಂಭಗೊಂಡ ಕಾರ್ಯವು ಸ್ಥಾಪಿತ ಮಾನದಂಡಗಳ ಅನುಷ್ಠಾನ ಮತ್ತು ಅನುಪಾಲನೆಯ ಮೇಲೆ ಮಾನವಹಕ್ಕುಗಳ ಚಟುವಟಿಕೆಗಳನ್ನು ಕೇಂದ್ರೀಕರಿಸಿರುವ ಹಂತಕ್ಕೆ ತಲುಪಿರುವ ಬೆಳವಣಿಗೆಯೇ ವಿಶೇಷ ಕಾರ್ಯವಿಧಾನಗಳ ಮಹತ್ವವಾಗಿದೆ. ಅದರಿಂದಾಗಿ ಮಾನವಹಕ್ಕುಗಳ ರಕ್ಷಣೆಗೆ ಒಂದು ಕ್ರಿಯಾವಿನ್ಯಾಸ ಮತ್ತು ಕಾರ್ಯವಿಧಾನಗಳ ಚೌಕಟ್ಟು

ಸ್ಥಾಪನೆಯಾಗುತ್ತಿದೆ. ಒಂದು ವಿಶೇಷ ಕಾರ್ಯವಿಧಾನದ ಕೇಂದ್ರಬಿಂದುವಾಗುವುದೇ, ಮಾನವಹಕ್ಕುಗಳ ಗುರುತರ ಉಲ್ಲಂಘನೆಯ ಸ್ಪಷ್ಟ ಸಾಕ್ಷಿಯಾಗಿದ್ದು, ರಾಷ್ಟ್ರಗಳು ಆ ರೀತಿಯ ಅನಾಚ್ಛಾದನೆ ಮತ್ತು ಸಾರ್ವತ್ರಿಕ ಖಂಡನೆ ವಿರುದ್ಧ ಮನವೊಲಿಸಲು ಎಡಬಿಡದೆ ಪ್ರಯತ್ನಿಸುತ್ತವೆ. ರಾಷ್ಟ್ರವೊಂದರ ನಾಗರಿಕರ ಬಗೆಗಿನ, ನಡವಳಿಕೆ ಮತ್ತು ಕಾರ್ಯಪದ್ಧತಿಯ ಬಹಿರಂಗ ಪರಿಶೀಲನೆಯೇ ಒಂದು ರಕ್ಷಣಾಕ್ರಮವಾಗಿ ಇನ್ನೂ ಹೆಚ್ಚಿನ ದುರುಪಯೋಗಗಳನ್ನು ಪ್ರತಿಬಂಧಿಸಿ ಪ್ರಾಣರಕ್ಷಣೆಗೆ ಕಾರಣವಾಗಬಹುದು. ತುರ್ತುಕ್ರಮದ ಕಾರ್ಯವಿಧಾನಗಳು, ಉಲ್ಲಂಘನೆಗಳು ಮುಂದುವರಿಯದಂತೆ ತಡೆಯೊಡ್ಡಬಹುದು. ಅಂತರರಾಷ್ಟ್ರೀಯ ಒತ್ತಡ ಮತ್ತು ಅಸಮ್ಮತಿಯನ್ನು ಜಾರಿಯಲ್ಲಿಡುವುದು, ರಾಷ್ಟ್ರಗಳು ತಮ್ಮ ಮಾನವಹಕ್ಕುಗಳ ಸನ್ನಿವೇಶಗಳನ್ನು ಸುಧಾರಿಸುವಂತೆ ಪರಿಣಾಮ ಬೀರಬಹುದು. ಯಶಸ್ಸು ಅಂತಿಮವಾಗಿ ರಾಷ್ಟ್ರಗಳ ಪ್ರತಿಸ್ಪಂದನವನ್ನು ಹಾಗೂ ಖಂಡನೆ ಮತ್ತು ಆಯೋಗದ ಹಾಗೂ ಮಹಾಧಿವೇಶನದ ಸಾರ್ವತ್ರಿಕ ಕಾರ್ಯಸೂಚಿಯಲ್ಲಿ ನಮೂದಾಗಿ ಉಳಿಯುವುದರ ಬಗ್ಗೆ ಅವುಗಳಿಗಿರಬಹುದಾದ ಮುಜುಗರದ ತೀವ್ರತೆಯನ್ನು ಅವಲಂಬಿಸಿದೆ.

### *55. ಮಾನವಹಕ್ಕುಗಳ ಕ್ಷೇತ್ರದಲ್ಲಿ ಯಾವ ಹೊಸ ಸಂಸ್ಥೆಗಳು ಸ್ಥಾಪನೆಗೊಂಡಿವೆ ?*

ವಿಯೆನ್ನಾ ಘೋಷಣೆ ಮತ್ತು ಕ್ರಿಯಾ ಯೋಜನೆ (1993) ಮಾನವಹಕ್ಕುಗಳ ಉತ್ತೇಜನ ಮತ್ತು ರಕ್ಷಣೆಗಾಗಿದ್ದ ವಿಶ್ವಸಂಸ್ಥೆಯ ವ್ಯವಸ್ಥೆಯನ್ನು, ಈಗಿನ ಮತ್ತು ಭವಿಷ್ಯತ್ತಿನ ಆವಶ್ಯಕತೆಗಳಿಗೆ ಸರಿಹೊಂದಿಸುವ ಉದ್ದಿಶ್ಯಕ್ಕಾಗಿ ಮಾನವಹಕ್ಕುಗಳ ರಾಯಭಾರಿಯನ್ನು ನೇಮಕ ಮಾಡುವುದನ್ನು ಪರಿಶೀಲಿಸುವಂತೆ ಶಿಫಾರಸು ಮಾಡಿತ್ತು.[51] ದಿನಾಂಕ 20 ಡಿಸೆಂಬರ್ 1993ರಂದು ವಿಶ್ವಸಂಸ್ಥೆಯ ಮಹಾಧಿವೇಶನವು ಎಲ್ಲಾ ಮಾನವಹಕ್ಕುಗಳ ಸಂವರ್ಧನೆ ಮತ್ತು ರಕ್ಷಣೆಗಾಗಿ ಒಂದು ರಾಯಭಾರ ಹುದ್ದೆಯನ್ನು ಸ್ಥಾಪಿಸುವ 48/141ರ ನಿರ್ಣಯವನ್ನು ಸರ್ವಾನುಮತದಿಂದ ಸ್ವೀಕರಿಸಿದಾಗ ಅದು ಕಾರ್ಯರೂಪಕ್ಕೆ ಬರುವುದು ಸಾಧ್ಯವಾಯಿತು. 5ನೇ ಏಪ್ರಿಲ್ 1994ರಲ್ಲಿ ನೂತನವಾಗಿ ನೇಮಕಗೊಂಡ ರಾಯಭಾರಿ ತನ್ನ ಕರ್ತವ್ಯಗಳನ್ನು ಕೈಗೆತ್ತಿಕೊಂಡರು.[52]

ಒಂದು ಅವಧಿ ಪುನರ್ನೇಮಕದ ಸಾಧ್ಯತೆಯೂ ಸೇರಿದಂತೆ ಮಾನವಹಕ್ಕುಗಳ ರಾಯಭಾರಿಯು ನಾಲ್ಕು ವರ್ಷಗಳ ಅವಧಿಗೆ ನೇಮಕಗೊಂಡಿದ್ದು, ವಿಶ್ವಸಂಸ್ಥೆಯ ಸಂವಿಧಾನ, ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆ, ಇನ್ನಿತರ ಸಂಬಂಧಿಸಿದ ದಸ್ತಾವೇಜುಗಳ ಚೌಕಟ್ಟಿನಲ್ಲಿ, ಎಲ್ಲ ಮಾನವಹಕ್ಕುಗಳೂ ವಿಶ್ವವ್ಯಾಪಿ, ಅವಿಭಾಜ್ಯ, ಅಂತರಾವಲಂಬಿ, ಅಂತರಸಂಬಂಧಿ ಮತ್ತು ಮಾನವಹಕ್ಕುಗಳ ಸಂವರ್ಧನೆ ಹಾಗೂ ಸಂರಕ್ಷಣೆ ಅಂತರರಾಷ್ಟ್ರೀಯ ಸಮುದಾಯದ ನ್ಯಾಯಬದ್ಧ ಕಾಳಜಿ ಎಂಬ ಮಾನ್ಯತೆಯಿಂದ ನಿರ್ದೇಶಿತನಾಗಿರತಕ್ಕದ್ದು.

### *56. ಮಾನವಹಕ್ಕುಗಳ ರಾಯಭಾರಿಗೆ ಇರುವ ಆದೇಶವೇನು?*

ನಿರ್ದಿಷ್ಟವಾಗಿ ಅಭಿವೃದ್ಧಿಯ ಹಕ್ಕು ಸೇರಿದಂತೆ, ಎಲ್ಲ ಮಾನವಹಕ್ಕುಗಳ ಪರಿಣಾಮಕಾರಿ ಅನುಭೋಗಕ್ಕೆ ಉತ್ತೇಜನ ಮತ್ತು ರಕ್ಷಣೆ ನೀಡುವ ಆದೇಶ ಹೊಂದಿರುವ, ಮಾನವಹಕ್ಕುಗಳ ರಾಯಭಾರಿಯು, ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಚಟುವಟಿಕೆಗಳ ಪ್ರಧಾನ ಜವಾಬ್ದಾರಿಯನ್ನು ಹೊಂದಿರುವ ಅಧಿಕಾರಿ.

ವಿಶ್ವಸಂಸ್ಥೆಯ ವ್ಯವಸ್ಥೆಯಾದ್ಯಂತ ಮಾನವಹಕ್ಕುಗಳ ಸಂವರ್ಧನೆ ಮತ್ತು ಸಂರಕ್ಷಣೆಯ ಚಟುವಟಿಕೆಗಳನ್ನು ಸುಸಂಘಟಿಸುವುದು, ಮಾನವಹಕ್ಕುಗಳ ಕೇಂದ್ರದ ಮೂಲಕ ಸಲಹಾತ್ಮಕ ಸೇವೆಗಳನ್ನು, ತಾಂತ್ರಿಕ ಮತ್ತು ಆರ್ಥಿಕ ನೆರವನ್ನೊದಗಿಸುವುದು, ಮಾನವಹಕ್ಕುಗಳ ಯಂತ್ರವಿನ್ಯಾಸವನ್ನೂ ಅದರ ದಕ್ಷತೆ ಮತ್ತು ಪ್ರಭಾವವನ್ನೂ ಉತ್ತಮಪಡಿಸುವುದಕ್ಕಾಗಿ ಸುಸಂಬದ್ಧಗೊಳಿಸುವುದು, ಅಂಗೀಕರಿಸುವುದು, ಬಲಪಡಿಸುವುದು ಮತ್ತು ಪರಿಷ್ಕರಿಸುವುದು, ಎಲ್ಲ ಮಾನವಹಕ್ಕುಗಳಿಗೆ ಗೌರವವನ್ನು ಸಂಪಾದಿಸುವುದಕ್ಕಾಗಿ ವಿವಿಧ ಸರ್ಕಾರಗಳ ಜತೆ ಸಂವಾದದಲ್ಲಿ ತೊಡಗುವುದು, ಮತ್ತು ವಿಶ್ವದಾದ್ಯಂತ ಮಾನವಹಕ್ಕುಗಳ ಉಲ್ಲಂಘನೆಯನ್ನು ತಡೆಗಟ್ಟಲು ಸಕ್ರಿಯವಾದ ಪಾತ್ರ ನಿರ್ವಹಿಸುವುದು - ಇವುಗಳು ರಾಯಭಾರಿಯ ಇನ್ನಿತರ ಕೆಲವು ಜವಾಬ್ದಾರಿಗಳು.[53]

### *57. ವಿಶ್ವಸಂಸ್ಥೆಯ ಮಾನವಹಕ್ಕುಗಳ ಕೇಂದ್ರದ ಜವಾಬ್ದಾರಿಗಳೇನು?*

ಮಾನವಹಕ್ಕುಗಳ ಕ್ಷೇತ್ರದಲ್ಲಿ ವಿಶ್ವಸಂಸ್ಥೆಯ ಚಟುವಟಿಕೆಗಳಿಗೆ ಅದು ಕೇಂದ್ರಬಿಂದುವಾಗಿ ಕೆಲಸ ಮಾಡುತ್ತದೆ. 1984ರಲ್ಲಿ ಮಹಾಧಿವೇಶನದ 37/437ನೇ ನಿರ್ಣಯದನುಸಾರದ ಮೊದಲಿನ ಮಾನವಹಕ್ಕುಗಳ ವಿಭಾಗಕ್ಕೆ ಪುನರ್ನಾಮಕರಣ ಮಾಡಿ ಅದನ್ನು ರಚಿಸಲಾಗಿದೆ. ಜಿನೀವಾದಲ್ಲಿ ಸ್ಥಾಪನೆಗೊಂಡು ನ್ಯೂಯಾರ್ಕ್‌ನಲ್ಲಿ ಒಂದು ಕಾರ್ಯಾಲಯ ಹೊಂದಿರುವ ಈ ಕೇಂದ್ರಕ್ಕೆ ಒಬ್ಬ ಉಪ ಮಹಾಕಾರ್ಯದರ್ಶಿ ಮುಖ್ಯಸ್ಥನಾಗಿದ್ದಾನೆ.

ವಿಶ್ವಸಂಸ್ಥೆಯ ಸಂವಿಧಾನ, ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆ, ಮಾನವ ಹಕ್ಕುಗಳ ಮೇಲಿನ ಅಂತರರಾಷ್ಟ್ರೀಯ ಒಡಂಬಡಿಕೆಗಳು ಮತ್ತು ಮಹಾಧಿವೇಶನದ ನಿರ್ಣಯಗಳಲ್ಲಿ ನಮೂದಿಸಿರುವಂತೆ ಮಾನವಹಕ್ಕುಗಳ ಮತ್ತು ಮೂಲಭೂತ ಸ್ವಾತಂತ್ರ್ಯಗಳ ಸಂವರ್ಧನೆ ಮತ್ತು ಸಂರಕ್ಷಣೆಯ ವಿಷಯದಲ್ಲಿ ವಿಶ್ವಸಂಸ್ಥೆಯ ಅಂಗಗಳು ಮತ್ತು ಘಟಕಗಳಿಗೆ ನೆರವು ನೀಡುವುದು ಈ ಕೇಂದ್ರದ ಮುಖ್ಯ ಕೆಲಸ.

ವಿಶ್ವಸಂಸ್ಥೆಯ ಮಾನವಹಕ್ಕುಗಳ ರಾಯಭಾರಿಯ ನೇಮಕವಾದಂದಿನಿಂದ (55ನೇ ಪ್ರಶ್ನೆಯನ್ನೂ ನೋಡಿರಿ) ವಿಶ್ವಸಂಸ್ಥೆಯ ವ್ಯವಸ್ಥೆಯಾದ್ಯಂತ ಮಾನವಹಕ್ಕುಗಳ ಸಂವರ್ಧನೆ ಮತ್ತು ಸಂರಕ್ಷಣೆಯ ಚಟುವಟಿಕೆಗಳನ್ನು ಸುಸಂಘಟಿತವಾಗಿಸುವುದಕ್ಕಾಗಿ ಈ ಕೇಂದ್ರದ ಉಸ್ತುವಾರಿಯನ್ನು ಆ ರಾಯಭಾರಿಗೆ ವಹಿಸಲಾಗಿದೆ. ಮಹಾಧಿವೇಶನ, ಆರ್ಥಿಕ ಮತ್ತು ಸಾಮಾಜಿಕ ಪರಿಷತ್ತು,

ಮಾನವಹಕ್ಕುಗಳ ಆಯೋಗ, ಅಲ್ಪಸಂಖ್ಯಾತರ ತಾರತಮ್ಯ ಪ್ರತಿಬಂಧ ಮತ್ತು ರಕ್ಷಣಾ ಉಪ ಆಯೋಗ, ಜನಾಂಗಭೇದ ನಿರ್ಮೂಲನ ಸಮಿತಿ (ಸಿ.ಇ.ಆರ್.ಡಿ.) ಮಾನವಹಕ್ಕುಗಳ ಸಮಿತಿ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಹಕ್ಕುಗಳ ಸಮಿತಿ, ಮತ್ತು ಚಿತ್ರಹಿಂಸೆಯ ವಿರೋಧಿ ಸಮಿತಿಗಳು ಒಳಗೊಂಡಂತೆ ವಿಶ್ವಸಂಸ್ಥೆಯ ಅಂಗಗಳು ಮತ್ತು ಘಟಕಗಳಿಗೆ ಕಾರ್ಯಾಲಯ ಮತ್ತು ಮೂಲಭೂತ ಸೇವೆಗಳನ್ನು ಈ ಕೇಂದ್ರ ಒದಗಿಸುತ್ತದೆ. ಈ ಕೇಂದ್ರವು ಮಾನವಹಕ್ಕುಗಳ ವಿಷಯದಲ್ಲಿ ಅಧ್ಯಯನ, ಸಂಶೋಧನೆಗಳನ್ನೂ ನಡೆಸುತ್ತದೆ ಮತ್ತು ಅವುಗಳ ಅನುಷ್ಠಾನದ ಬಗ್ಗೆ ವರದಿ ಸಲ್ಲಿಸುತ್ತದೆ. ಇದಕ್ಕೆ ಸೇರಿದಂತೆ ಮಾನವಹಕ್ಕುಗಳ ಕ್ಷೇತ್ರದಲ್ಲಿ ಕಾರ್ಯಪ್ರವೃತ್ತವಾಗಿರುವ ಸರ್ಕಾರೇತರ ಮತ್ತು ಇನ್ನಿತರ ಸಂಘಟನೆಗಳು ಮತ್ತು ಸಮೂಹ ಮಾಧ್ಯಮಗಳ ಜತೆಗಿನ ಸಂಬಂಧಗಳ ಸಮನ್ವಯವನ್ನು ನೋಡಿಕೊಳ್ಳುತ್ತದೆ. ಅದಕ್ಕಿಂತ ಹೆಚ್ಚಾಗಿ ಮಾನವಹಕ್ಕುಗಳ ಸಂಬಂಧದ ಮಾಹಿತಿಗಳನ್ನು ಪ್ರಸಾರ ಮಾಡುತ್ತದೆ ಮತ್ತು ಪ್ರಕಟಣೆಗಳನ್ನು ತಯಾರಿಸುತ್ತದೆ.

ವಿಶ್ವಸಂಸ್ಥೆಯ ಮಹಾಧಿವೇಶನದ ಅನೇಕ ನಿರ್ಣಯಗಳು ಈ ಕೇಂದ್ರದ ಚಟುವಟಿಕೆಗಳ ಪ್ರಾಮುಖ್ಯವನ್ನೂ ಮತ್ತು ಇದಕ್ಕೆ ಸಾಕಷ್ಟು ಮಾನವ, ಆರ್ಥಿಕ ಮತ್ತು ಇನ್ನಿತರ ಸಂಪನ್ಮೂಲಗಳನ್ನು ಖಾತರಿಪಡಿಸುವ ಅಗತ್ಯವನ್ನೂ ಒತ್ತಿ ಹೇಳಿವೆ.

### *58. ಮಾನವಹಕ್ಕುಗಳ, ಸಂರಕ್ಷಣೆ ಮತ್ತು ಸಂವರ್ಧನೆ ಉತ್ತಮಪಡಿಸಲು ರಾಷ್ಟ್ರಗಳಿಗೆ ವಿಶ್ವಸಂಸ್ಥೆ ಯಾವ ಬಗೆಯ ವ್ಯಾವಹಾರಿಕ ನೆರವನ್ನು ನೀಡುತ್ತದೆ ?*

1985ರಲ್ಲಿ ಮಹಾಧಿವೇಶನವು ವಿಶ್ವಸಂಸ್ಥೆಯ ಮಾನವಹಕ್ಕುಗಳ ಕೇಂದ್ರದಿಂದ, ಸುಸಂಘಟಿತಗೊಳ್ಳುವ ಮಾನವಹಕ್ಕುಗಳ ಕ್ಷೇತ್ರದಲ್ಲಿನ ಸಲಹಾತ್ಮಕ ಸೇವಾ ಕಾರ್ಯಕ್ರಮವೊಂದನ್ನು ಅಧಿಕೃತವಾಗಿ ಸ್ಥಾಪಿಸಿತು. ಸರ್ಕಾರಗಳ ಕೋರಿಕೆಯ ಮೇರೆಗೆ ತಜ್ಞರ ಸೇವೆ, ವ್ಯಾಸಂಗಾವಕಾಶ, ವಿದ್ಯಾರ್ಥಿವೇತನ, ವಿಚಾರ ಸಂಕಿರಣ ಮತ್ತು ಮಾನವಹಕ್ಕುಗಳ ವಿಷಯದಲ್ಲಿ ತರಬೇತಿ ಶಿಬಿರಗಳು - ಇವುಗಳನ್ನು ಏರ್ಪಾಡು ಮಾಡಿಕೊಡುವುದು ಅದರ ಮುಖ್ಯ ಕೆಲಸಗಳಾಗಿವೆ. ದೊಡ್ಡದಾಗಿ ವಿಸ್ತರಿಸಿದ ಕಾರ್ಯಕ್ರಮದ ಆಯವ್ಯಯ ನಿರ್ವಹಣೆಗಾಗಿ ಈ ಕ್ಷೇತ್ರಕ್ಕೆ ಸಂಬಂಧಿಸಿದಂತೆ ತಾಂತ್ರಿಕ ಸಹಕಾರದ ಐಚ್ಛಿಕ ನಿಧಿಯೊಂದನ್ನು 1987ರಲ್ಲಿ ಸ್ಥಾಪಿಸಲಾಗಿದೆ.

1980ರಲ್ಲಿ ಮುಕ್ತಾಯಗೊಂಡ ಶೀತಲ ಸಮರದಿಂದ ಪ್ರಾರಂಭಗೊಂಡ ರಾಜಕೀಯ ಬದಲಾವಣೆಗಳು ಈ ವಿಸ್ತರಣೆಗೆ ಕಾರಣ. ಲ್ಯಾಟಿನ್ ಅಮೇರಿಕಾ, ಪೂರ್ವ ಯೂರೋಪು ಮತ್ತು ಆಫ್ರಿಕಾಗಳಲ್ಲಿನ ಹೊಸ ದೇಶಗಳು ಮತ್ತು ಉದಯೋನ್ಮುಖ ಪ್ರಜಾಪ್ರಭುತ್ವಗಳು, ತಮ್ಮ ಆಗಷ್ಟೇ ಗರಿಗಟ್ಟಿಕೊಳ್ಳುತ್ತಿದ್ದ, ಶಾಸಕ ಹಾಗೂ ನಾಗರಿಕ ಸಂಸ್ಥೆಗಳನ್ನು ಬಲಪಡಿಸಲು ಮತ್ತು ಹೊಸದಾಗಿ ಸ್ಥಿರೀಕರಿಸಿದ ಮಾನವಹಕ್ಕು ದಸ್ತಾವೇಜುಗಳ ಅನ್ವಯ ವರದಿ ಸಲ್ಲಿಕೆಯ ಬಾಧ್ಯಸ್ಥಿಕೆಯ ನಿರ್ವಹಣೆಗಾಗಿ ಸಹಾಯ ನೀಡುವಂತೆ ಮನವಿ ಮಾಡಿಕೊಂಡಿದ್ದವು.

ಒಂದು ನೂತನ ರಾಷ್ಟ್ರೀಯ ಸಮಗ್ರ ಕಾರ್ಯಕ್ರಮ ಈಗ ಜಾರಿಯಲ್ಲಿದೆ. ಒಂದು ದೇಶದ ಮಾನವಹಕ್ಕುಗಳ ಆವಶ್ಯಕತೆಗಳ ಅಂದಾಜಿನ ಆಧಾರದ ಮೇಲೆ ಮಾನವಹಕ್ಕುಗಳನ್ನು ಮತ್ತು ಪ್ರಜಾಪ್ರಭುತ್ವಾತ್ಮಕ ಶಾಸನಬದ್ಧ ಆಡಳಿತವನ್ನು ಸಂವರ್ಧಿಸಿ ಸಂರಕ್ಷಿಸಬಲ್ಲ ಶಾಸನಾತ್ಮಕ ಮತ್ತು ಸಾಂಸ್ಥಿಕ ಚೌಕಟ್ಟನ್ನು ಬಲಪಡಿಸುವ ಉದ್ದಿಶ್ಯದಿಂದ ಒಂದು ಸಮಗ್ರ ತಾಂತ್ರಿಕ ನೆರವಿನ ಕಾರ್ಯಕ್ರಮವನ್ನು ಈಗ ಯೋಜಿಸಲಾಗಿದೆ.

ಅಂತರರಾಷ್ಟ್ರೀಯ ಮಾನವಹಕ್ಕುಗಳ ಮಾನದಂಡವನ್ನು ಮತ್ತು ನ್ಯಾಯಾಂಗ ಸ್ವಾತಂತ್ರ್ಯವನ್ನು ಒಳಗೊಳ್ಳುವಂತೆ, ಚುನಾವಣಾ ನೆರವು ಸೇರಿದಂತೆ ಪ್ರಜಾಪ್ರಭುತ್ವ ವ್ಯವಸ್ಥೆಯ ಸ್ಥಾಪನೆಗೆ ಬೇಕಾದ ಸಾಂಸ್ಥಿಕ ವಿನ್ಯಾಸದ ಬಗ್ಗೆ ಸಲಹೆ, ಅಂತರರಾಷ್ಟ್ರೀಯ ಮಾನವಹಕ್ಕುಗಳ ಮಾನದಂಡಗಳನ್ನು ಲಕ್ಷ್ಯದಲ್ಲಿಟ್ಟು, ನ್ಯಾಯಮೂರ್ತಿಗಳು, ಶಾಸನ ಜಾರಿಗೊಳಿಸುವ ಅಧಿಕಾರಿಗಳು, ಸಾರ್ವಜನಿಕ ಅಧಿಕಾರಿಗಳು, ಸೈನ್ಯ - ಇವುಗಳ ತರಬೇತಿ ಮುಂತಾದವುಗಳಿಗೆ ಅವಕಾಶ ಮಾಡುವಂತೆ ಈ ಮೇಲಿನ ಹಿನ್ನೆಲೆಯಲ್ಲಿ ರಾಷ್ಟ್ರೀಯ ಸಂವಿಧಾನವನ್ನು ರಚನೆ ಮಾಡಲು ತಜ್ಞರನ್ನು ಒದಗಿಸಲಾಗುವುದು.

ಈ ಕಾರ್ಯಕ್ರಮವು ಮಾನವಹಕ್ಕುಗಳ ಶಿಕ್ಷಣ, ಸಂವರ್ಧನೆಗೂ ಮತ್ತು ಘರ್ಷಣೆಗಳ ನಿವಾರಣೆಗೂ ಸಂಬಂಧಿಸಿದಂತೆ ಸಮೂಹ ಮಾಧ್ಯಮಗಳನ್ನು ಬಲಪಡಿಸುವ ವಿಚಾರವನ್ನೂ ಒಳಗೊಂಡಿದೆ. ಈ ಎರಡನೆಯ ಭಾಗವು ವಿಶ್ವಸಂಸ್ಥೆಯ ಶಾಂತಿ ರಕ್ಷಕರ ತರಬೇತಿ, ಮಾನವಹಕ್ಕು ಕೇಂದ್ರದ ಕ್ಷೇತ್ರೀಯ ಕಾರ್ಯಾಲಯಗಳ ಸ್ಥಾಪನೆಯೂ ಸೇರಿದಂತೆ ಘರ್ಷಣೆಗಳನ್ನು ತಡೆಗಟ್ಟುವ ಮತ್ತು ಅವುಗಳನ್ನು ಶಾಂತಿಯುತವಾಗಿ ಬಗೆಹರಿಸುವ ಕಾರ್ಯತಂತ್ರಗಳ ಮೇಲೆ ತನ್ನ ಲಕ್ಷ್ಯವನ್ನು ಕೇಂದ್ರೀಕರಿಸಿದೆ.[54] ಮಾನವಹಕ್ಕುಗಳ ರಾಯಭಾರಿಯು ತಾಂತ್ರಿಕ ಪರಿಹಾರಕ್ಕೆ ಹೆಚ್ಚಿನ ಗಮನವನ್ನು ನೀಡುತ್ತಾರೆ.

ಒಂದು ನಾಗರಿಕ ಸಮಾಜದ ನಿರ್ಮಾಣದಲ್ಲಿ ಮಾನವಹಕ್ಕುಗಳಿಗೆ ಸಂಬಂಧಿಸಿದ ಸರ್ಕಾರೇತರ ಸಂಘಟನೆಗಳು ಮತ್ತು ಇತರೆ ಸಮುದಾಯದ ಗುಂಪುಗಳ ಮಹತ್ತರ ಪಾತ್ರವನ್ನು ಈ ಕಾರ್ಯಕ್ರಮ ಗುರುತಿಸುತ್ತದೆ ಮತ್ತು ಅವರುಗಳ ಯೋಜನೆಗಳಿಗೆ ನೇರ ನೆರವನ್ನು ಒದಗಿಸುತ್ತದೆ.

### *59. ವಿಶ್ವಸಂಸ್ಥೆಯ ಯಾವ ವಿಭಾಗಗಳು ತಮ್ಮ ತಜ್ಞತೆಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಮಾನವಹಕ್ಕುಗಳ ರಕ್ಷಣೆಗಾಗಿ ವಿಶೇಷ ಅನುಷ್ಠಾನ ಕಾರ್ಯವಿಧಾನಗಳನ್ನು ಹೊಂದಿವೆ?*

ಆ ರೀತಿಯ ಕಾರ್ಯವಿಧಾನಗಳನ್ನು ಸ್ಥಾಪಿಸಿರುವ ಎರಡು ವಿಶ್ವಸಂಸ್ಥೆಯ ವಿಶೇಷ ವಿಭಾಗಗಳಿವೆ. ವಿಶ್ವಸಂಸ್ಥೆಯ ಶೈಕ್ಷಣಿಕ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಸಂಘಟನೆ (ಯುನೆಸ್ಕೋ) ಮತ್ತು ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆ (ಐ.ಎಲ್.ಓ.).

### *60. ವಿಶ್ವಸಂಸ್ಥೆಯ ಶೈಕ್ಷಣಿಕ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಸಂಘಟನೆ (ಯುನೆಸ್ಕೋ)ಯೊಳಗಡೆ ಯಾವ ಕ್ರಿಯಾವಿನ್ಯಾಸವಿದೆ?*

ಯುನೆಸ್ಕೋದ ತಜ್ಞತೆಯು ಶಿಕ್ಷಣ, ವಿಜ್ಞಾನ (ಸಮಾಜ ವಿಜ್ಞಾನಗಳು ಸೇರಿದಂತೆ) ಮತ್ತು ಸಂಸ್ಕೃತಿ ಹಾಗೂ ಅಭಿಪ್ರಾಯ, ಅಭಿವ್ಯಕ್ತಿ ಮತ್ತು ಪತ್ರಿಕಾ ಸ್ವಾತಂತ್ರ್ಯಗಳನ್ನು ಒಳಗೊಂಡಂತೆ ಸಂವಹನ ಇವುಗಳಿಗೆ ಸಂಬಂಧಿಸಿದ ಹಕ್ಕುಗಳಿಗೆ ವಿಸ್ತಾರಗೊಂಡಿದೆ. ಮಾನವಹಕ್ಕುಗಳ ಸಂವರ್ಧನೆ ಹಾಗೂ ಅನುಷ್ಠಾನದ ಬಗ್ಗೆ ಯುನೆಸ್ಕೋ ಕ್ರಮ ಕೈಗೊಳ್ಳಬಹುದಾದ ಕಾರ್ಯವಿಧಾನಗಳನ್ನು ಅದು ಅಂಗೀಕರಿಸಿರುವ ಒಡಂಬಡಿಕೆಗಳು ಮತ್ತು ಶಿಫಾರಸುಗಳಲ್ಲಿ ಭಾಗಶಃ ಅಳವಡಿಸಲಾಗಿದೆ. ವರದಿ ಮಾಡುವ ಹಾಗೂ ದೂರು ನೀಡುವ ವ್ಯವಸ್ಥೆಯೇ ಬಳಕೆಗೆ ತಂದಿರುವ ಕಾರ್ಯವಿಧಾನವಾಗಿದೆ.

ಶೈಕ್ಷಣಿಕ ತಾರತಮ್ಯದ ವಿರುದ್ಧ ಯುನೆಸ್ಕೋ ಒಡಂಬಡಿಕೆ 1962ರಲ್ಲಿ ಜಾರಿಗೆ ಬಂದಿದ್ದು ಈವರೆಗೆ ಎಂಭತ್ತಕ್ಕಿಂತ ಹೆಚ್ಚಿನ ದೇಶಗಳು ಅದಕ್ಕೆ ಭಾಗಿಗಳಾಗಿವೆ.[55] ಈ ಒಡಂಬಡಿಕೆ ಶೈಕ್ಷಣಿಕ ವಿಚಾರಗಳಲ್ಲಿ ಸಮಾನ ಅವಕಾಶ ಮತ್ತು ನಡವಳಿಕೆಯನ್ನು ಉತ್ತೇಜಿಸುವ ರಾಷ್ಟ್ರೀಯ ನೀತಿಗೆ ಭಾಗಸ್ಥ ರಾಷ್ಟ್ರಗಳನ್ನು ಬಾಧ್ಯಸ್ಥರನ್ನಾಗಿಸುತ್ತದೆ. ಭಾಗಸ್ಥ ದೇಶಗಳು ಅಗತ್ಯಬಿದ್ದರೆ ಶಾಸನರಚನೆಯ ಮೂಲಕ ವಿದ್ಯಾರ್ಥಿಗಳನ್ನು ಶಿಕ್ಷಣ ಸಂಸ್ಥೆಗೆ ಸೇರಿಸಿಕೊಳ್ಳುವಲ್ಲಿ ಯಾವುದೇ ತಾರತಮ್ಯ ಇಲ್ಲದಿರುವಂತೆ ಮತ್ತು ಸೇರಿಸಿಕೊಂಡ ವಿದ್ಯಾರ್ಥಿಗಳ ಬಗ್ಗೆ ನಡೆದುಕೊಳ್ಳುವುದರಲ್ಲಿಯೂ ಯಾವುದೇ ತಾರತಮ್ಯ ಇಲ್ಲದಂತೆ ಖಾತರಿಪಡಿಸುವ ಭರವಸೆ ನೀಡುತ್ತದೆ. ವಿದೇಶೀಯ ಪ್ರಜೆಗಳಿಗೂ ಸಮಾನ ಶಿಕ್ಷಣಕ್ಕೆ ಅವಕಾಶವಿರುತ್ತದೆ. ಒಡಂಬಡಿಕೆಗಳು ಮತ್ತು ಶಿಫಾರಸುಗಳ ಮೇಲಿನ ಒಂದು ವಿಶೇಷ ಸಮಿತಿಯಿಂದ ಪರಿಶೀಲಿಸಲ್ಪಡುವ ಭಾಗಸ್ಥ ದೇಶಗಳ ವರದಿಯ ಮೇಲೆ ಅನುಷ್ಠಾನದ ಕ್ರಮಗಳು ಆಧಾರಿತವಾಗಿವೆ. ನಂತರ ಈ ಸಮಿತಿಯ ವರದಿ ಮತ್ತು ವ್ಯಾಖ್ಯಾನಗಳನ್ನು ಯುನೆಸ್ಕೋದ ಮಹಾಧಿವೇಶನಕ್ಕೆ ಒಪ್ಪಿಸಲಾಗುವುದು. ಈ ಬಗ್ಗೆ ತೆಗೆದುಕೊಳ್ಳುವ ಏಕ ಮಾತ್ರ ಮುಂದಿನ ಕ್ರಮವೇನೆಂದರೆ, ಉದ್ಭವಿಸುವ ವಿಷಯಗಳ ಆಧಾರದ ಮೇಲೆ ಮಹಾಧಿವೇಶನ ಅಂಗೀಕರಿಸುವ ನಿರ್ಣಯಗಳು.

ರಾಷ್ಟ್ರಗಳು ಇನ್ನೊಂದು ರಾಷ್ಟ್ರ ಒಡಂಬಡಿಕೆಯ ನಿಯಮಗಳನ್ನು ಜಾರಿಗೊಳಿಸುತ್ತಿಲ್ಲವೆಂದು ಸಲ್ಲಿಸುವ ದೂರುಗಳ ಬಗ್ಗೆ ವ್ಯವಹರಿಸಲು ಮೇಲ್ಕಂಡ ವ್ಯವಸ್ಥೆಗೆ ಪೂರಕವಾಗಿ ಮತ್ತು ಅದನ್ನು ಬಲಪಡಿಸುವುದಕ್ಕಾಗಿ ಒಡಂಬಡಿಕೆಯ[56] ಶಿಷ್ಟಾಚಾರದ ಕೆಳಗಡೆ ಒಂದು ಸಂಧಾನ ಮತ್ತು ಮಧ್ಯಸ್ಥಿಕೆಯ ಆಯೋಗವನ್ನು ರಚಿಸಲಾಗಿದೆ. ಒಂದು ಸೌಹಾರ್ದಯುತ ಪರಿಹಾರವನ್ನು ಕಂಡುಹಿಡಿಯುವುದು ಅಥವಾ ಅದು ವಿಫಲವಾದಲ್ಲಿ, ಅಂತರರಾಷ್ಟ್ರೀಯ ನ್ಯಾಯಾಲಯದ ಅಭಿಪ್ರಾಯವನ್ನು ಕೋರುವುದೂ ಸೇರಿದಂತೆ ಶಿಫಾರಸುಗಳನ್ನು ಮಾಡುವುದು, ಈ


ಈ ಕಾಲೇಜಿಗೆ ಸೇರಲು ನಿನ್ನ ಅರ್ಹತೆ ಸಾಲದು
ಜಾನ್ ಸ್ಮಿತ್
* ಕೆಲಸವಿಲ್ಲದ ತಂದೆ
* ರೋಗಿ ತಾಯಿ
* 7 ಸಹೋದರ-ಸಹೋದರಿಯರು

ಆಯೋಗಕ್ಕಿರುವ ಆದೇಶವಾಗಿದೆ (ಆದೇಶವಿದ್ದರೂ ಈ ಎರಡನೇ ಕ್ರಮವನ್ನು ಈವರೆಗೂ ಕೈಗೊಂಡಿರುವುದಿಲ್ಲ.).

ಶಿಕ್ಷಕರ ಸ್ಥಾನ-ಮಾನಗಳಂಥ ವಿಚಾರಗಳಿಗೆ ಸಂಬಂಧಿಸಿದಂತೆ ಇತರ ಯುನೆಸ್ಕೋ ದಸ್ತಾವೇಜುಗಳ ಅನುಷ್ಠಾನದ ಬಗ್ಗೆ ಬೇರೆ ವಿಧಾನಗಳು ಅಸ್ತಿತ್ವದಲ್ಲಿವೆ. 1968ರಲ್ಲಿ ಯುನೆಸ್ಕೋದ ಕಾರ್ಯಕಾರಿ ಮಂಡಳಿ ಮತ್ತು ಐ.ಎಲ್.ಓ.ದ ಆಡಳಿತ ಮಂಡಳಿಗಳ ನಿರ್ಧಾರದ ಮೇರೆಗೆ ಶಿಕ್ಷಕರ ಸ್ಥಾನಮಾನಗಳಿಗೆ ಸಂಬಂಧಿಸಿದ ಸಿಫಾರಸುಗಳನ್ನು (1966) ಕಾರ್ಯಗತ ಮಾಡುವ ವಿಷಯದಲ್ಲಿ ಅಂತರರಾಷ್ಟ್ರೀಯ ಕಾರ್ಮಿಕಸಂಸ್ಥೆ ಮತ್ತು ಯುನೆಸ್ಕೋದ ಜಂಟಿ ತಜ್ಞರ ಸಮಿತಿಯನ್ನು ಸ್ಥಾಪಿಸಲಾಯಿತು. ಆ ಸಮಿತಿ ಐ.ಎಲ್.ಓ.ದಿಂದ ಅರ್ಧ ಭಾಗ ಮತ್ತು ಯುನೆಸ್ಕೋದಿಂದ ಇನ್ನರ್ಧ ಭಾಗ ಆಯ್ಕೆಗೊಂಡ ಹನ್ನೆರಡು ಜನ ಸ್ವತಂತ್ರ ತಜ್ಞರಿಂದ ಕೂಡಿದೆ. ಶಿಫಾರಸುಗಳನ್ನು ಸದ್ಯೋಚಿತಗೊಳಿಸುವ ಮತ್ತು ಅವುಗಳೊಳಗಿನ ಕೆಲವು ವಿಷಯಾಂಶಗಳನ್ನು ಶಿಕ್ಷಕರ ಸ್ಥಾನಮಾನದ ಮೇಲೆ ಸಾಧ್ಯವಾಗಬಹುದಾದ ಒಡಂಬಡಿಕೆಯಲ್ಲಿ ಅಳವಡಿಸುವ ವಿಚಾರದ ಬಗ್ಗೆ ಚರ್ಚೆ ನಡೆದಿದೆ.

ಈ ಕ್ಷೇತ್ರದ ಆಸಕ್ತಿಗಳು ಸಾಂಸ್ಕೃತಿಕ ಹಕ್ಕುಗಳಿಗೆ ನಿಕಟವಾಗಿ ಸೇರಿಕೊಂಡಿರುವುದನ್ನು ಅನುಲಕ್ಷಿಸಿ, ಯುನೆಸ್ಕೋ ಸಾಂಸ್ಕೃತಿಕ ಸ್ವತ್ತುಗಳ ರಕ್ಷಣೆಗೂ ಪ್ರಯತ್ನಗಳನ್ನು ಕೈಗೊಂಡಿದೆ. ಇದಕ್ಕೆ ಸಂಬಂಧಿಸಿದಂತೆ ಮೂರು ಯುನೆಸ್ಕೋದ ಒಡಂಬಡಿಕೆಗಳಿವೆ: ಸಶಸ್ತ್ರ ಸಂಘರ್ಷ ಸಂದರ್ಭದಲ್ಲಿ ಒಡಂಬಡಿಕೆಯನ್ನು ಕಾರ್ಯಗತಗೊಳಿಸುವ ನಿಯಮಗಳು, ಹಾಗೆಯೇ ಒಡಂಬಡಿಕೆಯ ಶಿಷ್ಟಾಚಾರ ಮತ್ತು ಸಮ್ಮೇಳನದ ನಿರ್ಣಯಗಳ (1954) ಸಹಿತವಾಗಿ ಸಾಂಸ್ಕೃತಿಕ ಸ್ವತ್ತುಗಳ ರಕ್ಷಣೆಯ ಒಡಂಬಡಿಕೆ; ಸಾಂಸ್ಕೃತಿಕ ಸ್ವತ್ತುಗಳ ಕಳ್ಳ ಆಮದು, ನಿರ್ಯಾತ ಅಥವಾ ಒಡೆತನದ ಹಸ್ತಾಂತರಗಳನ್ನು ನಿಷೇಧಿಸುವ ಮತ್ತು ತಡೆಗಟ್ಟುವ ವಿಧಾನಗಳ ಮೇಲಿನ ಒಡಂಬಡಿಕೆ (1970); ಮತ್ತು ವಿಶ್ವದ ಸಾಂಸ್ಕೃತಿಕ ಮತ್ತು ಪ್ರಾಕೃತಿಕ ಪರಂಪರೆಯ ರಕ್ಷಣೆಗೆ ಸಂಬಂಧಿಸಿದ ಒಡಂಬಡಿಕೆ (1972).

### *61. ಮಾನವಹಕ್ಕುಗಳ ಉಲ್ಲಂಘನೆಗಳ ಆರೋಪಗಳ ಬಗ್ಗೆ ಯುನೆಸ್ಕೋ ದೂರುಗಳನ್ನು ಸ್ವೀಕರಿಸಬಹುದೆ?*

ಸಂಸ್ಥೆಯ ತಜ್ಞ ಕ್ಷೇತ್ರಗಳಾದ ಶಿಕ್ಷಣ, ವಿಜ್ಞಾನ, ಸಂಸ್ಕೃತಿ ಮತ್ತು ಸಂವಹಗಳ ವಿಷಯದಲ್ಲಿ ಮಾನವಹಕ್ಕುಗಳ ಉಲ್ಲಂಘನೆಯ ಆರೋಪಗಳ ಬಗ್ಗೆ ವಿಶ್ವಾಸಾರ್ಹ ಮಾಹಿತಿಯಿರುವ, ಯಾವುದೇ ವ್ಯಕ್ತಿ, ಗುಂಪು, ರಾಷ್ಟ್ರೀಯ ಅಥವಾ ಅಂತರರಾಷ್ಟ್ರೀಯ ಸರ್ಕಾರೇತರ ಸಂಘಟನೆ ಅಥವಾ ಸಂತ್ರಸ್ತರಿಂದ ಬಂದ ದೂರುಗಳನ್ನು ವ್ಯವಹರಿಸಲು ಯುನೆಸ್ಕೋ ಒಂದು ಕಾರ್ಯವಿಧಾನವನ್ನು ಹೊಂದಿದೆ. ದೂರು ನೀಡಿದವರು ತಮ್ಮ ಹೆಸರುಗಳನ್ನು ಬಹಿರಂಗಗೊಳಿಸಲು ಒಪ್ಪಿಗೆ ನೀಡಿದರೆ, ಹಾಗೆ ನೀಡಿದಾಗ ಸಂಬಂಧಿಸಿದ ಸರ್ಕಾರಕ್ಕೆ ಅದನ್ನು ತಿಳಿಸಿ ದೂರುಗಳ ಬಗ್ಗೆ ಅದರ ಅಭಿಪ್ರಾಯಗಳನ್ನು ಲಿಖಿತ ಮೂಲಕ ಕೊಡುವಂತೆ

ಕೇಳಲಾಗುವುದು. ಇವನ್ನು 'ಸಂವಹನ'ಗಳೆಂದು ಹೆಸರಿಸಲಾಗಿದೆ. ಸಂಬಂಧಿಸಿದ್ದರ ಬಗ್ಗೆ ಸರ್ಕಾರಗಳ ಉತ್ತರಗಳೇನಾದರೂ ಇದ್ದರೆ ಅವುಗಳ ಸಹಿತ ಸಂವಹನಗಳನ್ನು ಕಾರ್ಯಕಾರಿ ಮಂಡಳಿಯ ಒಡಂಬಡಿಕೆಗಳು ಮತ್ತು ಶಿಫಾರಸುಗಳ ಸಮಿತಿ ಗೌಪ್ಯವಾಗಿ ಪರಿಶೀಲಿಸುತ್ತದೆ. ಹೆಚ್ಚುವರಿ ಮಾಹಿತಿಗಳನ್ನು ಒದಗಿಸುವುದಕ್ಕಾಗಿ ಅಥವಾ ಸಮಿತಿಯು ಸದಸ್ಯರ ಪ್ರಶ್ನೆಗಳಿಗೆ ಉತ್ತರಿಸುವುದಕ್ಕಾಗಿ ಸಂಬಂಧಿಸಿದ ಸರ್ಕಾರಗಳ ಪ್ರತಿನಿಧಿಗಳು ಸಭೆಗಳಲ್ಲಿ ಹಾಜರಿರಬಹುದು. ಸಮಿತಿಯು ಪ್ರಥಮವಾಗಿ ಪ್ರತಿಯೊಂದು ಸಂವಹನದ ಅಂಗೀಕಾರಾರ್ಹತೆಯನ್ನು ಪರಿಶೀಲಿಸುತ್ತದೆ ಮತ್ತು ಸಂವಹನವನ್ನು ಅಂಗೀಕಾರಾರ್ಹವೆಂದು ಮತ್ತು ಮುಂದಿನ ಕ್ರಮಕ್ಕೆ ಯೋಗ್ಯವೆಂದು ಘೋಷಿಸಿದ ಪಕ್ಷದಲ್ಲಿ, ಯುನೆಸ್ಕೋ ತಜ್ಞತೆಯ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಮಾನವಹಕ್ಕುಗಳ ಉತ್ತೇಜನವನ್ನು ಹೆಚ್ಚಿಸುವುದಕ್ಕಾಗಿ ರೂಪಿಸಿದ ಸೌಹಾರ್ದಯುತ ಪರಿಹಾರವನ್ನು ಜಾರಿಗೊಳಿಸಲು ನಂತರ ಪ್ರಯತ್ನಿಸುತ್ತದೆ. ಯುನೆಸ್ಕೋದ ಕಾರ್ಯಕಾರೀ ಮಂಡಳಿಗೆ ತನಗೆ ಸೂಕ್ತವೆನಿಸಿದ ಕ್ರಮ ಕೈಗೊಳ್ಳಲು ಅನುಕೂಲವಾಗುವಂತೆ ಸಮಿತಿ ಒಂದು ಗೌಪ್ಯವಾದ ವರದಿಯನ್ನು ಸಲ್ಲಿಸುತ್ತದೆ.

ಈ ಕಾರ್ಯವಿಧಾನವು ಮಾನವಹಕ್ಕುಗಳ ಉಲ್ಲಂಘನೆಯ ವ್ಯಕ್ತಿಗತ ನಿರ್ದಿಷ್ಟ ಪ್ರಕರಣಗಳಿಗಷ್ಟೇ ಅಲ್ಲದೆ, ವ್ಯಾಪಕ, ವ್ಯವಸ್ಥಿತ ಕುಖ್ಯಾತ ಉಲ್ಲಂಘನೆಗಳ ಸಮಸ್ಯೆಗೂ ಸಂಬಂಧಿಸಿದೆ. ಮಾನವಹಕ್ಕುಗಳ ಅಸಹ್ಯ ಸತತ ಉಲ್ಲಂಘನೆಗಳ ಪ್ರಕರಣಗಳ ಸರಣಿ ಇದ್ದ ಸಂದರ್ಭದಿಂದಾಗಲೀ, ಅಥವಾ ಮಾನವಹಕ್ಕುಗಳ ವಿರುದ್ಧವಾದ ನೀತಿಯನ್ನು ನ್ಯಾಯತಃ ಅಥವಾ ಕಾರ್ಯತಃ ಒಂದು ದೇಶ ಜಾರಿಗೊಳಿಸಿದಾಗಾಗಲಿ ಒಂದು ಸಮಸ್ಯೆ ಅಸ್ತಿತ್ವದಲ್ಲಿದೆಯೆಂದು ಪರಿಗಣಿಸಲಾಗುತ್ತದೆ. ಮಾನವಹಕ್ಕುಗಳ ಉಲ್ಲಂಘನೆಯ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಸಂವಹನಗಳನ್ನು ಕಾರ್ಯಕಾರಿ ಮಂಡಳಿಯ ಬಹಿರಂಗ ಸಭೆಗಳಲ್ಲಾಗಲಿ ಅಥವಾ ಮಹಾಸಮ್ಮೇಳನದಲ್ಲಾಗಲಿ ಪರಿಶೀಲಿಸಬಹುದು. ಈ ದಿನಾಂಕದವರೆಗೆ ಈ ಕಾರ್ಯವಿಧಾನವನ್ನು ಅನುಸರಿಸುವ ಸಂದರ್ಭ ಬಂದಿಲ್ಲ.

ಮಾನವಹಕ್ಕು ಉಲ್ಲಂಘನೆಗಳ ಆರೋಪಗಳ ಬಗ್ಗೆ ಯುನೆಸ್ಕೋದ ಕಾರ್ಯವಿಧಾನಗಳು ಕೆಲವು ವಿಷಯಗಳಿಗೆ ಸಂಬಂಧಿಸಿದಂತೆ ಇನ್ನಿತರ ಅಂತರರಾಷ್ಟ್ರೀಯ ಮತ್ತು ಪ್ರಾದೇಶಿಕ ಕಾರ್ಯವಿಧಾನಗಳಿಗಿಂತ ಕಡಿಮೆ ಕಟ್ಟುನಿಟ್ಟಿನ ಪೂರ್ವಭಾವಿ ನಿಬಂಧನೆಗಳನ್ನು ಹೊಂದಿದೆ. ಉದಾಹರಣೆಗೆ, ಆಂತರಿಕ ಪರಿಹಾರದ ಎಲ್ಲ ಪ್ರಯತ್ನಗಳನ್ನು ಮಾಡಿ ಮುಗಿಸಿರಲೇಬೇಕೆಂದು ಅದು ಅಪೇಕ್ಷಿಸುವುದಿಲ್ಲ; ಬದಲು ಆ ರೀತಿ ಪರಿಹಾರದ ಪ್ರಯತ್ನ ಮಾಡಿರುವುದರ ಬಗ್ಗೆ ಪುರಾವೆಯನ್ನಷ್ಟೇ ಅಪೇಕ್ಷಿಸುತ್ತದೆ. ಹಾಗೆಯೇ ಇನ್ನೊಂದು ಅಂತರರಾಷ್ಟ್ರೀಯ ಸಂಸ್ಥೆಯು ಪ್ರಕರಣವನ್ನು ಪರಿಶೀಲಿಸುತ್ತಿದೆಯೆಂಬ ಅಂಶ ಯುನೆಸ್ಕೋ ಕಾರ್ಯವಿಧಾನದಡಿಯಲ್ಲಿ ಅದರ ಪರಿಶೀಲನೆಗೆ ಏನೂ ತಡೆಯೊಡ್ಡುವುದಿಲ್ಲ.

1995ರ ಕೊನೆಯ ಹೊತ್ತಿಗೆ ಸಮಿತಿಯು 440 ಸಂವಹನಗಳ ಬಗ್ಗೆ ವ್ಯವಹರಿಸಿತ್ತು ಹಾಗೂ ಅದರಲ್ಲಿ 266ನ್ನು ಬಹುಮಟ್ಟಿಗೆ ಸಮಿತಿ ಮತ್ತು ಸಂಬಂಧಿಸಿದ ದೇಶಗಳ ಮಧ್ಯದ ಸಂವಾದದ ಮೂಲಕ ತೃಪ್ತಿಕರವಾಗಿ ಬಗೆಹರಿಸಿತ್ತು.

## *62. ಮಾನವಹಕ್ಕುಗಳು ಮತ್ತು ಮೂಲಭೂತ ಸ್ವಾತಂತ್ರ್ಯಗಳ ರಕ್ಷಣೆಗಾಗಿ ಯುನೆಸ್ಕೋ ಯಾವ ಇನ್ನಿತರ ಚಟುವಟಿಕೆಗಳನ್ನು ನಡೆಸುತ್ತದೆ?*

1945ರಲ್ಲಿ ಅಂಗೀಕೃತವಾದ ಅದರ ಸಂವಿಧಾನದ ಪ್ರಕಾರ ಯುನೆಸ್ಕೋ "ನ್ಯಾಯ, ಶಾಸನಬದ್ಧಆಡಳಿತ, ಮಾನವಹಕ್ಕುಗಳು ಮತ್ತು ಮೂಲಭೂತ ಸ್ವಾತಂತ್ರ್ಯಗಳಿಗೆ ವಿಶ್ವವ್ಯಾಪಿ ಮನ್ನಣೆಯ ಮುನ್ನಡೆಗಾಗಿ ಶಿಕ್ಷಣ, ವಿಜ್ಞಾನ ಮತ್ತು ಸಂಸ್ಕೃತಿಯ ಮೂಲಕ ರಾಷ್ಟ್ರಗಳ ಮಧ್ಯೆ ಸಹಕಾರವನ್ನು ಉತ್ತೇಜಿಸಿ ಶಾಂತಿ ಮತ್ತು ಭದ್ರತೆಗೆ ನೆರವು ನೀಡಬೇಕು."

ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆಯಿಂದ ನಿರ್ದೇಶಿತವಾಗಿ ಯುನೆಸ್ಕೋ ತನ್ನ ತಜ್ಞತೆಯ ಕ್ಷೇತ್ರಗಳ ವ್ಯಾಪ್ತಿಯಲ್ಲಿ ಕೆಲವು ಹಕ್ಕುಗಳನ್ನು ಕ್ರೋಢೀಕರಿಸಿ, ಅದರ ನಿಯಮಾವಳಿಗಳನ್ನು ರೂಪಿಸಲು ಮತ್ತು ಶಿಕ್ಷಣದ ಮೂಲಕ ಮಾನವಹಕ್ಕುಗಳ ಜ್ಞಾನವನ್ನು ಪಸರಿಸಲು ಪ್ರಯತ್ನಗಳನ್ನು ಮಾಡಿದೆ (ಭಾಗ IIರ ಕಲಮು 26 ನೋಡಿರಿ). ಸಾಂಸ್ಕೃತಿಕ ಜೀವನದಲ್ಲಿ ಭಾಗವಹಿಸುವ ಹಕ್ಕನ್ನು ಹೆಚ್ಚು ಹೆಚ್ಚಾಗಿ ದೊರಕಿಸಲು ಯುನೆಸ್ಕೋ ಅನೇಕ ಬಗೆಯ ಚಟುವಟಿಕೆಗಳನ್ನು ಹಮ್ಮಿಕೊಂಡಿದೆ. ಅಂತರರಾಷ್ಟ್ರೀಯ ಸಾಂಸ್ಕೃತಿಕ ಸಹಕಾರದ ತತ್ವಗಳ ಘೋಷಣೆ (1966) ಅಂತರರಾಷ್ಟ್ರೀಯ ಸಹಕಾರ, ಪ್ರತಿಯೊಬ್ಬರಿಗೂ ಜ್ಞಾನಾರ್ಜನೆಗೆ ಅವಕಾಶಗಳಿರುವ ಎಲ್ಲ ಜನಾಂಗಗಳ ಕಲೆ ಮತ್ತು ಸಾಹಿತ್ಯವನ್ನು ಆಸ್ವಾದಿಸುವ, ವಿಶ್ವದ ಎಲ್ಲೆಡೆ ವಿಜ್ಞಾನದಲ್ಲಿ ಮಾಡಿರುವ ಮುನ್ನಡೆಯನ್ನು ಮತ್ತು ತತ್ಫಲವಾದ ಸೌಲಭ್ಯಗಳನ್ನು ಹಂಚಿಕೊಳ್ಳುವ ಮತ್ತು ಸಾಂಸ್ಕೃತಿಕ ಜೀವನದ ಸಮೃದ್ಧಿಗೆ ನೆರವಾಗುವುದನ್ನು ಸಾಧ್ಯವಾಗಿಸಬೇಕೆಂಬುದಕ್ಕೆ ಒತ್ತುಕೊಡುತ್ತದೆ (ಕಲಮು 4, ಪರಿಚ್ಛೇದ 4). ಸಂಸ್ಕೃತಿಗೆ ಪ್ರವೇಶವೆಂದರೆ "ಪ್ರತಿಯೊಬ್ಬರಿಗೂ ಮಾಹಿತಿ, ತರಬೇತಿ ಮತ್ತು ಸಾಂಸ್ಕೃತಿಕ ಮೌಲ್ಯಗಳ ಆಸ್ವಾದನೆಗೆ ನಿರ್ದಿಷ್ಟವಾಗಿ ಸಮರ್ಪಕವಾದ ಸಾಮಾಜಿಕ, ಆರ್ಥಿಕ ಪರಿಸರದ ನಿರ್ಮಾಣದ ಮೂಲಕ ಅವಕಾಶಗಳನ್ನು ಒದಗಿಸುವುದು" ಎಂಬುದಾಗಿ 'ಸಾಂಸ್ಕೃತಿಕ ಜೀವನದಲ್ಲಿನ ಜನಸಮೂಹ ಮತ್ತು ಅದಕ್ಕೆ ಅವರ ಕಾಣಿಕೆ' ಎಂಬ ಹೊತ್ತಿಗೆಯೊಳಗಿನ (1976) ಶಿಫಾರಸುಗಳಲ್ಲಿ ವ್ಯಾಖ್ಯಾನಿಸಲಾಗಿದೆ.

ಸಾಂಸ್ಕೃತಿಕ ಮತ್ತು ವೈಜ್ಞಾನಿಕ ಜೀವನದಲ್ಲಿ ಪ್ರಮುಖ ಪಾತ್ರ ವಹಿಸುತ್ತಿರುವ ಜನರ ಹಕ್ಕುಗಳನ್ನು ರಕ್ಷಿಸುವ ಅನೇಕ ದಸ್ತಾವೇಜುಗಳನ್ನು[57] ಅಂಗೀಕರಿಸಲಾಗಿದೆ.

ವಿಶ್ವಸಂಸ್ಥೆಯ ವ್ಯವಸ್ಥೆಯಲ್ಲಿ ಶಿಕ್ಷಣ, ವಿಜ್ಞಾನ, ಸಮಾಜ ವಿಜ್ಞಾನಗಳು ಮತ್ತು ಸಂಸ್ಕೃತಿಗೆ ಜವಾಬ್ದಾರಿಯಾಗಿರುವ, ತಜ್ಞ ವಿಭಾಗವಾಗಿರುವ ಯುನೆಸ್ಕೋ ಹಕ್ಕುಗಳ ಮತ್ತು ಅವುಗಳ ಅನುಷ್ಠಾನದ ಗ್ರಹಿಕೆಯನ್ನು ನಿಯಂತ್ರಿಸುವ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ನಿರ್ಧರಿಸಲು ಉದ್ದೇಶಿಸಿರುವ ಒಂದು

ಮುಖ್ಯವಾದ ಅಂತರಶಿಸ್ತು ಸಂಶೋಧನಾ ಕಾರ್ಯಕ್ರಮವನ್ನು ಪ್ರಾಯೋಜಿಸಿದೆ. ಸ್ವಕೀಯತೆಯ ಹಕ್ಕಿನ ಮೇಲಿನ ಮತ್ತು ವಿವಿಧ ಸಾಮಾಜಿಕ ಸ್ತರಗಳು, ಜನಸಮೂಹಗಳಿಗೆ ಸಂಬಂಧಿಸಿದಂತೆ ಸ್ವಕೀಯತೆಯ ಅರ್ಥದ ಬಗೆಗಿನ ಯೋಜನೆ ಅಂಥ ಸಂಶೋಧನೆಯ ಒಂದು ಉದಾಹರಣೆ. ಆಧುನಿಕ ರಾಜ್ಯ ವ್ಯವಸ್ಥೆಯ ಹಕ್ಕುಗಳ ಮೇಲೆ ತಾಂತ್ರಿಕ ಪ್ರಗತಿಯ ಪರಿಣಾಮಗಳು ಇನ್ನೊಂದು ಸಂಶೋಧನೆಯ ವಲಯವಾಗಿದೆ. 1989ರಿಂದ ಯುನೆಸ್ಕೋ ಸ್ವತಂತ್ರ ಮತ್ತು ಬಹುರೂಪಿ ಸಮೂಹ ಮಾಧ್ಯಮಗಳಿಗೆ ಸಂಬಂಧಿಸಿದ ಶಾಸನರಚನೆಯ ಪರಿಶೀಲನೆಯ ಮತ್ತು ಹೊಸ ಸಮೂಹ ಮಾಧ್ಯಮ ರಚನೆಯ ಬಗ್ಗೆ, ಸಂಪಾದಕೀಯ ಸ್ವಾತಂತ್ರ್ಯವಿರುವ ಸಾರ್ವತ್ರಿಕ ಪ್ರಸಾರಸೇವಾ ವಿನ್ಯಾಸಗಳ ಸಾಧ್ಯತೆಗಳ ಬಗ್ಗೆ ಸದಸ್ಯ ರಾಷ್ಟ್ರಗಳಿಗೆ ಸಲಹೆ ನೀಡುವ ಕಡೆ ಗಮನ ನೀಡಿದೆ. ಶಾಸನಗಳ ಅನುಷ್ಠಾನವನ್ನು ನಿರ್ದೇಶಿಸುವಾಗ, ಶಾಸನದ ಮುಂದೆ ಸಮಾನತೆಯ ಅವಕಾಶಗಳ ನೈಜಸ್ಥಿತಿಯ ಮತ್ತು ಮಾನವಹಕ್ಕುಗಳನ್ನು ಜಾರಿಗೊಳಿಸುವಲ್ಲಿರುವ ಅಡ್ಡಿ ಆತಂಕಗಳ ವಿಶ್ಲೇಷಣೆಗೆ ಸಾಮಾಜಿಕ ಸಂಶೋಧನೆಯೂ ಮುಖ್ಯವಾಗಿದೆ.

### *63. ಮಾನವಹಕ್ಕುಗಳ ಉತ್ತೇಜನಕ್ಕೆ ಅಂತರರಾಷ್ಟ್ರೀಯ ಕಾರ್ಮಿಕಸಂಸ್ಥೆಯ ಕಾಣಿಕೆ ಏನು ?*

ಐ.ಎಲ್.ಓ. 1919ರಿಂದ ಅಸ್ತಿತ್ವದಲ್ಲಿದ್ದು 1946ರಲ್ಲಿ ವಿಶ್ವಸಂಸ್ಥೆಯ ತಜ್ಞ ವಿಭಾಗವಾಗಿ ಸಾಮಾಜಿಕ ಹಾಗೂ ಕಾರ್ಮಿಕ ಕ್ಷೇತ್ರದಲ್ಲಿ ತನ್ನ ಚಟುವಟಿಕೆಗಳ ಮೂಲಕ ಸಾಮಾಜಿಕ ನ್ಯಾಯವನ್ನು ಸಾಧಿಸಲು ಪ್ರಯತ್ನಿಸುತ್ತಿದೆ. ಅಂತರರಾಷ್ಟ್ರೀಯ ಕಾರ್ಮಿಕ ಮಾನದಂಡಗಳ ಸ್ಥಾಪನೆ ಮತ್ತು ಸದಸ್ಯ ರಾಷ್ಟ್ರ ಸಂಘಟನೆಯಿಂದ ಮಾನದಂಡಗಳ ಅನುಪಾಲನೆಯ ಉಸ್ತುವಾರಿ[58] ಐ.ಎಲ್.ಓ.ದ ಮಾನವಹಕ್ಕು ಚಟುವಟಿಕೆಗಳ ಬುನಾದಿಯಾಗಿದೆ.

ಐ.ಎಲ್.ಓ. ಒಂದು ಮುಕ್ಕೂಟಸಂಸ್ಥೆ ಅಂದರೆ, ಸಂಸ್ಥೆಯ ಎಲ್ಲ ನೀತಿನಿರೂಪಕ ಘಟಕಗಳು ಸಂಸ್ಥೆಯ ನಿರ್ಧಾರಗಳು ಹಾಗೂ ಕಾರ್ಯವಿಧಾನಗಳಲ್ಲಿ ಸಮಾನ ಆಧಾರದ ಮೇಲೆ ಭಾಗವಹಿಸುವ ಸರ್ಕಾರಗಳ, ಮಾಲೀಕರ ಮತ್ತು ಕಾರ್ಮಿಕರ ಪ್ರತಿನಿಧಿಗಳಿಂದ ಕೂಡಿರುತ್ತವೆ.

ಐ.ಎಲ್.ಓ.ದ ಮುಖ್ಯ ಘಟಕವಾದ ಅಂತರರಾಷ್ಟ್ರೀಯ ಕಾರ್ಮಿಕ ಸಮ್ಮೇಳನವು ಒಡಂಬಡಿಕೆಗಳ ಮತ್ತು ಶಿಫಾರಸುಗಳ ರೂಪದಲ್ಲಿ ಅಂತರರಾಷ್ಟ್ರೀಯ ಕಾರ್ಮಿಕ ಮಾನದಂಡಗಳನ್ನು ಅಂಗೀಕಾರ ಮಾಡುತ್ತದೆ. ರಾಷ್ಟ್ರಗಳು ಒಡಂಬಡಿಕೆಗಳನ್ನು ಸ್ಥಿರೀಕರಿಸಿದಾಗ ಅದಕ್ಕೆ ಬಾಧ್ಯಸ್ಥರಾಗುತ್ತವೆ. ಸಂಘಟನಾ ಸ್ವಾತಂತ್ರ್ಯ, ಬಲಾತ್ಕಾರದ ಕಾರ್ಮಿಕ ಪದ್ಧತಿಯ ನಿಷೇಧ, ಕೆಲಸ ಮತ್ತು ಉದ್ಯೋಗದ ವಿಚಾರದಲ್ಲಿ ತಾರತಮ್ಯಗಳಿಂದ ಮುಕ್ತಿ, ಬಾಲಕಾರ್ಮಿಕ ಸಮಸ್ಯೆ ಮುಂತಾದ ಐ.ಎಲ್.ಓ.ನ ಮೂಲಭೂತ ಮಾನವಹಕ್ಕುಗಳ ಕಾಳಜಿಗಳಿಗೆ ಒಡಂಬಡಿಕೆಗಳು ಸಂಬಂಧಿಸಿವೆ. ಕೆಲಸದ ಪರಿಸರ, ಸುರಕ್ಷತೆ ಮತ್ತು ಆರೋಗ್ಯ, ಸಾಮಾಜಿಕ ಭದ್ರತೆ, ಕೈಗಾರಿಕಾ

ಸಂಬಂಧಗಳು, ಉದ್ಯೋಗನೀತಿ, ವೃತ್ತಿಶಿಕ್ಷಣ ಮುಂತಾದ ಕ್ಷೇತ್ರಗಳಲ್ಲೂ ಅವು ಮಾನದಂಡಗಳನ್ನು ನಿರ್ಧರಿಸುತ್ತವೆ ಮತ್ತು ಮಹಿಳೆಯರು, ವಲಸೆಗಾರರು, ಮೂಲನಿವಾಸಿಗಳು ಮತ್ತು ಬುಡಕಟ್ಟು ಜನರೇ ಮುಂತಾದ ವಿಶೇಷ ಗುಂಪುಗಳ ರಕ್ಷಣೆಗೆ ವ್ಯವಸ್ಥೆ ಮಾಡುತ್ತವೆ.

### *64. ಸರ್ಕಾರಗಳು ತಾವು ಕೊಟ್ಟ ಭರವಸೆಗಳಿಗೆ ಬದ್ಧವಾಗಿರುವಂತೆ ನೋಡಿಕೊಳ್ಳಲು ಏನು ವಿಧಾನಗಳಿವೆ?*

ಐ.ಎಲ್.ಓ.ದ ಮಾನದಂಡಗಳನ್ನು ಅನುಷ್ಠಾನಗೊಳಿಸುವುದರ ಉಸ್ತುವಾರಿ ಮತ್ತು ನಿರ್ದೇಶನಕ್ಕೆ ವಿವಿಧ ಕಾರ್ಯವಿಧಾನಗಳಿವೆ. ರಾಷ್ಟ್ರಗಳು ಒಡಂಬಡಿಕೆಗಳನ್ನು ಸ್ಥಿರೀಕರಿಸಿದಾಗ ಅವು ಒಡಂಬಡಿಕೆಯ ನಿಯಮಗಳನ್ನು ಜಾರಿಗೆ ಕೊಡಲು ತಾವು ತೆಗೆದುಕೊಂಡ ಕ್ರಮಗಳ ಬಗ್ಗೆ ನಿಯತಕಾಲಿಕ ವರದಿಗಳನ್ನೊಪ್ಪಿಸಲು ಬದ್ಧವಾಗಿರುವುದಾಗಿ ಭರವಸೆ ನೀಡುತ್ತವೆ. ಸರ್ಕಾರದ ಈ ವರದಿಗಳನ್ನು ಯಾವಾಗಲೂ ಪ್ರತಿ ದೇಶದಲ್ಲಿನ ಕಾರ್ಮಿಕರು ಮತ್ತು ಮಾಲೀಕರ ಸಂಸ್ಥೆಗಳಿಗೆ ಕಳಿಸತಕ್ಕದ್ದು ಮತ್ತು ಅವು ತಮ್ಮ ಅಭಿಪ್ರಾಯಗಳನ್ನು ತಿಳಿಸಬಹುದು. ಸ್ವತಂತ್ರವಾದ ಇಪ್ಪತ್ತು ತಜ್ಞ ಸದಸ್ಯರ ಒಡಂಬಡಿಕೆ ಮತ್ತು ಶಿಫಾರಸುಗಳ ಕಾರ್ಯಾನ್ವಯ ಸಮಿತಿಯೊಂದು ಸರ್ಕಾರಗಳ ಅನುಪಾಲನೆಯ ಮಟ್ಟವನ್ನು ಸೂಚಿಸುವ ವರದಿಗಳನ್ನು ಮತ್ತು ಅಭಿಪ್ರಾಯಗಳನ್ನು ಪರಿಶೀಲಿಸುತ್ತದೆ. ಸಮಿತಿ ತನ್ನ ನಿರ್ಧಾರಗಳಲ್ಲಿ ಒಡಂಬಡಿಕೆಯಲ್ಲಿ ಅನುಷ್ಠಾನದ ವಿಷಯದಲ್ಲಿ ಅವಕಾಶ ಮಾಡಿರುವ ನಮ್ಯತೆಗೆ ರಿಯಾಯ್ತಿ ನೀಡುತ್ತದೆ; ಆದರೆ ಈ ವಿಚಾರಗಳಿಗೆ ಸಂಬಂಧಿಸಿಂತೆ, ಅದರಲ್ಲೂ ವಿಶೇಷವಾಗಿ ಮೂಲಭೂತ ಮಾನವಹಕ್ಕುಗಳಿಗೆ ಸಂಬಂಧಿಸಿದಂತೆ ರಾಜಕೀಯ, ಆರ್ಥಿಕ ಅಥವಾ ಸಾಮಾಜಿಕ ಭಿನ್ನತೆಗಳನ್ನು ಪರಿಗಣನೆಗೆ ತೆಗೆದುಕೊಳ್ಳುವುದಿಲ್ಲ. ಸಮಿತಿ ವಾರ್ಷಿಕ ಅಂತರರಾಷ್ಟ್ರೀಯ ಕಾರ್ಮಿಕ ಸಮ್ಮೇಳನಕ್ಕೆ ವರದಿಯನ್ನು ಸಲ್ಲಿಸುತ್ತದೆ. ಈ ವರದಿಯನ್ನು ಸಮ್ಮೇಳನದ ಒಡಂಬಡಿಕೆ ಮತ್ತು ಶಿಫಾರಸುಗಳ ಕಾರ್ಯಾನ್ವಯ ಸಮಿತಿ ಪರಿಶೀಲಿಸುತ್ತದೆ. ಕೆಲವಾರು ವರ್ಷಗಳ ಅವಧಿಯಲ್ಲಿ ಐ.ಎಲ್.ಓ.ದ ಮಾನದಂಡ ನಿರ್ಮಾಣ ಮತ್ತು ಉಸ್ತುವಾರಿ ಚಟುವಟಿಕೆಗಳು ಸದಸ್ಯ ರಾಷ್ಟ್ರಗಳ ಸಾಮಾಜಿಕ ಹಾಗೂ ಕಾರ್ಮಿಕಶಾಸನ ರಚನೆಯ ಬದಲಾವಣೆಗಳ ಮೇಲೆ ಗಣನೀಯ ಪ್ರಭಾವ ಬೀರಿದ್ದು ಶ್ರಮಜೀವಿಗಳ ಬದುಕು ಹಾಗೂ ಸ್ಥಿತಿಗತಿಗಳನ್ನು ಉತ್ತಮಪಡಿಸಲು ಸಹಾಯಕವಾಗಿವೆ. 1964ರಿಂದ 130ಕ್ಕೂ ಹೆಚ್ಚು ಸಂಖ್ಯೆಯ ದೇಶಗಳಲ್ಲಿ 2000ಕ್ಕೂ ಹೆಚ್ಚು ಅಂಥ ಬದಲಾವಣೆಗಳಾಗಿರುವುದನ್ನು ಸಮಿತಿ ಗಮನಿಸಿದೆ.

ಒಡಂಬಡಿಕೆಯ ಅನುಪಾಲನೆಯಲ್ಲಿ ತೊಡಕುಗಳುಂಟಾದಾಗ ಐ.ಎಲ್.ಓ. ಸಂಬಂಧಿಸಿದ ದೇಶಗಳಿಗೆ ಪರಿಹಾರ ಕಂಡುಹಿಡಿಯಲು ನೆರವು ನೀಡುತ್ತದೆ. ಇದನ್ನು ವಿಶ್ವವ್ಯಾಪಿಯಾದ ತಾಂತ್ರಿಕ ಸಲಹೆಗಾರರ ಜಾಲದ ಮೂಲಕ ಹಾಗೂ ಇನ್ನಿತರ

ರೀತಿಯಲ್ಲಿ ಮಾಡಲಾಗುತ್ತಿದೆ. ಎಲ್ಲಾ ಕ್ಷೇತ್ರದಲ್ಲಿನ ತಾಂತ್ರಿಕ ನೆರವು ವಾಸ್ತವಿಕವಾಗಿ ಆದರ ಮಾನದಂಡಗಳ ಮೇಲೆ ಆಧಾರಿತವಾಗಿದೆ.

### *65. ಐ.ಎಲ್.ಓ.ದ ಮಾನದಂಡಗಳ ಅನುಷ್ಠಾನಕ್ಕೆ ಇನ್ನಿತರ ಯಾವ ಕಾರ್ಯವಿಧಾನಗಳಿವೆ?*

ಸರ್ಕಾರಗಳಿಂದ ಬಂದ ವರದಿಯಾಧಾರಿತ ಐ.ಎಲ್.ಓ.ದ ನಿಯಮಿತ ಉಸ್ತುವಾರಿ ಕಾರ್ಯದ ಹೊರತಾಗಿ, ಐ.ಎಲ್.ಓ. ಸಂವಿಧಾನದಲ್ಲಿ ಕಾರ್ಮಿಕ ಮಾನದಂಡಗಳ ಅನುಷ್ಠಾನದ ಬಗ್ಗೆ ಎರಡು ದೂರು ನೀಡಿಕೆಯ ಕಾರ್ಯವಿಧಾನಗಳಿವೆ. ಮೊದಲನೆಯದು, ತಾನು ಸ್ಥಿರೀಕರಿಸಿದ ಒಡಂಬಡಿಕೆಯ ಬಾಧ್ಯತೆಗಳ ಅನುಪಾಲನೆಯಲ್ಲಿ, ಒಂದು ಸದಸ್ಯ ರಾಷ್ಟ್ರ ವಿಫಲವಾಗಿದೆಯೆಂದು ಯಾವುದೇ ಒಂದು ಮಾಲೀಕರ ಅಥವಾ ಕಾರ್ಮಿಕರ ಸಂಸ್ಥೆ ಮನವಿ ಮಾಡುವುದಕ್ಕೆ ಅವಕಾಶ ನೀಡುತ್ತದೆ. ಐ.ಎಲ್.ಓ.ದ ಆಡಳಿತ ಮಂಡಳಿಯ ಒಂದು ವಿಶೇಷ ಮುಕ್ಕೂಟ ಸಮಿತಿಯು ಒಡಂಬಡಿಕೆ ವಾಸ್ತವಿಕವಾಗಿ ಕಾರ್ಯಾನ್ವಯಗೊಂಡಿದೆಯೇ ಎಂಬುದನ್ನು ನಿರ್ಧರಿಸಲು ಪ್ರಕರಣವನ್ನು ಪರಿಶೀಲಿಸುತ್ತದೆ.



ಎರಡನೇಯ ಕಾರ್ಯವಿಧಾನವು ಯಾವುದೇ ಒಂದು ಸದಸ್ಯ ರಾಷ್ಟ್ರಕ್ಕೆ ತಾವು ಉಭಯತ್ರರೂ ಸ್ಥಿರೀಕರಿಸಿರುವ ಒಡಂಬಡಿಕೆಯನ್ನು ಇನ್ನೊಂದು ರಾಷ್ಟ್ರ ಪರಿಣಾಮಕಾರಿಯಾಗಿ ಆಚರಣೆಗೆ ತಂದಿಲ್ಲವೆಂದು ಕಂಡುಬಂದಾಗ, ಅಂಥ ಸದಸ್ಯ ರಾಷ್ಟ್ರಕ್ಕೆ ಇನ್ನೊಂದು ಸದಸ್ಯ ರಾಷ್ಟ್ರದ ಬಗ್ಗೆ ದೂರು ನೀಡುವ ಅವಕಾಶವನ್ನು ನೀಡುತ್ತದೆ. ಇದಕ್ಕೆ ದೂರು ಕೊಡುತ್ತಿರುವ ರಾಷ್ಟ್ರವಾಗಲೀ ಅಥವಾ ಅದರ ಪ್ರಜೆಗಳಾಗಲೀ ಒಡಂಬಡಿಕೆಯ ಆಚರಣೆಯ ವೈಫಲ್ಯದಿಂದಾಗಿ ಸ್ವತಃ ಸಂತ್ರಸ್ತರಾಗಿರಬೇಕಾಗಿಲ್ಲ. ಈ ಪ್ರಕ್ರಿಯೆ ಮಾನವಹಕ್ಕುಗಳ ಸಾರ್ವತ್ರಿಕ ಹಿತರಕ್ಷಣೆಗೆ ಅನುಕೂಲಕರವೆಂದು ಪರಿಗಣಿತವಾಗಿದೆ. ಆಡಳಿತ ಮಂಡಳಿ, ಸ್ವಇಚ್ಛೆಯಿಂದಾಗಲೀ ಅಥವಾ ವಾರ್ಷಿಕ ಅಂತರರಾಷ್ಟ್ರೀಯ ಕಾರ್ಮಿಕ ಸಮ್ಮೇಳನದ ಪ್ರತಿನಿಧಿಯು ನೀಡಿದ ದೂರಿನ ಮೇಲಾಗಲೀ ತಾನೇ ಖುದ್ದಾಗಿ ದೂರನ್ನು ನೀಡಬಹುದು. ಆಡಳಿತ ಮಂಡಳಿ ಒಂದು ವಿಚಾರಣಾ ಆಯೋಗವನ್ನು ನೇಮಕ ಮಾಡಬಹುದು. ಸಂಬಂಧಿಸಿದ ಸರ್ಕಾರವು, ಆಯೋಗದ ತೀರ್ಮಾನಗಳನ್ನು ಒಪ್ಪಿಕೊಳ್ಳದಿದ್ದಲ್ಲಿ ಅದು ಪ್ರಕರಣವನ್ನು ಅಂತರರಾಷ್ಟ್ರೀಯ ನ್ಯಾಯಾಲಯಕ್ಕೆ ಒಪ್ಪಿಸಬಹುದು. ವಿಚಾರಣಾ ವರದಿಗಳ ತೀರ್ಮಾನಗಳನ್ನು ಸಾಧಾರಣವಾಗಿ ಸರ್ಕಾರಗಳು ಒಪ್ಪುತ್ತಲೇ ಬಂದಿರುವುದರಿಂದ, ಈ ರೀತಿ ಈವರೆಗೂ ಆಗಿರುವುದಿಲ್ಲ. ಹೋಲಿಕೆಯಲ್ಲಿ ಕೇವಲ ಮಿತ ಸಂಖ್ಯೆಯ ಮನವಿಗಳನ್ನೂ ದೂರುಗಳನ್ನೂ ಈವರೆಗೆ ಮಾಡಲಾಗಿದೆಯಾದರೂ, ಅವುಗಳು ನಿರ್ದಿಷ್ಟವಾಗಿ ಕಾರ್ಮಿಕ ಸಂಘಟನೆಯ ಹಕ್ಕುಗಳು, ತಾರತಮ್ಯ, ಕಡ್ಡಾಯ ಕಾರ್ಮಿಕ ಪದ್ಧತಿಯೇ ಮುಂತಾದ ಪ್ರಮುಖ ಸಮಸ್ಯೆಗಳಿಗೆ ಸಂಬಂಧಿಸಿವೆ.

### *66. ಕಾರ್ಮಿಕ ಸಂಘಟನೆಯ ಹಕ್ಕುಗಳನ್ನು ರಕ್ಷಿಸಲು ಯಾವ ಅವಕಾಶಗಳನ್ನು ಆಲೋಚಿಸಲಾಗಿದೆ?*

1950ರಲ್ಲಿ ಐ.ಎಲ್.ಓ. ಒಡಂಬಡಿಕೆಗಳ ಸಾಮಾನ್ಯ ಉಸ್ತುವಾರಿ ಕಾರ್ಯವಿಧಾನಕ್ಕೆ ಪೂರಕವಾಗಿ, ಕಾರ್ಮಿಕ ಸಂಘಟನೆಯ ಹಕ್ಕುಗಳ ಮತ್ತು ಮಾಲೀಕರುಗಳ ಸಂಘದ ಹಕ್ಕುಗಳ ಉಲ್ಲಂಘನೆಯ ಆರೋಪಗಳನ್ನು ಪರಿಶೀಲಿಸಲು ಒಂದು ವಿಶೇಷ ಕಾರ್ಯವಿಧಾನವನ್ನು ಸ್ಥಾಪಿಸಿದೆ. ಕಾರ್ಮಿಕರ ಅಥವಾ ಮಾಲೀಕರ ಸಂಘ ಸಂಸ್ಥೆಗಳು ಅಥವಾ ಸರ್ಕಾರಗಳು ದೂರಗಳನ್ನು ಒಪ್ಪಿಸಬಹುದು. ಚಾಲ್ತಿಯಲ್ಲಿರುವ ವಾಡಿಕೆಯೆಂದರೆ ಬಹುಪಾಲು ದೂರುಗಳು ರಾಷ್ಟ್ರೀಯ ಅಥವಾ ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆಗಳಿಂದಲೇ ಮಾಡಲ್ಪಡುತ್ತವೆ ಮತ್ತು ಈ ದೂರುಗಳು ಎರಡು ಪ್ರಮುಖ ಒಡಂಬಡಿಕೆಗಳಾದ, 1948ರ ಸಂಘಟನಾ ಸ್ವಾತಂತ್ರ್ಯ ಮತ್ತು ಸಂಘಟನೆಯ ಹಕ್ಕುಗಳ ರಕ್ಷಣೆಗೆ ಸಂಬಂಧಿಸಿದ ಒಡಂಬಡಿಕೆ (ಸಂಖ್ಯೆ 87) ಮತ್ತು 1949ರ ಸಂಘಟನೆ ಮತ್ತು ಸಮುಷ್ಟಿ ಸಂಧಾನದ ಹಕ್ಕುಗಳ ತಾತ್ವಿಕ ಕಾರ್ಯಾನ್ವಯಕ್ಕೆ ಸಂಬಂಧಿಸಿದ ಒಡಂಬಡಿಕೆ (ಸಂಖ್ಯೆ 98) - ಇವುಗಳ ವ್ಯಾಪ್ತಿಗೆ ಬಂದಿಲ್ಲದವೂ ಸೇರಿದಂತೆ ಎಲ್ಲ ಬಗೆಯ ಕಾರ್ಮಿಕ ಸಂಘಟನೆಯ ಹಕ್ಕುಗಳಿಗೂ

ಸಂಬಂಧಿಸಿರಬಹುದು. ಒಡಂಬಡಿಕೆಯನ್ನು ಸ್ಥಿರೀಕರಿಸಿರಲಿ, ಇಲ್ಲದಿರಲಿ, ಯಾವುದೇ ಸರ್ಕಾರದ ವಿರುದ್ಧ ದೂರುಗಳನ್ನು ನೀಡಬಹುದು. ಆಡಳಿತ ಮಂಡಳಿಯ ಸಂಘಟನಾ ಸ್ವಾತಂತ್ರ್ಯದ ಮೇಲಿನ ಮುಕ್ಕೂಟ ಸಮಿತಿ ಈ ಆರೋಪಗಳನ್ನು ಪರಿಶೀಲಿಸುತ್ತದೆ ಮತ್ತು ಅದು ಈ ದೂರುಗಳನ್ನು ಇನ್ನೂ ಹೆಚ್ಚಿನ ತನಿಖೆಗಾಗಿ ಸಂಘಟನಾ ಸ್ವಾತಂತ್ರ್ಯದ ಮೇಲಿನ ಸತ್ಯಶೋಧಕ ಮತ್ತು ಸಮನ್ವಯ ಆಯೋಗವೊಂದಕ್ಕೆ ಒಪ್ಪಿಸಬಹುದು. ಚಾಲ್ತಿಯಲ್ಲಿರುವ ರೂಢಿಯೆಂದರೆ, ಸಮಿತಿಯೇ ಹೆಚ್ಚು ಕಡಿಮೆ ಸ್ವೀಕೃತವಾದ ಎಲ್ಲಾ ದೂರುಗಳನ್ನು ಖುದ್ದಾಗಿ ಪರಿಶೀಲಿಸಿದೆ. ಅದರ ಪ್ರಾರಂಭದಿಂದ 1995ರವರೆಗೆ ಸಮಿತಿ ಸುಮಾರು 2000 ದೂರುಗಳ ಬಗ್ಗೆ ವ್ಯವಹರಿಸಿದೆ. ಸಮಿತಿಯ ಶಿಫಾರಸುಗಳು, ಶಾಸನಗಳ ರದ್ದತಿ ಮತ್ತು ತಿದ್ದುಪಡಿ ಮತ್ತು ಕೆಲಸದಿಂದ ತೆಗೆಯಲ್ಪಟ್ಟ ಕಾರ್ಮಿಕರ ಪುನರ್ನೇಮಕದಿಂದ ಹಿಡಿದು ಬಂಧನಕ್ಕೊಳಗಾದ ಕಾರ್ಮಿಕ ನಾಯಕರ ಬಿಡುಗಡೆಯವರೆಗಿನ ಶ್ರೇಣಿಯ ಕ್ರಮಗಳಿಗೆ ಪ್ರೇರಣೆ ನೀಡಿದೆ. ಕೆಲವು ಪ್ರಕರಣಗಳಲ್ಲಿ ಕಾರ್ಮಿಕ ನಾಯಕರಿಗೆ ವಿಧಿಸಲಾಗಿದ್ದ ಮರಣದಂಡನೆಯ ಶಿಕ್ಷೆ ಕಡಿತಗೊಳಿಸಲ್ಪಟ್ಟಿದೆ.

### *67. ಮಾನವಹಕ್ಕುಗಳ ರಕ್ಷಣೆಗೆ ಪ್ರಾದೇಶಿಕ ವ್ಯವಸ್ಥೆಗಳಿವೆಯೇ ?*

ಮಾನವಹಕ್ಕುಗಳ ರಕ್ಷಣೆಗಾಗಿ ಶಾಶ್ವತವಾಗಿ ಸಂಸ್ಥೆಗಳನ್ನು ನಡೆಸಿಕೊಂಡು ಬರುತ್ತಿರುವ ಮೂರು ಪ್ರಾದೇಶಿಕ ಸಂಘಟನೆಗಳಿವೆ: ಯೂರೋಪಿನ ಪರಿಷತ್ತು, ಆಫ್ರಿಕಾ ಐಕ್ಯತೆಯ ಸಂಘಟನೆ, ಮತ್ತು ಅಮೇರಿಕಾ ರಾಷ್ಟ್ರಗಳ ಸಂಘಟನೆ. ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆಯಿಂದ ಸ್ಫೂರ್ತಿ ಪಡೆದು ಇವೆಲ್ಲವೂ ಮಾನವಹಕ್ಕುಗಳ ಮೇಲಿನ ದಸ್ತಾವೇಜುಗಳ ಬಗ್ಗೆ ಉಪಕ್ರಮ ಕೈಗೊಂಡಿವೆ.

### *68. ಯೂರೋಪಿನ ಪರಿಷತ್ತು ಮಾನವಹಕ್ಕುಗಳ ರಕ್ಷಣೆಗೆ ಕೈಗೊಂಡಿರುವ ಕ್ರಮಗಳೇನು ?*

1949ರಲ್ಲಿ ರಚಿಸಲ್ಪಟ್ಟ ಯೂರೋಪಿನ ಪರಿಷತ್ತು 3ನೇ ಸೆಪ್ಟೆಂಬರ್ 1953ರಲ್ಲಿ ಜಾರಿಗೆ ಬಂದ ಮಾನವಹಕ್ಕುಗಳು ಮತ್ತು ಮೂಲಭೂತ ಸ್ವಾತಂತ್ರ್ಯಗಳ ರಕ್ಷಣಾ ಯೂರೋಪು ಒಡಂಬಡಿಕೆ 1950ರ ('ಮಾನವಹಕ್ಕುಗಳ ಯೂರೋಪು ಒಡಂಬಡಿಕೆ' ಎಂದೂ ಕರೆಯಲ್ಪಡುವ) ಕೆಳಗೆ ಮಾನವಹಕ್ಕುಗಳ ರಕ್ಷಣೆಗೆ ಕ್ರಿಯಾವಿನ್ಯಾಸವನ್ನು ಸ್ಥಾಪಿಸಿದೆ. ಈ ಒಡಂಬಡಿಕೆ ಮುಖ್ಯವಾಗಿ ಸಾಮಾಜಿಕ ಮತ್ತು ರಾಜಕೀಯ ಹಕ್ಕುಗಳ ವ್ಯವಹರಣೆಗೆ ಸಂಬಂಧಿಸಿದೆ ಮತ್ತು ಪ್ರಸ್ತಾವನೆಯಲ್ಲಿ "ಒಂದೇ ರೀತಿಯ ರಾಜಕೀಯ ನಡವಳಿಕೆಗಳು, ಆದರ್ಶಗಳು, ಸ್ವಾತಂತ್ರ್ಯ ಮತ್ತು ಶಾಸನಬದ್ಧ ಆಡಳಿತದ ಪರಂಪರೆಯನ್ನು ಹೊಂದಿರುವ ಸಮಾನ ಮನಸ್ಕ ಯೂರೋಪಿನ ದೇಶಗಳು, ಸರ್ಕಾರಗಳು, ಮಾನವಹಕ್ಕುಗಳ ವಿಶ್ವವ್ಯಾಪಿ

ಘೋಷಣೆಯಲ್ಲಿನ ಕೆಲವು ಹಕ್ಕುಗಳನ್ನು ಸಾಮೂಹಿಕವಾಗಿ ಜಾರಿಗೊಳಿಸಲು ನಿರ್ಣಯಿಸಿದ್ದೇವೆ" ಎಂದು ಹೇಳಲಾಗಿದೆ.

ಇಪ್ಪತ್ತುಮೂರು ಪಶ್ಚಿಮ ಯೂರೋಪು ದೇಶಗಳ ಸದಸ್ಯತ್ವ ಹೊಂದಿದ್ದ ಯೂರೋಪು ಪರಿಷತ್ತಿನ ಸದಸ್ಯತ್ವ, 1990ರಿಂದೀಚೆಗೆ ಮಧ್ಯ ಮತ್ತು ಪೂರ್ವ ಯೂರೋಪು ದೇಶಗಳು ಸದಸ್ಯತ್ವಕ್ಕೆ ಸೇರ್ಪಡೆಗೊಂಡು ಮೂವತ್ತೊಂಭತ್ತಕ್ಕೆ[59] ಬೆಳೆದಿದೆ. ಇವುಗಳಲ್ಲಿ ಮೂವತ್ಮೂರು ದೇಶಗಳು ಒಡಂಬಡಿಕೆಯನ್ನು ಸ್ಥಿರೀಕರಿಸಿವೆ ಮತ್ತು ವ್ಯಕ್ತಿಗತ ಮನವಿಯ ಹಕ್ಕನ್ನು ಹಾಗೂ ಮಾನವಹಕ್ಕುಗಳ ಯೂರೋಪು ನ್ಯಾಯಾಲಯದ[60] ಕಡ್ಡಾಯ ಅಧಿಕಾರವ್ಯಾಪ್ತಿಯನ್ನು ಒಪ್ಪಿಕೊಂಡಿವೆ.

ಯೂರೋಪು ಒಡಂಬಡಿಕೆಯಲ್ಲಿ ರಕ್ಷಿಸಲ್ಪಟ್ಟ ಹಕ್ಕುಗಳ ಜಾರಿಯನ್ನು ಖಾತರಿಪಡಿಸುವುದಕ್ಕಾಗಿರುವ ಕ್ರಿಯಾವಿನ್ಯಾಸ ಸದ್ಯಕ್ಕೆ ಯೂರೋಪು ಮಾನವಹಕ್ಕುಗಳ ಆಯೋಗ, ಯೂರೋಪು ಮಾನವಹಕ್ಕುಗಳ ನ್ಯಾಯಾಲಯ ಮತ್ತು ಮಂತ್ರಿಸಮಿತಿಗಳನ್ನು ಒಳಗೊಂಡಿದೆ. ಈ ಸಂಸ್ಥೆಗಳ ವ್ಯವಹರಣಾ ಸಾಮರ್ಥ್ಯ ಅಂತರರಾಜ್ಯ ಪ್ರಕರಣಗಳು ಮತ್ತು ಸಂಬಂಧಿಸಿದ ದೇಶ ಅದಕ್ಕೆ ಮಾನ್ಯತೆ ನೀಡಿದ್ದಲ್ಲಿ, ವ್ಯಕ್ತಿಗತ ಮನವಿಗಳು - ಎರಡಕ್ಕೂ ವಿಸ್ತೃತಗೊಂಡಿದೆ.

ನ್ಯಾಯಾಲಯದ ತೀರ್ಪುಗಳನ್ನು ಶಾಸನರೀತ್ಯಾ ಬದ್ಧಗೊಳಿಸುವುದರಿಂದ ಭಾಗಸ್ಥ ದೇಶಗಳು ತೀರ್ಮಾನಗಳ ಅನುಪಾಲನೆಗೆ ಬದ್ಧವಾಗಿವೆ. ಇದರಿಂದ ನ್ಯಾಯಾಲಯ ನೀಡುವ ನಿರ್ದಿಷ್ಟ ತೀರ್ಮಾನಗಳಿಗೆ ಸ್ಪಂದಿಸಿ ಸಾಧಾರಣವಾಗಿ ಭಾಗಸ್ಥ ದೇಶಗಳು ಸಾರ್ವತ್ರಿಕ ರೂಪದ ಶಾಸನಾತ್ಮಕ ಹಾಗೂ ಇನ್ನಿತರ ಬದಲಾವಣೆಗಳನ್ನು ಮಾಡುವುದಕ್ಕೆ ದಾರಿಯಾಗುತ್ತದೆ. (ಸಾಧಾರಣವಾಗಿ ಉಲ್ಲಂಘನೆಗಳ ಪುನರಾವರ್ತನೆಯನ್ನು ತಡೆಯುವುದಕ್ಕಾಗಿ). ಆಸ್ಟ್ರಿಯಾ ಮತ್ತು ಜರ್ಮನಿಗಳು ವಿಚಾರಣಾಧೀನ ಬಂಧನಗಳ ಬಗ್ಗೆ ತಮ್ಮ ಶಾಸನಗಳನ್ನು ತಿದ್ದುಪಡಿ ಮಾಡಿವೆ. ನ್ಯಾಯಾಲಯಕ್ಕೆ ಹೋಗುವ ಅವಕಾಶದ ಹಕ್ಕಿನ ವಿಚಾರದ ತೀರ್ಪಿನ ಅನುಪಾಲನೆಗಾಗಿ ಯುನೈಟೆಡ್ ಕಿಂಗ್‌ಡಮ್ ತನ್ನ ಜೈಲು ನಿಯಮಗಳನ್ನು ಬದಲಾಯಿಸಿದೆ. ನೆದರ್‌ಲ್ಯಾಂಡ್ಸ್ ಸೈನಿಕ ಶಿಸ್ತಿನ ಶಾಸನವನ್ನು ತಿದ್ದುಪಡಿ ಮಾಡಿದೆ. ನ್ಯಾಯಾಲಯ ಆಗಾಗ್ಗೆ ಹಕ್ಕು ಉಲ್ಲಂಘನೆಗಳಿಗೆ ಒಳಗಾದ ವ್ಯಕ್ತಿ ಅಥವಾ ವ್ಯಕ್ತಿಗಳಿಗೆ ಖರ್ಚು, ವೆಚ್ಚ ಮತ್ತು ಪರಿಹಾರವನ್ನು ಪಾವತಿಸುವಂತೆ ನಿರ್ದೇಶಿಸುತ್ತದೆ.

ಈ ಕಾರ್ಯವಿಧಾನಗಳು ಜನಜನಿತಗೊಂಡಿರುವುದರಿಂದ ಪ್ರಕರಣಗಳ ವ್ಯವಹರಣೆಗೆ ಐದರಿಂದ ಆರು ವರ್ಷಗಳು ಹಿಡಿಯುವಷ್ಟು ಆಯೋಗ ಮತ್ತು ನ್ಯಾಯಾಲಯದ ಕಾರ್ಯಬಾಹುಳ್ಯ ಬೆಳೆದಿದೆ. ಒಡಂಬಡಿಕೆಯ ತೊಡಕಾದ ನಿಯಂತ್ರಣ ವ್ಯವಸ್ಥೆ, ಯೂರೋಪು ಪರಿಷತ್ತಿನ ಸದಸ್ಯತ್ವ ವಿಸ್ತರಣೆಯಿಂದಾಗಿ ಇದರ ಮೇಲೆ ಉಂಟಾಗುವ ಪರಿಣಾಮ - ಇವು ವ್ಯವಸ್ಥೆಯನ್ನು ಸುಧಾರಿಸುವುದಕ್ಕೆ ದಾರಿ ಮಾಡಿವೆ. 11ನೇ ಮೇ 1994ರಲ್ಲಿ ಯೂರೋಪು ಪರಿಷತ್ತಿನ ಮೂವತ್ತೊಂದು ಸದಸ್ಯ ರಾಷ್ಟ್ರಗಳ ವಿದೇಶಾಂಗ ಸಚಿವರುಗಳು ರುಜುಮಾಡಿದ, ಮಾನವಹಕ್ಕುಗಳ ಯೂರೋಪು ಒಡಂಬಡಿಕೆಯ 11ನೇ ಸಂಖ್ಯೆಯ ಶಿಷ್ಟಾಚಾರ ಈ ಸುಧಾರಣೆಯ

ದಿಸೆಯಲ್ಲಿಟ್ಟ ಪ್ರಥಮ ಹೆಜ್ಜೆ. ಈಗಿರುವ ವಿವಿಧ ಘಟಕಗಳ (ಯೂರೋಪು ಆಯೋಗ, ಮಾನವಹಕ್ಕುಗಳ ಯೂರೋಪು ನ್ಯಾಯಾಲಯ) ಬದಲು ಒಂದೇ ನೂತನ ಶಾಶ್ವತ ಯೂರೋಪು ಮಾನವಹಕ್ಕುಗಳ ನ್ಯಾಯಾಲಯದ ಹೊಸ ನಿಯಂತ್ರಣ ವ್ಯವಸ್ಥೆಯನ್ನು ಜಾರಿಗೆ ತರುವ ನಿರ್ಣಯವನ್ನು ಭಾಗಸ್ಥ ದೇಶಗಳು ಸ್ಥಿರೀಕರಿಸುವುದು ಎರಡನೇ ಹೆಜ್ಜೆ. (ಮೇ 1996ರ ಹೊತ್ತಿಗೆ, ಇಪ್ಪತ್ತೊಂದು ದೇಶಗಳು ಹೀಗೆ ಸ್ಥಿರೀಕರಿಸಿದ್ದವು.) ಕಾರ್ಯವಿಧಾನಗಳಲ್ಲಿ ಮಂತ್ರಿಸಮಿತಿಗೆ ಇನ್ನು ಮುಂದೆ ಯಾವ ಪಾತ್ರವೂ ಇರುವುದಿಲ್ಲ. ವ್ಯಕ್ತಿಗತ ಮತ್ತು ಅಂತರರಾಷ್ಟ್ರೀಯ ಪ್ರಕರಣಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯದ ಅಧಿಕಾರವ್ಯಾಪ್ತಿ ಇನ್ನು ಮುಂದೆ ಕಡ್ಡಾಯವಾಗುತ್ತದೆ.

### *69. ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳನ್ನು ಯೂರೋಪಿನ ಪರಿಷತ್ತು ರಕ್ಷಿಸುವ ಬಗೆ ಹೇಗೆ?*

ಈ ಹಕ್ಕುಗಳು, 26ನೇ ಫೆಬ್ರವರಿ 1965ರಿಂದ ಜಾರಿಗೊಂಡ ಯೂರೋಪಿನ ಸಾಮಾಜಿಕ ಸಂವಿಧಾನದಿಂದ ಮಾನ್ಯ ಮಾಡಲ್ಪಟ್ಟಿವೆ. ಸಮರ್ಪಕವಾದ ಸಾಂಸ್ಥಿಕ ಹಾಗೂ ಇತರ ಕ್ರಮಗಳ ಮೂಲಕ ತಮ್ಮ ನಗರ ಮತ್ತು ಗ್ರಾಮೀಣ ಜನರೀರ್ವರ ಜೀವನಮಟ್ಟವನ್ನೂ ಉತ್ತಮಪಡಿಸಲು ಮತ್ತು ಸಾಮಾಜಿಕ ಸ್ವಾಸ್ಥ್ಯವನ್ನು ಉತ್ತೇಜಿಸಲು ಜತೆಯಾಗಿ ಎಲ್ಲ ಪ್ರಯತ್ನಗಳನ್ನು ಮಾಡುವ ಒಪ್ಪಂದಕ್ಕೆ ಭಾಗಸ್ಥರು[61] ಒಪ್ಪಿಕೊಳ್ಳುತ್ತಾರೆ. ಸಂವಿಧಾನದ ನಿಯಮಗಳ ಅನುಷ್ಠಾನದಲ್ಲಿ ಸಾಧಿಸಿರುವ ಪ್ರಗತಿಯನ್ನು ನಮೂದಿಸಿ, ಪ್ರತಿಯೊಂದು ಭಾಗಸ್ಥ ದೇಶವು ಯೂರೋಪು ಪರಿಷತ್ತಿನ ಮಹಾಕಾರ್ಯದರ್ಶಿಗೆ ಎರಡು ವರ್ಷಗಳಿಗೊಮ್ಮೆ ವರದಿಯನ್ನು ಸಲ್ಲಿಸತಕ್ಕದ್ದು.

ಜೂನ್ 1995ರಲ್ಲಿ ಸ್ವೀಕೃತವಾದ ಹೊಸ ಶಿಷ್ಟಾಚಾರ ಜಾರಿಗೆ ಬಂದಾಗ ಸಾಮಾಜಿಕ ಜತೆಗಾರರು, ಸರ್ಕಾರೇತರ ಸಂಘಟನೆಗಳು, ಸಂವಿಧಾನದ ಉಲ್ಲಂಘನೆಗಳಾಗಿವೆಯೆಂದು ಆರೋಪಿಸಿ, ಸ್ವತಂತ್ರ ತಜ್ಞರ ಸಮಿತಿಗೆ ಸಾಮೂಹಿಕವಾಗಿ ದೂರುಗಳನ್ನು ಸಲ್ಲಿಸುವುದು ಸಾಧ್ಯವಾಗುತ್ತದೆ.

ಕೈಗಾರಿಕೆಗಳ ಉಭಯ ಪಕ್ಷಗಳ ಮತ್ತು ಸರ್ಕಾರೇತರ ಸಂಘಟನೆಗಳ ಭಾಗವಹಿಸುವಿಕೆಯನ್ನು ಹೆಚ್ಚಿಸುವುದೇ ಸಾಮೂಹಿಕ ದೂರಿನ ವ್ಯವಸ್ಥೆಯ ಗುರಿಯಾಗಿದೆ. ಸಂವಿಧಾನದಲ್ಲಿ ಖಾತರಿಪಡಿಸಿರುವ ಸಾಮಾಜಿಕ ಹಕ್ಕುಗಳ ಜಾರಿಯನ್ನು ಉತ್ತಮಪಡಿಸುವುದಕ್ಕಾಗಿ ರೂಪಿಸಿರುವ ಅನೇಕ ಕ್ರಮಗಳಲ್ಲಿ ಇದೂ ಒಂದು ಮಾದರಿ. ಯೂರೋಪಿನ ಸಾಮಾಜಿಕ ಸಂವಿಧಾನದ ಪುನರ್ವಿಮರ್ಶಿತ ಕರಡೊಂದು ಪ್ರಸ್ತುತ ಮಂತ್ರಿಸಮಿತಿಯ ಪರಿಶೀಲನೆಯಲ್ಲಿದೆ.

## *70. ಯೂರೋಪು ಪರಿಷತ್ತಿನ ವ್ಯಾಪ್ತಿಯಲ್ಲಿ ಇತರ ಯಾವ ಚಟುವಟಿಕೆಯ ವಲಯಗಳು ಸೇರಿವೆ?*

ಚಿತ್ರಹಿಂಸೆ ಮತ್ತು ಅಮಾನುಷ ಅಥವಾ ಹೀನಾಯ ವರ್ತನೆ ಅಥವಾ ಶಿಕ್ಷೆಯನ್ನು ಪ್ರತಿಬಂಧಿಸುವ ಯೂರೋಪಿನ ಒಡಂಬಡಿಕೆ, ತಮ್ಮ ಸ್ವಾತಂತ್ರ್ಯಾಪಹರಣಕ್ಕೆ ಗುರಿಯಾದ ಜನರ ರಕ್ಷಣೆಗೆ, ನ್ಯಾಯಾಂಗೇತರ ಪ್ರತಿಬಂಧಕ ವ್ಯವಸ್ಥೆಯನ್ನು ಒದಗಿಸುತ್ತದೆ. ಇದು 'ಚಿತ್ರಹಿಂಸೆಯ ಪ್ರತಿಬಂಧಕ ಸಮಿತಿ' ಎಂಬ ಸ್ವತಂತ್ರ ಮತ್ತು ತಜ್ಞ ಸಮಿತಿಯ ಸದಸ್ಯರ ವ್ಯವಸ್ಥಿತ ನಿರ್ದೇಶನ ಮತ್ತು ತನಿಖಾ ಭೇಟಿಗಳ ಮೇಲೆ ಆಧಾರಿತವಾಗಿದೆ. ಈ ಸಮಿತಿ ನಂತರ ತನ್ನ ಶಿಫಾರಸುಗಳನ್ನು ಮಾಡುತ್ತದೆ (ಮತ್ತು ಅಂತಿಮವಾಗಿ ಒಂದು ಬಹಿರಂಗ ಹೇಳಿಕೆಯನ್ನು ಮಾಡಬಹುದು) ಹಾಗೂ ಮಂತ್ರಿಸಭೆಗೆ ವಾರ್ಷಿಕ ವರದಿಗಳನ್ನು ಸಲ್ಲಿಸುತ್ತದೆ. ಯೂರೋಪು ಪರಿಷತ್ತು ಗಂಡು-ಹೆಣ್ಣಿನ ಸಮಾನತೆಯ ವಿಚಾರಕ್ಕೂ ಸಾಕಷ್ಟು ಮಹತ್ವವನ್ನು ನೀಡಿದೆ. ಗಂಡು-ಹೆಣ್ಣಿನ ಸಮಾನತೆಗಾಗಿನ ನಿರ್ದೇಶಕ ಸಮಿತಿ ಮಹಿಳೆಯರ ವಿರುದ್ಧ ಹಿಂಸಾಚಾರ, ವೇಶ್ಯಾವೃತ್ತಿಯಂಥಾ ರೂಢಿಗಳ ಬಗ್ಗೆ ಕ್ರಮಕೈಗೊಂಡಿದೆ. ವಿವರವಾದ ವಿಶ್ಲೇಷಣೆ ಮತ್ತು ಸಮಾಲೋಚನೆಗಳ ಹಿನ್ನೆಲೆಯಲ್ಲಿ ವಾಸ್ತವಿಕ ಪ್ರಸ್ತಾವನೆಗಳನ್ನು ಸಿದ್ಧಪಡಿಸಿದೆ. 1994ರಲ್ಲಿ ಗಂಡು ಮತ್ತು ಹೆಣ್ಣು ನಿರ್ಧಾರದ ಪ್ರಕ್ರಿಯೆಯಲ್ಲಿ ಶೇಕಡಾ ಐವತ್ತು-ಐವತ್ತರ ಆಧಾರದ ಮೇಲೆ ಪಾಲ್ಗೊಳ್ಳುವ ಉದ್ದೇಶದಿಂದ 'ಸಮಾನತೆಯ ಪ್ರಜಾಪ್ರಭುತ್ವ' ಎಂಬ ಕಲ್ಪನೆಯನ್ನು ಆವಿಷ್ಕರಿಸಲಾಯಿತು.

ಯೂರೋಪು ಪರಿಷತ್ತು ಸಮೂಹ ಮಾಧ್ಯಮದ ಕ್ಷೇತ್ರದಲ್ಲೂ ತೊಡಗಿಕೊಂಡಿದೆ. ಮಾಹಿತಿ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ ಹಾಗೂ ಎಲ್ಲೆಗಳ ಪರಿವಿಲ್ಲದೆ ಮಾಹಿತಿಗಳ ಸ್ವೀಕಾರ ಮತ್ತು ರವಾನೆಯ ಹಕ್ಕಿನ ಬಲವರ್ಧನೆಯೇ ಅದರ ಗುರಿಯಾಗಿದೆ.

## *71. ಅಲ್ಪಸಂಖ್ಯಾತರ ಹಕ್ಕುಗಳನ್ನು ಯೂರೋಪು ಪರಿಷತ್ತು ರಕ್ಷಿಸುವ ಬಗೆ ಹೇಗೆ?*

1994ರಲ್ಲಿ ನವೆಂಬರ್‌ನಲ್ಲಿ ಸ್ವೀಕೃತವಾದ ರಾಷ್ಟ್ರೀಯ ಅಲ್ಪಸಂಖ್ಯಾತರ ರಕ್ಷಣೆಯ ಆಧಾರಕಟ್ಟಿನ ಒಡಂಬಡಿಕೆ ಅಲ್ಪಸಂಖ್ಯಾತರ ರಕ್ಷಣೆಗೆ ಮೀಸಲಾದ ಪ್ರಪ್ರಥಮ ಶಾಸನಾತ್ಮಕ ಬದ್ಧತೆಯಿರುವ ಬಹುಸ್ತರದ ಪ್ರಾತಿನಿಧಿಕ ದಸ್ತಾವೇಜಾಗಿದೆ. ಈ ಒಡಂಬಡಿಕೆ (1995ರಲ್ಲಿ ಸಹಿಗಾಗಿ ಬಿಡುಗಡೆ ಮಾಡಿದ್ದು) ಅನೇಕ ವಲಯಗಳನ್ನು ಒಳಗೊಂಡಿದೆ. ಭಾಷಿಕ ಸ್ವಾತಂತ್ರ್ಯದ ಮತ್ತು ಶಿಕ್ಷಣ ಮತ್ತು ಸಾರ್ವಜನಿಕ ಜೀವನದಲ್ಲಿ ಪಾಲ್ಗೊಳ್ಳುವ ಹಕ್ಕುಗಳು ಅದಕ್ಕೆ ಉದಾಹರಣೆಗಳು. ಅಲ್ಲದೆ ಜೂನ್ 1992ರಲ್ಲಿ ಸ್ವೀಕೃತವಾದ ಪ್ರಾದೇಶಿಕ ಅಥವಾ ಅಲ್ಪಸಂಖ್ಯಾತರ ಭಾಷೆಗಳ ಮೇಲಿನ ಯೂರೋಪು ಸಂವಿಧಾನದಲ್ಲಿ, ಖಾಸಗಿ ಮತ್ತು ಸಾರ್ವಜನಿಕ ಜೀವನದಲ್ಲಿ, ಅಲ್ಪಸಂಖ್ಯಾತರ ಭಾಷೆಯೊಂದನ್ನು ಬಳಸುವ ಹಕ್ಕು ಪರಾಧೀನ

ಮಾಡಲಾಗದ್ದೆಂಬುದರ ಮೇಲೆ ಪ್ರಧಾನ ಲಕ್ಷ್ಯವನ್ನಿಟ್ಟು ಶೈಕ್ಷಣಿಕ, ಆಡಳಿತಾತ್ಮಕ ಮತ್ತು ನ್ಯಾಯಿಕ ಪ್ರಸ್ತಾವನೆಗಳನ್ನು ರೂಪಿಸಲಾಗಿದೆ.

### *72. ಯೂರೋಪಿನ ಪರಿಷತ್ತು ರಾಜ್ಯಗಳಿಗೆ ವ್ಯಾವಹಾರಿಕ ನೆರವನ್ನು ನೀಡುತ್ತದೆಯೇ?*

ಮಧ್ಯ ಮತ್ತು ಪೂರ್ವ ಯೂರೋಪಿನ ರಾಜ್ಯಗಳಲ್ಲಿ ಪ್ರಜಾಪ್ರಭುತ್ವಾತ್ಮಕ ಪರಿವರ್ತನೆಯನ್ನು ಬಲಪಡಿಸಿ, ಯೂರೋಪು ಪರಿಷತ್ತಿಗೆ ಅವುಗಳ ಸೇರ್ಪಡೆಯನ್ನು ಸುಗಮಗೊಳಿಸುವ ಗುರಿ ಹೊಂದಿರುವ 'ಡೆಮೋಸ್ಥನೀಸ್ ಯೋಜನೆ'ಯ ಅಡಿಯಲ್ಲಿ ವ್ಯಾವಹಾರಿಕ ನೆರವಿನ ವಿಸ್ತಾರವಾದ ಕಾರ್ಯಕ್ರಮವನ್ನು ಪರಿಷತ್ತು ಹಮ್ಮಿಕೊಂಡಿದೆ. ಈ ಯೋಜನೆಯ ಚಟುವಟಿಕೆಗಳು ಆಡಳಿತಾತ್ಮಕ ಮತ್ತು ಶಾಸನಾತ್ಮಕ ಸುಧಾರಣೆಗಳು, ಮಾನವಹಕ್ಕುಗಳು, ಶಾಸನಬದ್ಧ ಆಡಳಿತದ ವಲಯದಲ್ಲಿ ಮೂಲಭೂತವಾದ ರಾಜಕೀಯ, ನ್ಯಾಯಿಕ, ಸಾಮಾಜಿಕ ಪ್ರಜಾಪ್ರಭುತ್ವಾತ್ಮಕ ವಿನ್ಯಾಸಗಳ ಸ್ಥಾಪನೆ - ಇವಕ್ಕೆ ನೆರವು ನೀಡಿಕೆಯನ್ನೊಳಗೊಂಡಿದೆ. ನ್ಯಾಯವಾದಿಗಳು, ನ್ಯಾಯಾಧೀಶರು, ಆಡಳಿತಗಾರರು ಮತ್ತು ಸಮೂಹ ಮಾಧ್ಯಮಗಳ ವೃತ್ತಿನಿರತರ ತರಬೇತಿಗೆ ಹೆಚ್ಚಿನ ಒತ್ತು ಕೊಡಲಾಗಿದೆ. ಮಾನವಹಕ್ಕುಗಳ ಅರಿವನ್ನು ಉತ್ತೇಜಿಸಲು ವೃತ್ತಿ ತರಬೇತಿ, ಹಾಗೆಯೇ ಮಾನವಹಕ್ಕುಗಳ ಸಾಕ್ಷ್ಯ ಸಂಕಲನದ ಎಲ್ಲ ಬೇಡಿಕೆಗಳಿಗೆ ಪ್ರತಿಸ್ಪಂದಿಸುವುದು ಯೂರೋಪು ಪರಿಷತ್ತಿನ ಮಾನವಹಕ್ಕುಗಳ ಮಾಹಿತಿ ಕೇಂದ್ರದ ಜವಾಬ್ದಾರಿಯಾಗಿದೆ.

### *73. ಆಫ್ರಿಕಾ ಐಕ್ಯತಾ ಸಂಘಟನೆ (ಓ.ಎ.ಯು.)[62] ಮಾನವಹಕ್ಕುಗಳ ರಕ್ಷಣೆಗೆ ತೆಗೆದುಕೊಂಡಿರುವ ಕ್ರಮಗಳೇನು?*

26ನೇ ಜೂನ್ 1981ರಂದು ಓ.ಎ.ಯು.ನ ರಾಷ್ಟ್ರ ಹಾಗೂ ಸರ್ಕಾರಗಳ ಮುಖ್ಯಸ್ಥರ ಸಭೆಯು ಮಾನವರ ಮತ್ತು ಜನತೆಯ ಹಕ್ಕುಗಳ ಆಫ್ರಿಕಾ ಸಂವಿಧಾನವನ್ನು ಸ್ವೀಕಾರ ಮಾಡಿದ್ದು ಅದು ಅಕ್ಟೋಬರ್ 1986ರಿಂದ ಜಾರಿಗೆ ಬಂದಿದೆ. ಮೇ 1996ರ ಹೊತ್ತಿಗೆ ಅದು ಓ.ಎ.ಯು.ನ ಐವತ್ತೂರು ಸದಸ್ಯ ರಾಷ್ಟ್ರಗಳಲ್ಲಿ[63] ಐವತ್ತು ರಾಷ್ಟ್ರಗಳಿಂದ ಸ್ಥಿರೀಕರಿಸಲ್ಪಟ್ಟಿತ್ತು.

### *74. ಆಫ್ರಿಕಾ ಸಂವಿಧಾನದಲ್ಲಿ ಯಾವ ಹಕ್ಕುಗಳು ರಕ್ಷಿಸಲ್ಪಟ್ಟಿವೆ?*

ವಿಶ್ವಸಂಸ್ಥೆಯ ಸಂವಿಧಾನ ಮತ್ತು ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆಯಿಂದ ಸ್ಫೂರ್ತಿ ಪಡೆದ ಇತರ ಪ್ರಾದೇಶಿಕ ಮಾನವಹಕ್ಕು ದಸ್ತಾವೇಜುಗಳಿಗಿಂತ ವಿಭಿನ್ನವಾದ ಅನೇಕ ಅಂಶಗಳು ಈ ಸಂವಿಧಾನದಲ್ಲಿದೆ. ವೈಶಿಷ್ಟ್ಯಪೂರ್ಣವಾದ ಈ ಸಂವಿಧಾನವು ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳನ್ನೂ ಸಹ ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಜತೆಯಲ್ಲೇ ಒಳಗೊಂಡಿದ್ದು, ಅದರಿಂದಾಗಿ ಈ ಎರಡು

ವರ್ಗದ ಹಕ್ಕುಗಳು ಅವಿಭಾಜ್ಯ ಮತ್ತು ಅಂತರಾವಲಂಬಿ ಎಂಬುದನ್ನು ಸ್ಫುಟಗೊಳಿಸಿದೆ. ಅದಕ್ಕಿಂತ ಹೆಚ್ಚಾಗಿ ಸಂವಿಧಾನವು 'ಜನತೆಯ ಹಕ್ಕುಗಳನ್ನು' - ಬೇರೆ ಶಬ್ದದಲ್ಲಿ ಹೇಳಬೇಕೆಂದರೆ ಒಂದು ಸಮೂಹವಾಗಿ ಜನರ ಸಾಮೂಹಿಕ ಹಕ್ಕುಗಳನ್ನು - ಸಹ ಉತ್ತೇಜಿಸುತ್ತದೆ. ಮಾನವಜೀವಿಗಳು ತಮ್ಮ ಪರಿಪೂರ್ಣ ಅಂತಃಸ್ಥ ಸಾಮರ್ಥ್ಯಗಳನ್ನು ಗುಂಪಿನ ಸದಸ್ಯರಾಗಿ ಮಾತ್ರ ಸಾಧಿಸುವುದು ಸಾಧ್ಯವೆಂಬ ನಂಬಿಕೆ, 'ಜನತೆಯ ಹಕ್ಕುಗಳು' ಎಂಬುದರ ತಾತ್ವಿಕತೆಗೆ ಜೋಡಣೆಯಾಗಿದೆ. ಹಾಗಾಗಿ ಮಾನವಜೀವಿಗಳಿಗೆ ಕೇವಲ ಹಕ್ಕುಗಳು ಮಾತ್ರವಲ್ಲ, ಕೌಟುಂಬಿಕ ಕರ್ತವ್ಯ, ತನ್ನ ಶಕ್ತಿಮೀರಿ ದುಡಿಮೆ ಮಾಡುವ ಕರ್ತವ್ಯ, ತೆರಿಗೆಗಳನ್ನು ಸಲ್ಲಿಸುವ ಕರ್ತವ್ಯ ಮತ್ತು ಆಫ್ರಿಕಾದ ಐಕತ್ಯೆಯನ್ನು ಬಲಪಡಿಸಲು ಶಕ್ತಿಮೀರಿ ಶ್ರಮಿಸುವ ಕರ್ತವ್ಯಗಳೂ ಸೇರಿದಂತೆ ಸಮುದಾಯದ ಬಗ್ಗೆ ಜವಾಬ್ದಾರಿಗಳು ಸಹ ಇವೆ. ಸಂವಿಧಾನವು ಅಭಿವೃದ್ಧಿಯ ಹಕ್ಕಿನ ಚಲಾವಣೆಯನ್ನು ಖಾತರಿಪಡಿಸುವ ಕರ್ತವ್ಯದ ಹೊಣೆಗಾರಿಕೆಯನ್ನು ರಾಷ್ಟ್ರಗಳ ಮೇಲಿರಿಸಿದೆ.

### *75. ಈ ಸಂವಿಧಾನವನ್ನು ಅನುಷ್ಠಾನಗೊಳಿಸಲು ಏನಾದರೂ ಮಾರ್ಗಗಳಿವೆಯೇ ?*

ಮಾನವರ ಮತ್ತು ಜನಸಮೂಹದ ಹಕ್ಕುಗಳನ್ನು ಸಂವರ್ಧಿಸಲು ಮತ್ತು ಆಫ್ರಿಕಾದಲ್ಲಿ ಅವುಗಳ ಸಂರಕ್ಷಣೆಯನ್ನು ಖಾತರಿಪಡಿಸಲು 'ಮಾನವರ ಮತ್ತು ಜನಸಮೂಹದ ಹಕ್ಕುಗಳ ಆಫ್ರಿಕಾ ಆಯೋಗ' ಓ.ಎ.ಯು.ಯಿಂದ ಸ್ಥಾಪಿಸಲ್ಪಟ್ಟಿದೆ. ಈ ಆಯೋಗದಲ್ಲಿ ವ್ಯಕ್ತಿಗತ ಪ್ರಾಮಾಣಿಕತೆ ಮತ್ತು ಸಾಮರ್ಥ್ಯದ ಆಧಾರದ ಮೇಲೆ, ಸರ್ಕಾರದ ಪ್ರತಿನಿಧಿಗಳಾಗಿರದೆ ವೈಯಕ್ತಿಕ ಸ್ಥಾನಬಲದಿಂದ ಕಾರ್ಯನಿರ್ವಹಿಸುವ ಹನ್ನೊಂದು ಜನ ಸದಸ್ಯರಿದ್ದಾರೆ. ಸಂವಿಧಾನದಲ್ಲಿ ನಮೂದಿಸಿರುವ ಹಕ್ಕುಗಳ ರಕ್ಷಣೆ ಮತ್ತು ಆ ಹಕ್ಕುಗಳ ಬೆಳವಣಿಗೆ ಮತ್ತು ಅವುಗಳ ಬಗ್ಗೆ ಚರ್ಚೆಯನ್ನು ಉತ್ತೇಜಿಸುವುದನ್ನು ಒಳಗೊಂಡಂತೆ ಆಯೋಗಕ್ಕೆ ಅನೇಕ ಕರ್ತವ್ಯಗಳಿವೆ.

### *76. ಆಫ್ರಿಕಾ ಆಯೋಗವು ತನ್ನ ಕರ್ತವ್ಯಗಳನ್ನು ಹೇಗೆ ನಿರ್ವಹಿಸುತ್ತದೆ ?*

ಆಫ್ರಿಕಾ ಆಯೋಗವು ಭಾಗಸ್ಥ ದೇಶಗಳಿಂದ, ಸಂವಿಧಾನದ ನಿಯಮಗಳ ಅನುಪಾಲನೆಯ ಬಗ್ಗೆ ನಿಯತಕಾಲಿಕ ವರದಿಗಳನ್ನು ಪರಿಶೀಲಿಸುತ್ತದೆ ಮತ್ತು ಅವುಗಳ ಮಾನವಹಕ್ಕು ಬಾಧ್ಯಸ್ಥಿಕೆಯನ್ನು ಅನುಷ್ಠಾನಗೊಳಿಸುವುದನ್ನು ಉತ್ತೇಜಿಸುವ ಉದ್ದಿಶ್ಯದಿಂದ, ಭಾಗಸ್ಥ ದೇಶಗಳ ಪ್ರತಿನಿಧಿಗಳೊಂದಿಗೆ ಸಂವಾದವನ್ನು ನಡೆಸುತ್ತದೆ.

1994ರಲ್ಲಿ ನ್ಯಾಯಾಂಗಬಾಹಿರ ಮರಣದಂಡನೆಗಳ ಬಗ್ಗೆ ಆಯೋಗ ಒಬ್ಬ ವಿಶೇಷ ಸಾಮರಸ್ಯಾಧಿಕಾರಿಯನ್ನು ನೇಮಿಸಿತು. ರ್ವಾಂಡಾದಲ್ಲಿನ ಪರಿಸ್ಥಿತಿ ಮತ್ತು ಆಫ್ರಿಕಾದಲ್ಲಿನ ಮಕ್ಕಳ ನ್ಯಾಯಾಂಗಬಾಹಿರ ಮರಣದಂಡನೆಗಳನ್ನು ಅಧ್ಯಯನ

ಮಾಡುವುದು ಮತ್ತು ಆಯೋಗಕ್ಕೆ ಮರುವರದಿ ಸಲ್ಲಿಸುವುದು ಈ ಅಧಿಕಾರಿಯ ಮೊದಲ ಜವಾಬ್ದಾರಿ.

### *77. ಉಲ್ಲಂಘನೆಗಳ ಬಗ್ಗೆ ಆಯೋಗಕ್ಕೆ ದೂರುಗಳನ್ನು ರಾಷ್ಟ್ರಗಳು ಸಲ್ಲಿಸಬೇಕೆ ಅಥವಾ ವ್ಯಕ್ತಿಗಳು ಸಲ್ಲಿಸಬಹುದೇ?*

ಸಂವಿಧಾನ ಪ್ರದತ್ತ ಹಕ್ಕುಗಳ ಉಲ್ಲಂಘನೆಯ ಆರೋಪಗಳ ಬಗ್ಗೆ ದೂರುಗಳನ್ನು ಸ್ವೀಕರಿಸಲು ಆಯೋಗಕ್ಕಿರುವ ಅಧಿಕಾರವನ್ನು, ಎಲ್ಲಾ ಭಾಗಸ್ಥ ದೇಶಗಳು ಅನೈಚ್ಛಿಕವಾಗಿ ಒಪ್ಪಲೇಬೇಕೆಂಬುದರಿಂದಾಗಿ ಈ ಸಂವಿಧಾನ ವೈಶಿಷ್ಟ್ಯಪೂರ್ಣವಾಗಿದೆ. ಭಾಗಸ್ಥ ದೇಶಗಳಾಗಲಿ, ಅದರಂತೆಯೇ ವ್ಯಕ್ತಿಗಳು ಮತ್ತು ಸರ್ಕಾರೇತರ ಸಂಘಟನೆಗಳಾಗಲೀ, ಆರೋಪಿತ ಉಲ್ಲಂಘನಕಾರ ಈ ಸಂವಿಧಾನವನ್ನು ಸ್ವೀಕರಿಸಿದ್ದಲ್ಲಿ[64] ಆ ರೀತಿಯ ದೂರುಗಳನ್ನು ನೀಡಬಹುದು. ಕಾರ್ಯವಿಧಾನವಷ್ಟೂ ಗೌಪ್ಯವಾಗಿರುತ್ತದೆ, ಆದರೆ ಪರಿಶೀಲಿಸಲ್ಪಟ್ಟ ಪ್ರಕರಣಗಳ ಸಾರಾಂಶವನ್ನು ಆಯೋಗದ ವಾರ್ಷಿಕ ವರದಿಯಲ್ಲಿ[65] ಪ್ರಕಟಿಸಲಾಗುತ್ತದೆ. ಆಯೋಗವು ಅವುಗಳ ವಾಸ್ತವಾಂಶಗಳು, ತೀರ್ಮಾನಗಳು ಮತ್ತು ಶಿಫಾರಸುಗಳಿಂದ ಕೂಡಿದ ವರದಿಯನ್ನು ತಯಾರಿಸುತ್ತದೆ ಮತ್ತು ಅದನ್ನು ಸಂಬಂಧಿಸಿದ ದೇಶಕ್ಕೆ ಓ.ಎ.ಯು.ನ ರಾಷ್ಟ್ರ ಹಾಗೂ ಸರ್ಕಾರಗಳ ಮುಖ್ಯಸ್ಥರ ಸಭೆಗೆ ಕಳಿಸಿಕೊಡುತ್ತದೆ. ಅದು ತೀರ್ಮಾನಗಳನ್ನು ಬಹಿರಂಗಪಡಿಸಲು[66] ನಿರ್ಧರಿಸಬಹುದು.

### *78. ಸಂವಿಧಾನದಲ್ಲಿ ನಮೂದಿಸಿರುವ ಹಕ್ಕುಗಳಿಗೆ ಆಯೋಗ ಯಾವ ರೀತಿಯ ಉತ್ತೇಜನ ನೀಡುತ್ತದೆ?*

ಆಫ್ರಿಕಾ ಸಂವಿಧಾನದಲ್ಲಿ ಅಳವಡಿಸಿರುವ ಹಕ್ಕುಗಳನ್ನು ಉತ್ತೇಜಿಸುವುದಕ್ಕಾಗಿ ಮಾಡಬೇಕಾದ ಕಾರ್ಯಗಳನ್ನು ಸಂವಿಧಾನದ 45ನೇ ಕಲಮಿನಲ್ಲಿ ನಮೂದಿಸಲಾಗಿದೆ. ಈ ಕಾರ್ಯನಿರ್ವಹಣೆಗಾಗಿ ಆಯೋಗವು ಹೆಚ್ಚಾಗಿ ಸರ್ಕಾರೇತರ ಸಂಘಟನೆಗಳ ಸಹಕಾರದಿಂದ ನಡೆಸುವ ಕಾರ್ಯಾಗಾರ ಮತ್ತು ವಿಚಾರಗೋಷ್ಠಿಗಳ ಯೋಜನೆಯೊಂದನ್ನು ವಿಸ್ತಾರಗೊಳಿಸಿದೆ. ಅದು ಬಾಂಜುಲ್, ಗ್ಯಾಂಬಿಯಾಗಳಲ್ಲಿ ಒಂದು ಸಾಕ್ಷ್ಯ ಸಂಕಲನ ಕೇಂದ್ರವನ್ನೂ ಸಹ ಸ್ಥಾಪಿಸಿದೆ ಮತ್ತು 'ಆಫ್ರಿಕನ್ ರಿವ್ಯೂ ಆಫ್ ಹ್ಯೂಮನ್ ರೈಟ್ಸ್' ಎಂಬ ನಿಯತಕಾಲಿಕವನ್ನು ಪ್ರಕಟಿಸುತ್ತಿದೆ. ಆಫ್ರಿಕಾ ಸರ್ಕಾರಗಳ ಶಾಸನರಚನೆಗೆ ಆಧಾರವಾಗಬಹುದಾದ ಮಾನವರ ಮತ್ತು ಜನಸಮೂಹದ ಹಕ್ಕುಗಳು ಮತ್ತು ಮೂಲಭೂತ ಸ್ವಾತಂತ್ರ್ಯಗಳ ಸಂಬಂಧದ ಕಾನೂನು ತೊಡಕುಗಳನ್ನು ನಿವಾರಿಸುವ ಉದ್ದಿಶ್ಯದಿಂದ ಆಯೋಗವು ಸಂವಿಧಾನದ ನಿರ್ದಿಷ್ಟ ಕಲಮುಗಳ ಮೇಲೆ ಅರ್ಥವಿವರಣಾ ಹೇಳಿಕೆಗಳನ್ನು ಬಿಡುಗಡೆ ಮಾಡುತ್ತದೆ. ನ್ಯಾಯಯುತ ವಿಚಾರಣೆ ಮತ್ತು ಮಾನವಿಕ ಶಾಸನಕ್ಕೆ ಗೌರವದಂಥ ವಿಷಯಗಳ ಮೇಲೆ ಹೇಳಿಕೆಗಳನ್ನು ಬಿಡುಗಡೆ ಮಾಡಲಾಗಿದೆ.

### *79. ಓ.ಎ.ಯು.ನಿಂದ ಯಾವ ನೂತನ ಕ್ರಮಗಳು ಪ್ರಾರಂಭಗೊಂಡಿವೆ?*

ಆಫ್ರಿಕಾದಲ್ಲಿ ಇಂಥಾ ಸಮಸ್ಯೆಗಳ ಬಗೆಗಾಗಿ ಜೂನ್ 1993ರಲ್ಲಿ ಓ.ಎ.ಯು. ಘರ್ಷಣೆಗಳನ್ನು ಪ್ರತಿಬಂಧಿಸುವ, ನಿರ್ವಹಿಸುವ ಹಾಗೂ ಬಗೆಹರಿಸುವ ವ್ಯವಸ್ಥೆಯೊಂದನ್ನು ಸ್ಥಾಪನೆ ಮಾಡಿತು. ಮುಂದುವರಿದಂತೆ, ಟ್ಯೂನಿಸ್‌ನಲ್ಲಿ ನಡೆದ ರಾಷ್ಟ್ರ ಹಾಗೂ ಸರ್ಕಾರಗಳ ಮುಖ್ಯಸ್ಥರ ಶೃಂಗಸಭೆಯಲ್ಲಿ ಅಂಗೀಕರಿಸಿದ ನಿರ್ಣಯದಲ್ಲಿ ಮಾನವ ಮತ್ತು ಜನಸಮೂಹದ ಹಕ್ಕುಗಳ ಆಫ್ರಿಕಾ ನ್ಯಾಯಾಲಯದ ನಿಬಂಧನೆಗಳ ಕರಡನ್ನು ತಯಾರಿಸುವುದಕ್ಕಾಗಿ ತಜ್ಞರ ಸಭೆಯೊಂದನ್ನು ಕರೆಯುವಂತೆ ಓ.ಎ.ಯು.ನ ಮಹಾ ಪ್ರಧಾನ ಕಾರ್ಯದರ್ಶಿಯನ್ನು ಕೋರಲಾಗಿದೆ.

### *80. ಮಾನವಹಕ್ಕುಗಳ ರಕ್ಷಣೆಗೆ ಅಮೇರಿಕಾ ರಾಜ್ಯ ಸಂಘಟನೆ (ಓ.ಎ.ಎಸ್.)[67]ಯಿಂದ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ?*

1890ರಲ್ಲಿ ರಚನೆಗೊಂಡ ಓ.ಎ.ಎಸ್. ಪಶ್ಚಿಮಾರ್ಧಗೋಳದ 30ಕ್ಕೂ ಹೆಚ್ಚು ರಾಜ್ಯಗಳನ್ನೊಳಗೊಂಡಿದ್ದು[68] ಮಾನವಹಕ್ಕುಗಳ ಉಲ್ಲಂಘನೆಗಳನ್ನು ತನಿಖೆ ಮಾಡುವ 'ಅಂತರ-ಅಮೇರಿಕಾ ಮಾನವಹಕ್ಕುಗಳ ಆಯೋಗ'ದ ಆಧಾರಕಟ್ಟನ್ನು ಒದಗಿಸುತ್ತದೆ. ಮಾನವಹಕ್ಕುಗಳ ಆಚರಣೆ ಮತ್ತು ರಕ್ಷಣೆಯ ಉತ್ತೇಜನ ಮತ್ತು ಈ ವಿಷಯದಲ್ಲಿ ಓ.ಎ.ಎಸ್.ನ ಸಲಹಾತ್ಮಕ ಘಟಕವಾಗಿ ಕಾರ್ಯನಿರ್ವಹಿಸುವುದು 1959ರಲ್ಲಿ ಸ್ಥಾಪನೆಗೊಂಡ ಈ ಆಯೋಗದ ಉದ್ದಿಶ್ಯವಾಗಿದೆ. ಮಾನವಹಕ್ಕುಗಳ ಉಲ್ಲಂಘನೆಗಳ ಆರೋಪಗಳ ಬಗ್ಗೆ ಅದು ಮನವಿಗಳನ್ನು ಸ್ವೀಕರಿಸುತ್ತವೆ ಮತ್ತು ಕಾರ್ಯತಂಡಗಳನ್ನು ಕಳಿಸುವುದು, ರಾಷ್ಟ್ರಗಳನ್ನು ಅಧ್ಯಯನ ಮಾಡುವುದು ಮತ್ತು ವ್ಯಕ್ತಿಗತ ದೂರುಗಳ ಮೇಲೆ ಕ್ರಮಕೈಗೊಳ್ಳುವುದು ಒಳಗೊಂಡಂತೆ ತನಿಖೆಯನ್ನು ನಡೆಸುತ್ತದೆ. ಮಾನವಹಕ್ಕುಗಳ ಭಾರೀ ಪ್ರಮಾಣದ ಉಲ್ಲಂಘನೆಗಳ ವರದಿಗಳು ಬಂದ ಸಂದರ್ಭಗಳಲ್ಲಿ ಆಯೋಗವು ಪರಿಸ್ಥಿತಿಯ ಅಧ್ಯಯನವನ್ನು ಕೈಗೊಳ್ಳಬಹುದು. ಇದು ವಾಸ್ತವಾಂಶಗಳ ತನಿಖೆ, ಸಾಕ್ಷ್ಯಗಳ ವಿಚಾರಣೆ ಮತ್ತು ಸರ್ಕಾರಗಳ ಜತೆ ಸಮಾಲೋಚನೆಗಳನ್ನು ಒಳಗೊಂಡಿರುತ್ತದೆ. ಇದರ ಹಿನ್ನಲೆಯಲ್ಲಿ ಆ ದೇಶಕ್ಕೆ ಭೇಟಿ ನೀಡಲು ಸಂಬಂಧಿಸಿದ ಸರ್ಕಾರದ ಪರವಾನಗಿಯನ್ನು ಕೇಳಬಹುದು.[69] ಓ.ಎ.ಎಸ್. ಒಂದು ಸರ್ಕಾರದ ಕೋರಿಕೆಯ ಮೇರೆಗೆ ಸ್ಥಳದಲ್ಲೇ ತನಿಖೆ ನಡೆಸಬಹುದು ಮತ್ತು ತನ್ನ ಸ್ವಇಚ್ಛೆಯಿಂದಲೇ ಯಾವುದೇ ಸದಸ್ಯ ರಾಷ್ಟ್ರಗಳಲ್ಲಿನ ಮಾನವಹಕ್ಕುಗಳ ಪರಿಸ್ಥಿತಿಯ ಮಟ್ಟವನ್ನು ಪರಾಮರ್ಶಿಸಬಹುದು ಮತ್ತು ವಿಶೇಷ ವರದಿಗಳನ್ನು ತಯಾರಿಸಬಹುದು.

ಜೀವದ ಸ್ವಾತಂತ್ರ್ಯ ಮತ್ತು ವೈಯಕ್ತಿಕ ಭದ್ರತೆ ಹಕ್ಕುಗಳ, ಶಾಸನಾತ್ಮಕ ಸಮಾನತೆಯ, ನ್ಯಾಯಯುತ ವಿಚಾರಣೆಯ, ಅಭಿವ್ಯಕ್ತಿ ಮತ್ತು ಧಾರ್ಮಿಕ ಸ್ವಾತಂತ್ರ್ಯದ ಮತ್ತು ಸ್ವೇಚ್ಛಾನುಸಾರಿ ಬಂಧನಗಳಿಂದ ಮುಕ್ತಗೊಳ್ಳುವ ಹಕ್ಕುಗಳನ್ನು

ಯಾವುದೇ ದೇಶ ಉಲ್ಲಂಘಿಸಿರುವುದಾಗಿ ಆರೋಪಿಸಿ ವ್ಯಕ್ತಿಗಳ ಆಯೋಗಕ್ಕೆ ದೂರುಗಳನ್ನು ಕೊಡಬಹುದು. ಈ ಕಾರ್ಯವಿಧಾನ ಅನುಸರಣೆಗೆ ರಾಜ್ಯಗಳು ಪ್ರತ್ಯೇಕವಾದ ಒಪ್ಪಂದಗಳನ್ನು ಮಾಡಿಕೊಂಡಿರುವ ಅಗತ್ಯವೇನೂ ಇಲ್ಲ. ಉಲ್ಲಂಘನೆಗಳು ಸಿದ್ಧಪಟ್ಟಿವೆಯೆಂದು ಆಯೋಗವು ಪರಿಗಣಿಸಿದರೆ, ಅದು ವ್ಯಕ್ತಿಯ ಪರವಾಗಿ ಸಂಬಂಧಪಟ್ಟ ಸರ್ಕಾರದ ಜತೆ ಮಧ್ಯಸ್ಥಿಕೆ ಮಾಡುತ್ತದೆ. ಆದರೆ ದೂರು ಕೊಟ್ಟವರ ಪರಿಚಯವನ್ನು ಸರ್ಕಾರಕ್ಕೆ ತಿಳಿಸುವುದಿಲ್ಲ. ಓ.ಎ.ಎಸ್.ನ ಸಭೆಗೆ ಆಯೋಗವು ವಾರ್ಷಿಕ ವರದಿಯನ್ನು ಸಲ್ಲಿಸುತ್ತದೆ.

1969ರ ಮಾನವಹಕ್ಕುಗಳ ಅಮೇರಿಕಾ ಒಡಂಬಡಿಕೆ ಜುಲೈ 1978[70]ರಿಂದ ಜಾರಿಗೊಂಡಿದೆ. ಒಡಂಬಡಿಕೆಯ ಕೆಳಗೆ ಮಾನವಹಕ್ಕುಗಳ ಅಂತರ-ಅಮೇರಿಕಾ ನ್ಯಾಯಾಲಯವು ಕೋಸ್ಟಾರೀಕಾದಲ್ಲಿ ಸ್ಥಾಪನೆಗೊಂಡಿದೆ. ಘೋಷಣೆಯ ಮೂಲಕವಾಗಿಯಾಗಲೀ ಅಥವಾ ವಿಶೇಷ ಒಪ್ಪಂದದ ಮೂಲಕವಾಗಲೀ, ನ್ಯಾಯಾಲಯದ ಅಧಿಕಾರವ್ಯಾಪ್ತಿಗೆ ಬದ್ಧವಾಗಿರುವುದಾಗಿ ಮಾನ್ಯ ಮಾಡಿರುವ ಎಲ್ಲ ರಾಷ್ಟ್ರಗಳಿಗೂ ನ್ಯಾಯಾಲಯದ ಅಧಿಕಾರವ್ಯಾಪ್ತಿಯು ಅನ್ವಯಗೊಳ್ಳುವುದಾಗಿ ಒಡಂಬಡಿಕೆಯ 62ನೇ ಕಲಮಿನಲ್ಲಿ ನಮೂದಿಸಲಾಗಿದೆ. ಜನವರಿ 1994ರ ಹೊತ್ತಿಗೆ ಹದಿನೇಳು ರಾಷ್ಟ್ರಗಳು ಹಾಗೆ ಮಾಡಿದ್ದವು.

1988ರಲ್ಲಿ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳಿಗೆ ಸಂಬಂಧಿಸಿದಂತೆ, ಅಮೇರಿಕಾ ಒಡಂಬಡಿಕೆಗೆ ಒಂದು ಹೆಚ್ಚುವರಿ ಶಿಷ್ಟಾಚಾರವನ್ನು ಅಂಗೀಕರಿಸಲಾಯಿತು (ಸ್ಯಾನ್ ಸಾಲ್ವಡೋರ್‌ನ ಶಿಷ್ಟಾಚಾರ). ಹನ್ನೊಂದು ರಾಜ್ಯಗಳು ಸ್ಥಿರೀಕರಿಸಿದ ಮೇಲೆ ಅದು ಜಾರಿಗೆ ಬರುತ್ತದೆ.[71]

### *81. ಇತರ ಯಾವ ಅಂತರ-ಸರ್ಕಾರಿ ಸಂಘಟನೆಗಳು ತಮ್ಮ ಚಟುವಟಿಕೆಗಳ ಭಾಗವಾಗಿ ಮಾನವಹಕ್ಕುಗಳ ಬಗ್ಗೆ ಕಾಳಜಿ ಹೊಂದಿವೆ?*

ಯೂರೋಪಿನ ಭದ್ರತೆ ಮತ್ತು ಸಹಕಾರಿ ಸಂಘಟನೆ (ಓ.ಎಸ್.ಸಿ.ಇ) 'ಯೂರೋಪಿನ ಭದ್ರತೆ ಮತ್ತು ಸಹಕಾರದ ಸಭೆ' ಎಂಬ ಹೆಸರಿನಲ್ಲಿ (ಸಿ.ಎಸ್.ಸಿ.ಇ) ಪೂರ್ವ ಮತ್ತು ಪಶ್ಚಿಮ ಯೂರೋಪ್ ಭಾಗಗಳ ನಡುವೆ ಸಂವಾದ ಮತ್ತು ಸಂಧಾನದ ಬಹುಸ್ತರೀಯ ವೇದಿಕೆಯಾಗಿ 1970ರ ದಶಕದಲ್ಲಿ ತನ್ನ ಚಟುವಟಿಕೆಗಳನ್ನು ಪ್ರಾರಂಭಿಸಿತು. 1975ರಲ್ಲಿ ಸಹಿಯಾದ 'ಹೆಲ್ಸಿಂಕಿ ಅಂತಿಮ ಶಾಸನ'ದಲ್ಲಿ ಭಾಗಸ್ಥ ದೇಶಗಳು[72] ರಾಷ್ಟ್ರಗಳ ಮಧ್ಯೆ ಮತ್ತು ಸರ್ಕಾರಗಳು ತಮ್ಮ ನಾಗರಿಕರ ಬಗೆಗೆ ಅನುಸರಿಸಬೇಕಾದ ನಡಾವಳಿಯ ಮೂಲಭೂತ ತತ್ವಗಳಿಗೆ ಒಪ್ಪಿಗೆ ನೀಡಿದವು. ಸಿ.ಎಸ್.ಸಿ.ಇ. ಕಾರ್ಯವಿಧಾನಗಳನ್ನು ಮೂರು ಮುಖ್ಯ ವಲಯಗಳಿಗೆ ಮುಂಬೆಳೆಸಲು ಆ ದೇಶಗಳು ಒಪ್ಪಿಕೊಂಡವು: ಯೂರೋಪಿನ ಭದ್ರತೆಗೆ ಸಂಬಂಧಿಸಿದ ಸಮಸ್ಯೆಗಳು, ಅರ್ಥಶಾಸ್ತ್ರ, ವಿಜ್ಞಾನ ಮತ್ತು ತಂತ್ರಜ್ಞತೆ ಹಾಗೂ ಪರಿಸರಕ್ಕೆ ಸಂಬಂಧಿಸಿದ ಕ್ಷೇತ್ರಗಳಲ್ಲಿ ಸಹಕಾರ; ಮಾನವಿಕ ಹಾಗೂ ಇನ್ನಿತರ

ಕ್ಷೇತ್ರದಲ್ಲಿ ಸಹಕಾರ. ಅನುಕ್ರಮವಾಗಿ ಬೆಂಬಲದ ಸಭೆಗಳಲ್ಲಿ ಭಾಗಸ್ಥ ದೇಶಗಳು ಅಲ್ಪಸಂಖ್ಯಾತರ ಬಗೆಗಿನ ನಡವಳಿಕೆಯಿಂದ ಹಿಡಿದು ಚಿತ್ರಹಿಂಸೆಯ ಪ್ರತಿಬಂಧ, ಅಭಿವ್ಯಕ್ತಿ ಸ್ವಾತಂತ್ರ್ಯದ ರಕ್ಷಣೆ ಮತ್ತು ಮರಮುದಂಡನೆ ಶಿಕ್ಷೆಯ ರದ್ದತಿವರೆಗಿನ ಮಾನವಹಕ್ಕುಗಳ ಸರಣಿಯ ಸಮಸ್ಯೆಗಳ ಮಾನದಂಡಗಳ ಹಾಗೂ ಮಾದರಿಗಳ ಬಗ್ಗೆ ತಮ್ಮ ಬಾಧ್ಯತೆಗಳನ್ನು ಒಪ್ಪಿಕೊಂಡು ಬಂದಿವೆ.

ಓ.ಎಸ್.ಸಿ.ಇ.ಯ ಒಳಗಡೆ, ರಾಷ್ಟ್ರೀಯ ಅಲ್ಪಸಂಖ್ಯಾತರ ರಾಯಭಾರಿ ಓ.ಎಸ್.ಸಿ.ಇ.ಯ ವಲಯದೊಳಗೆ ಸಂಘರ್ಷವಾಗಿ ಬೆಳೆಯುವ ಸಾಧ್ಯತೆ ಇರುವ ಬುಡಕಟ್ಟು ಪ್ರಕ್ಷುಬ್ಧತೆಗಳ ಬಗ್ಗೆ ಅತ್ಯಂತ ಶುರುವಿನ ಹಂತದಲ್ಲೇ ಸ್ಪಂದಿಸುತ್ತಾನೆ. ಪ್ರಜಾಪ್ರಭುತ್ವಾತ್ಮಕ ಸಂಸ್ಥೆಗಳ ಮತ್ತು ಮಾನವಹಕ್ಕುಗಳ (ಓ.ಡಿ.ಐ.ಹೆಚ್.ಆರ್) ಕಾರ್ಯಾಲಯ ರಾಷ್ಟ್ರದೊಳಗಿನ ಅದರ ಮಾನವಿಕ ಆಯಾಮಗಳ ಬಾಧ್ಯಸ್ಥಿಕೆಗಳ ಅನುಷ್ಠಾನದ ಚರ್ಚೆಗೆ ವೇದಿಕೆಯೊದಗಿಸುವ ಮೂಲಕ, ಮಾನವಹಕ್ಕುಗಳು, ಪ್ರಜಾಪ್ರಭುತ್ವ ಮತ್ತು ಶಾಸನಾತ್ಮಕ ಆಡಳಿತಗಳನ್ನು ಬೆಂಬಲಿಸುತ್ತದೆ. ಓ.ಡಿ.ಇ.ಎಚ್.ಆರ್. ಪ್ರಜಾಪ್ರಭುತ್ವಾತ್ಮಕ ಸಂಸ್ಥೆಗಳ ನಿರ್ಮಾಣದ ಬಗ್ಗೆ ಮಾಹಿತಿಯ ವಿನಿಮಯಕ್ಕೆ ಒಂದು ಆಧಾರಕಟ್ಟನ್ನು ಒದಗಿಸುತ್ತದೆ ಮತ್ತು ಚುನಾವಣೆಗಳ ನಿಯಂತ್ರಣವನ್ನು ಸುಸಂಘಟಿಸುತ್ತದೆ. ಓ.ಎಸ್.ಸಿ.ಇ.ಯಲ್ಲಿ ಜಾರಿಕ್ರಮಗಳಿಗೆ ಜವಾಬ್ದಾರನಾಗಿರುವ ಅಧಿಕಾರಸ್ಥ ಅಧ್ಯಕ್ಷನು, ನಿರ್ದಿಷ್ಟ ಮಾನವಹಕ್ಕುಗಳ ಪರಿಸ್ಥಿತಿಯನ್ನು ತನಿಖೆ ಮಾಡುವಂತೆ ವೈಯಕ್ತಿಕ ಪ್ರತಿನಿಧಿಗಳನ್ನು ನಿರ್ದೇಶಿಸಬಹುದು.

### *82. ಇತರ ಪ್ರಾದೇಶಿಕ ವ್ಯವಸ್ಥೆಗಳನ್ನು ಸ್ಥಾಪಿಸಲು ಯಾವುದಾದರೂ ಕ್ರಮ ಕೈಗೊಳ್ಳಲಾಗಿದೆಯೇ ?*

ಏಷ್ಯಾದ ದೇಶಗಳು, ಫೆಸಿಪಿಕ್ ಮತ್ತು ಮಧ್ಯಪ್ರಾಚ್ಯ ದೇಶಗಳ, ಹಾಗೆಯೇ ಬ್ರಿಟಿಷ್ ಕಾಮನ್‌ವೆಲ್ತ್‌ನ ಒಳಗಡೆ ಮಾನವಹಕ್ಕುಗಳ ರಕ್ಷಣೆ ಮತ್ತು ಉತ್ತೇಜನಕ್ಕಾಗಿ ಪ್ರಾದೇಶಿಕ ವ್ಯವಸ್ಥೆಯನ್ನು ರಚಿಸುವ ಪ್ರಸ್ತಾವನೆ ಮತ್ತು ಸಲಹೆಗಳು ಈಗ ಚರ್ಚೆಯಾಗುತ್ತಿವೆ.

### *83. ಮಾನವಹಕ್ಕುಗಳನ್ನು ಉತ್ತೇಜಿಸುವಲ್ಲಿ ಸರ್ಕಾರೇತರ ಸಂಘಟನೆಗಳು ವಹಿಸುವ ಪಾತ್ರವೇನು ?*

ಮಾನವಹಕ್ಕುಗಳ ಸಂವರ್ಧನೆಗೆ ಅಂತರರಾಷ್ಟ್ರೀಯ, ಪ್ರಾದೇಶಿಕ ಮತ್ತು ರಾಷ್ಟ್ರೀಯ ಸ್ತರಗಳಲ್ಲಿ ಸರ್ಕಾರೇತರ ಸಂಘಟನೆಗಳ ಪಾತ್ರ ಅಂತರರಾಷ್ಟ್ರೀಯ ಸಮುದಾಯದಿಂದ ವ್ಯಾಪಕ ಮನ್ನಣೆ ಮತ್ತು ಒಪ್ಪಿಗೆಯನ್ನು ಪಡೆದಿದೆ. ವಿಶ್ವಸಂಸ್ಥೆಯ ಮಾನವಹಕ್ಕುಗಳ ಚಟುವಟಿಕೆಗೆ ಸರ್ಕಾರೇತರ ಸಂಘಟನೆಗಳು ಗಣನೀಯ ಕಾಣಿಕೆಯನ್ನು ನೀಡಿವೆ. ಅವು ಮಾಹಿತಿಗಳ ವಿಶಿಷ್ಟಮೂಲವಾಗಿ ಸೇವೆ ಸಲ್ಲಿಸುತ್ತವೆ. ನೂತನ ಅಂತರರಾಷ್ಟ್ರೀಯ ಮಾನದಂಡಗಳನ್ನು ಗುರುತಿಸುವ ಮತ್ತು ಸಿದ್ಧಪಡಿಸುವ

ಕಾರ್ಯಕ್ಕೆ ನೆರವು ನೀಡುತ್ತವೆ. ಮಾನವಹಕ್ಕುಗಳಿಗಾದ ಅಪಚಾರದಿಂದ ಅನ್ಯಾಯಕ್ಕೆ ಒಳಗಾದ ಸಂತ್ರಸ್ತರಿಗೆ ಪರಿಹಾರವನ್ನು ದೊರಕಿಸಲು ಪ್ರಯತ್ನಿಸುತ್ತವೆ, ಮತ್ತು ಮಾನವಹಕ್ಕುಗಳ ಶಿಕ್ಷಣದ ಆದರಲ್ಲೂ ನಿರ್ದಿಷ್ಟವಾಗಿ ಅನೌಪಚಾರಿಕ ಸ್ತರಗಳನ್ನು ಉತ್ತೇಜಿಸುವಲ್ಲಿ ಮುಖ್ಯ ಪಾತ್ರವನ್ನು ವಹಿಸುತ್ತವೆ.



ಮಾನವಹಕ್ಕುಗಳ ಕ್ಷೇತ್ರದಲ್ಲಿ ತುಂಬಾ ಕ್ರಿಯಾಶೀಲವಾಗಿರುವ ಅನೇಕ ಅಂತರರಾಷ್ಟ್ರೀಯ, ರಾಷ್ಟ್ರೀಯ ಸರ್ಕಾರೇತರ ಸಂಘಟನೆಗಳಿವೆ. 1961ರಲ್ಲಿ ಸ್ಥಾಪನೆಗೊಂಡ ಅಂತರರಾಷ್ಟ್ರೀಯ ಕ್ಷಮಾದಾನ ಸಂಸ್ಥೆ (ಆಮ್ನೆಸ್ಟಿ ಇಂಟರ್‌ನ್ಯಾಶನಲ್) ಅವುಗಳಲ್ಲಿ ಬಹು ಮುಖ್ಯವಾದವುಗಳಲ್ಲೊಂದು. ಆ ಕಾಲದಿಂದೀಚೆಗೆ ಸಂಸ್ಥೆಯ ಲಾಂಛನವಾದ ಮುಳ್ಳುತಂತಿಯಿಂದ ಸುತ್ತಿರುವ ಉರಿಯುತ್ತಿರುವ ಮೇಣದಬತ್ತಿ ಜಗತ್ಪ್ರಸಿದ್ಧವಾಗಿದೆ. ವಾಕ್ ಸ್ವಾತಂತ್ರ್ಯ, ಧಾರ್ಮಿಕ ಮತ್ತು ನಂಬಿಕೆಯ ಸ್ವಾತಂತ್ರ್ಯ, ರಾಜಕೀಯ ಕೈದಿಗಳ ಬಿಡುಗಡೆ, ಚಿತ್ರಹಿಂಸೆ ಮತ್ತು ತಾರತಮ್ಯದ ವಿರುದ್ಧದ ಹೋರಾಟ-ಇವುಗಳ ಬಗ್ಗೆ ನಡೆಸಿದ ಅವಿಶ್ರಾಂತ ಚಟುವಟಿಕೆಗಳಿಗಾಗಿ 1977ರಲ್ಲಿ ಅಂತರರಾಷ್ಟ್ರೀಯ ಕ್ಷಮಾದಾನ ಸಂಸ್ಥೆಗೆ ನೊಬೆಲ್ ಶಾಂತಿ ಪ್ರಶಸ್ತಿ ನೀಡಲಾಗಿದೆ.

ಎಲ್ಲಾ ಮಾನವಹಕ್ಕುಗಳ ಉತ್ತೇಜನದಲ್ಲಿ ಮತ್ತು ರಾಷ್ಟ್ರೀಯ, ಪ್ರಾದೇಶಿಕ ಮತ್ತು ಅಂತರರಾಷ್ಟ್ರೀಯ ಸ್ತರಗಳಲ್ಲಿ ನಡೆಸುವ ಮಾನವಿಕ ಚಟುವಟಿಕೆಗಳಲ್ಲಿ ಸರ್ಕಾರೇತರ ಸಂಘಟನೆಗಳ ಪಾತ್ರ ಬಹು ಮುಖ್ಯವಾದದ್ದೆಂದು ಮಾನವಹಕ್ಕುಗಳ ವಿಶ್ವಸಮ್ಮೇಳನ (1993) ಮಾನ್ಯ ಮಾಡಿದೆ. ಮಾನವಹಕ್ಕುಗಳ ವಿಚಾರಗಳ ಬಗ್ಗೆ ಸಾರ್ವಜನಿಕ ಅರಿವನ್ನು ಹೆಚ್ಚಿಸುವುದರಲ್ಲಿ, ಈ ಕ್ಷೇತ್ರದಲ್ಲಿನ ಶೈಕ್ಷಣಿಕ, ತರಬೇತಿ ಮತ್ತು ಸಂಶೋಧನ ಕಾರ್ಯಕ್ರಮಗಳಲ್ಲಿ, ಮತ್ತು ಎಲ್ಲಾ ಮಾನವಹಕ್ಕುಗಳ ಹಾಗೂ ಮೂಲಭೂತ ಸ್ವಾತಂತ್ರ್ಯಗಳ ಉತ್ತೇಜನ ಮತ್ತು ರಕ್ಷಣೆಯ ಕಾರ್ಯದಲ್ಲಿ ಅವುಗಳ

ಕಾಣಿಕೆಯನ್ನು ಸಮ್ಮೇಳನ ಮೆಚ್ಚಿಕೊಂಡಿದೆ. ಮಾನವಹಕ್ಕುಗಳ ವಿಶ್ವಸಮ್ಮೇಳನವು ಸರ್ಕಾರಗಳ ಮತ್ತು ಸರ್ಕಾರೇತರ ಸಂಘಟನೆಗಳ ಮಧ್ಯದ ಸಂವಾದವನ್ನು ಮುಂದುವರಿಸಿಕೊಂಡು ಹೋಗುವುದರ ಮಹತ್ವವನ್ನು ಒತ್ತಿ ಹೇಳಿದೆ ಮತ್ತು ಸರ್ಕಾರೇತರ ಸಂಘಟನೆಗಳ ಮತ್ತು ಮಾನವಹಕ್ಕುಗಳ ಕ್ಷೇತ್ರದಲ್ಲಿ ನಿಜವಾಗಿ ತೊಡಗಿಕೊಂಡಿರುವ ಅದರ ಸದಸ್ಯರುಗಳು ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆಯಲ್ಲಿ ಮಾನ್ಯ ಮಾಡಿರುವ ಎಲ್ಲ ಹಕ್ಕುಗಳು, ಮತ್ತು ಸ್ವಾತಂತ್ರ್ಯಗಳನ್ನು ಹಾಗೂ ರಾಷ್ಟ್ರೀಯ ಶಾಸನಗಳಡಿಯಲ್ಲಿ[73] ರಕ್ಷಣೆಯನ್ನು ಹೊಂದಿರತಕ್ಕದ್ದೆಂದು ಒತ್ತಾಯಿಸಿದೆ.

## *84. ಮಾನವಹಕ್ಕುಗಳ ಪರಿಣಾಮಕಾರಿ ಅನುಷ್ಠಾನಕ್ಕೆ ಅಗತ್ಯವಿರುವ ಪೂರ್ವಭಾವಿ ಪರಿಸ್ಥಿತಿಗಳೇನು ?*

ಅವುಗಳ ಅನುಷ್ಠಾನ ಮತ್ತು ರಕ್ಷಣೆಗೆ ಆಗ್ರಹಿಸುವಷ್ಟು ಶಕ್ತರನ್ನಾಗಿಸಲು ಜನರಿಗೆ ತಮ್ಮ ಮತ್ತು ಇತರರ ಮಾನವಹಕ್ಕುಗಳ ಬಗ್ಗೆ ಅರಿವಿರಬೇಕಾಗುತ್ತದೆ. ಈ ಹಕ್ಕುಗಳು ಅನಾದರಣೆಗೆ ಒಳಗಾಗದಂತೆ ಖಾತರಿಪಡಿಸಲು ಮಾನವಹಕ್ಕುಗಳ ಮತ್ತು ಅವುಗಳ ರಕ್ಷಣೆಯ ವಿಧಾನಗಳ ಪರಿಜ್ಞಾನ ಅನಿವಾರ್ಯವಾದ ಪೂರ್ವಬಾವಿ ಆವಶ್ಯಕತೆಯಾಗಿದೆ.

## *85. ಮಾನವಹಕ್ಕುಗಳ ಪರಿಜ್ಞಾನವನ್ನು ಉತ್ತಮಪಡಿಸಲು ವಿಶ್ವಸಂಸ್ಥೆ ಯಾವ ಕ್ರಮಗಳನ್ನು ತೆಗೆದುಕೊಂಡಿದೆ ?*

ಮಾನವಹಕ್ಕುಗಳ ಬಗ್ಗೆ ಮಾಹಿತಿಯ ಮಹತ್ವವನ್ನು ಲಕ್ಷಿಸಿ ವಿಶ್ವಸಂಸ್ಥೆಯ ಮಹಾಧಿವೇಶನ ಅನೇಕ ನಿರ್ಣಯಗಳನ್ನು ಅಂಗೀಕರಿಸಿದೆ. ಮಹಾಧಿವೇಶನದ 43/128ನೇ ನಿರ್ಣಯದ ಪ್ರಕಾರ ಡಿಸೆಂಬರ್ 10, 1988ರಂದು ವಿಶ್ವಸಂಸ್ಥೆಯ ಮಾನವಹಕ್ಕುಗಳ ಸಾರ್ವತ್ರಿಕ ಮಾಹಿತಿ ಪ್ರಚಾರ ಕಾರ್ಯಾಚರಣೆಯನ್ನು ಪ್ರಾರಂಭಿಸಲಾಯಿತು. ಮಾನವಹಕ್ಕುಗಳ ಕ್ಷೇತ್ರದಲ್ಲಿ, ಶಿಕ್ಷಣ, ವಿದ್ಯೆ ಮತ್ತು ಮಾಹಿತಿಗೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಸಮಗ್ರವಾಗಿ ಮತ್ತು ಕಾರ್ಯಸಾಧ್ಯವಿರುವ ರೀತಿಯ ಮಾದರಿಗಳಲ್ಲಿ ರೂಪಿಸುವುದು ಆ ಕಾರ್ಯಾಚರಣೆಯ ಉದ್ದಿಶ್ಯವಾಗಿದೆ. ಈ ಕಾರ್ಯಾಚರಣೆಯ ಪ್ರಮುಖ ಅಂಗಗಳು-ಮಾನವಹಕ್ಕುಗಳ ಮೇಲೆ ಮುದ್ರಿತ ಸಾಮಗ್ರಿಗಳ ತಯಾರಿಕೆ ಮತ್ತು ವಿತರಣೆ, ಕಾರ್ಯಾಗಾರಗಳು ಮತ್ತು ವಿಚಾರಗೋಷ್ಠಿಗಳ ಸಂಯೋಜನೆ, ಸ್ನಾತಕೋತ್ತರ ವಿದ್ಯಾರ್ಥಿವೇತನಗಳ ಮಂಜೂರಾತಿ ಮತ್ತು ರಾಷ್ಟ್ರೀಯ ಮಾನವಹಕ್ಕು ಸಂಸ್ಥೆಗಳ ಸ್ಥಾಪನೆಗಳನ್ನೊಳಗೊಂಡಿದೆ. ಮಾನವಹಕ್ಕುಗಳ ಬಗ್ಗೆ ಸಾರ್ವತ್ರಿಕ ಜಾಗೃತಿಯನ್ನು ಮೂಡಿಸುವುದಕ್ಕಾಗಿ ಸಮೂಹ ಮಾಧ್ಯಮಗಳಿಗೆ ವಿಶೇಷ ಗಮನವನ್ನು ನೀಡಲಾಗಿದೆ.

ಸರಳ ಮತ್ತು ಸುಲಭಸಾಧ್ಯ ಪ್ರಾದೇಶಿಕ ಮತ್ತು ರಾಷ್ಟ್ರೀಯ ಅವಶ್ಯಕತೆಗಳಿಗೆ ಸರಿಹೊಂದಿಸಿ, ರಾಷ್ಟ್ರೀಯ ಮತ್ತು ಸ್ಥಳೀಯ ಭಾಷೆಗಳಲ್ಲಿ ಪ್ರಸಾರಗೊಳಿಸುವ ಮಾನವಹಕ್ಕುಗಳ ಮೇಲಿನ ಮಾಹಿತಿಯ ಅವಶ್ಯಕತೆಯನ್ನು ಮಹಾಧಿವೇಶನ ಮಾನ್ಯ ಮಾಡಿದೆ. ತಮ್ಮ ಶೈಕ್ಷಣಿಕ ಪಠ್ಯಕ್ರಮಗಳಲ್ಲಿ ಮಾನವಹಕ್ಕುಗಳ ಸಮಗ್ರ ತಿಳಿವಳಿಕೆಗೆ ಸಂಬಂಧಿಸಿದ ವಿಷಯಗಳನ್ನು ಸೇರಿಸಿಕೊಳ್ಳುವಂತೆ ಸದಸ್ಯ ರಾಷ್ಟ್ರಗಳನ್ನು ಒತ್ತಾಯಪಡಿಸಲಾಗಿದೆ. ಮತ್ತು ಶಾಸನ ಜಾರಿಗೊಳಿಸುವ ಅಧಿಕಾರಿಗಳು, ಸೈನಿಕರು, ವೈದ್ಯಕೀಯ ಕರ್ಮಚಾರಿಗಳು, ರಾಜತಂತ್ರಜ್ಞರುಗಳು ತಮ್ಮ ಕಾರ್ಯಕ್ರಮಗಳಲ್ಲಿ ಸೂಕ್ತ ರೀತಿಯ ಮಾನವಹಕ್ಕುಗಳ ಭಾಗಗಳನ್ನು ಜೋಡಿಸಿಕೊಳ್ಳುವಂತೆ ಪ್ರೋತ್ಸಾಹಿಸಲಾಗಿದೆ.

ಪ್ರತಿ ಎರಡು ವರ್ಷಕ್ಕೊಮ್ಮೆ ಮಹಾ ಪ್ರಧಾನ ಕಾರ್ಯದರ್ಶಿಯು ಪ್ರಚಾರ ಕಾರ್ಯಚರಣೆಯ ಚಟುವಟಿಕೆಗಳ ಬಗ್ಗೆ ವರದಿಯನ್ನು ಒಪ್ಪಿಸುತ್ತಾನೆ. ಮಹಾಧಿವೇಶನ ಅದರ ಉದ್ದಿಶ್ಯಗಳನ್ನು ಸ್ಥಿರೀಕರಿಸುವ ನಿರ್ಣಯಗಳನ್ನು 1992 (45/99), 1992(47/128)ಮತ್ತು 1994(49/187)ರಲ್ಲಿ ಅಂಗೀಕರಿಸಿದೆ. ವಿಶ್ವಸಂಸ್ಥೆಯ ಮಾನವಹಕ್ಕುಗಳ ಕೇಂದ್ರವು ವಿಶ್ವಸಂಸ್ಥೆಯ ಒಳಗಡೆ, ವಿಶ್ವವ್ಯಾಪಿ ಪ್ರಚಾರ ಕಾರ್ಯಚರಣೆಯ ಚಟುವಟಿಕೆಗಳನ್ನು ಸುಸಂಘಟಿಸುತ್ತದೆ ಮತ್ತು ವಿವಿಧ ಮಾನವಹಕ್ಕುಗಳ ಚಟುವಟಿಕೆಗಳ ಅನುಷ್ಠಾನದಲ್ಲಿ ಆಸಕ್ತರಾದ ಸರ್ಕಾರಗಳು ಪ್ರಾದೇಶಿಕ ಮತ್ತು ರಾಷ್ಟ್ರೀಯ ಸಂಸ್ಥೆಗಳ ಮತ್ತು ವ್ಯಕ್ತಿಗಳ ಮಧ್ಯೆ ಸಂಪರ್ಕ ಕಲ್ಪಿಸುತ್ತದೆ.

### *86. ಯುನೆಸ್ಕೋ ಮಾನವಹಕ್ಕುಗಳ ಶಿಕ್ಷಣದ ವಲಯದಲ್ಲಿ ಇತ್ತೀಚೆಗೆ ಕೈಗೊಂಡಿರುವ ಉಪಕ್ರಮಗಳೇನು?*

ಯುನೆಸ್ಕೋ ಮತ್ತು ವಿಶ್ವಸಂಸ್ಥೆಯ ಮಾನವಹಕ್ಕುಗಳ ಕೇಂದ್ರ ಯುನೆಸ್ಕೋದ ಕೆನಡಾ ಆಯೋಗದ ಸಹಚರ್ಯದೊಂದಿಗೆ, ಕೆನಡಾದ ಮಾಂಟ್ರಿಯಾಲ್‌ನಲ್ಲಿ ಮಾರ್ಚ್ 1993ರಲ್ಲಿ ಮಾನವಹಕ್ಕುಗಳು ಮತ್ತು ಪ್ರಜಾಪ್ರಭುತ್ವದ ಶಿಕ್ಷಣದ ಮೇಲೆ ಅಂತರರಾಷ್ಟ್ರೀಯ ಸಮಾವೇಶವನ್ನು ನಡೆಸಿತು. ಸಮಾವೇಶದಲ್ಲಿ ಅಂಗೀಕರಿಸಿರುವ ಮಾನವಹಕ್ಕುಗಳ ಶಿಕ್ಷಣದ ವಿಶ್ವವ್ಯಾಪಿ ಕ್ರಿಯಾಯೋಜನೆ, ಪ್ರಜಾಪ್ರಭುತ್ವದ ಶಿಕ್ಷಣವು ಮಾನವಹಕ್ಕು ಶಿಕ್ಷಣದ ಅಭಿನ್ನ ಅಂಶವೆಂಬುದನ್ನು ಒತ್ತಿ ಹೇಳಿದೆ, ಮತ್ತು ಮಾನವಹಕ್ಕುಗಳ ಹಾಗೂ ಪ್ರಜಾಪ್ರಭುತ್ವದ ಶಿಕ್ಷಣವೇ ಸ್ವತಃ ಒಂದು ಮಾನವಹಕ್ಕಾಗಿದ್ದು ಮಾನವಹಕ್ಕುಗಳ, ಪ್ರಜಾಪ್ರಭುತ್ವದ ಹಾಗೂ ಸಾಮಾಜಿಕ ನ್ಯಾಯದ ಸಾಧನೆಗೆ ಪೂರ್ವಾಪೇಕ್ಷಿತವೆಂಬುದನ್ನು ಸ್ಪಷ್ಟಪಡಿಸಿದೆ. ಮಾನವಹಕ್ಕುಗಳ ಮತ್ತು ಪ್ರಜಾಪ್ರಭುತ್ವದ ಶಿಕ್ಷಣವನ್ನು ಪರಿಣಾಮಕಾರಿಗೊಳಿಸುವ ಮತ್ತು ಸಮಗ್ರ, ವಿಶ್ವವ್ಯಾಪಿಯಾಗಿಸಬಲ್ಲ ಸಾಧನಗಳನ್ನು ಯೋಜನೆ ಚಿತ್ರಿಸಿದೆ. ಯೋಜನೆಯಲ್ಲಿ ಗುರುತಿಸಿರುವ ಪ್ರಮುಖ ಕ್ರಮ ಸೂಚನೆಗಳು, ಲಕ್ಷಿತ ಗುಂಪುಗಳ ವಿಂಗಡನೆ, ಸೂಕ್ತ ಪಠ್ಯಕ್ರಮಗಳ ತಯಾರಿ, ಪ್ರಜಾಪ್ರಭುತ್ವದ ಮತ್ತು ಮಾನವಹಕ್ಕು ಶಿಕ್ಷಣದ

ಬಗ್ಗೆ ಸಂಶೋಧನೆ ಚರ್ವಿತಚರ್ವಣವನ್ನು ರದ್ದುಪಡಿಸುವುದಕ್ಕಾಗಿ ಶಾಲಾ ಪಠ್ಯಪುಸ್ತಕಗಳ ಪರಿಷ್ಕರಣ, ಶಿಕ್ಷಕರ ಜಾಲದ ರಚನೆ, ಮಾನವಹಕ್ಕು ಮತ್ತು ಪ್ರಜಾಪ್ರಭುತ್ವ ಶಿಕ್ಷಣಕ್ಕೆ ಸಂಪನ್ಮೂಲಗಳ ಸಂವರ್ಧನೆ ಮತ್ತು ಮುಂದುವರಿಸಿಕೊಂಡು ಹೋಗಬಲ್ಲ ಮಿತವೆಚ್ಚದ ಶೈಕ್ಷಣಿಕ ಕಾರ್ಯಕ್ರಮಗಳ ವಿನ್ಯಾಸಗಳನ್ನು ಒಳಗೊಂಡಿವೆ. ಮಾನವಹಕ್ಕುಗಳ ಶಿಕ್ಷಣದ ಕ್ಷೇತ್ರದಲ್ಲಿ ನಿವಾರಿಸಿಕೊಳ್ಳಬೇಕಾಗುವ ಎಡರುತೊಡರುಗಳನ್ನೂ ಯೋಜನೆ ಗುರುತು ಮಾಡಿದೆ. ಯುನೆಸ್ಕೋ ದಸ್ತಾವೇಜುಗಳ ಅನುಷ್ಠಾನಕ್ಕೆ ಮತ್ತು ಮಾನವಹಕ್ಕುಗಳ ಶಿಕ್ಷಣ ಪ್ರಜಾಪ್ರಭುತ್ವ ಮತ್ತು ಶಾಂತಿಯನ್ನು ರಾಷ್ಟ್ರೀಯ, ಪ್ರಾದೇಶಿಕ ಮತ್ತು ವಿಶ್ವಮಟ್ಟದಲ್ಲಿ ಉತ್ತೇಜಿಸುವ ಉದ್ದಿಶ್ಯದ ಚಟುವಟಿಕೆಗಳ ಪ್ರೋತ್ಸಾಹಕ್ಕೆ ಶಿಫಾರಸುಗಳನ್ನು ನೀಡಲು ಡಿಸೆಂಬರ್ 1994ರಲ್ಲಿ ಸ್ಥಾಪನೆಗೊಂಡಿರುವ, ವಿಶ್ವದ ಎಲ್ಲಾ ಧರ್ಮಗಳನ್ನು ಪ್ರತಿನಿಧಿಸುವ ಹನ್ನೆರಡು ಉನ್ನತಮಟ್ಟದ ತಜ್ಞರಿಂದ ಕೂಡಿದ, ಶಾಂತಿ, ಮಾನವಹಕ್ಕುಗಳು ಮತ್ತು ಪ್ರಜಾಪ್ರಭುತ್ವಕ್ಕಾಗಿ ಶಿಕ್ಷಣದ ಸಲಹಾ ಸಮಿತಿಯನ್ನು ಆಹ್ವಾನಿಸಲಾಯಿತು.

### *87. ಅಂತರರಾಷ್ಟ್ರೀಯ ಸಮುದಾಯವು ಮಾನವಹಕ್ಕುಗಳ ಶಿಕ್ಷಣವನ್ನು ಯಾವ ರೀತಿಯಲ್ಲಿ ಉತ್ತೇಜಿಸುತ್ತಿದೆ?*

ಮಾನವಹಕ್ಕುಗಳ ಮತ್ತು ಪ್ರಜಾಪ್ರಭುತ್ವ ಶಿಕ್ಷಣದ ವಿಶ್ವಯೋಜನೆಯನ್ನು ಗಣನೆಗೆ ತೆಗೆದುಕೊಂಡ ವಿಯೆನ್ನಾ ಘೋಷಣೆ ಮತ್ತು ಕ್ರಿಯಾಯೋಜನೆ (1993) ಅನಕ್ಷರತೆಯ ನಿರ್ಮೂಲನದ ಪ್ರಯತ್ನಗಳಿಗೆ, ಎಲ್ಲ ಸಾಂಪ್ರದಾಯಿಕ ಹಾಗೂ ಅನೌಪಚಾರಿಕ ಶಿಕ್ಷಣದ ಪಠ್ಯಕ್ರಮದಲ್ಲಿ ಮಾನವಹಕ್ಕುಗಳ, ಮಾನವಿಕ ಶಾಸನದ, ಪ್ರಜಾಪ್ರಭುತ್ವ ಮತ್ತು ಶಾಸನಾತ್ಮಕ ಆಡಳಿತಗಳನ್ನು ಸೇರಿಸುವುದಕ್ಕೆ ಮತ್ತು ಮಹಿಳೆಯರ ಮಾನವಹಕ್ಕುಗಳ ಆವಶ್ಯಕತೆಯನ್ನು ನಿರ್ದಿಷ್ಟವಾಗಿ ಗಣನೆಗೆ ತೆಗೆದುಕೊಂಡು ಸಾರ್ವತ್ರಿಕ ಮಾಹಿತಿಯ ವಿಸ್ತಾರವಾದ ಪ್ರಸರಣವನ್ನು ಖಾತರಿಪಡಿಸುವುದಕ್ಕೆ, ರಾಷ್ಟ್ರಗಳನ್ನು ಪ್ರೋತ್ಸಾಹಿಸುತ್ತದೆ. ಮಾನವಹಕ್ಕುಗಳ ಶಿಕ್ಷಣ ಎಲ್ ಸಾಲ್ವಡೋರ್ ಮತ್ತು ಕಾಂಬೋಡಿಯಾ ಮುಂತಾದ ಕೆಲವೆಡೆಗಳಲ್ಲಿ ವಿಶ್ವಸಂಸ್ಥೆಯ ಶಾಂತಿ ಸ್ಥಾಪನೆಯ ಕಾರ್ಯ[illegible] ಭಾಗವಾಗಿದೆ.

1994/51ನೇ ನಿರ್ಣಯದ ಮೂಲಕ ಮಾನವಹಕ್ಕುಗಳ ಆಯೋಗವು ಜನವರಿ 1, 1995ರಿಂದ ಪ್ರಾರಂಭಗೊಂಡ ಹತ್ತು ವರ್ಷಗಳ ಅವಧಿಯನ್ನು - ವಿಶ್ವಸಂಸ್ಥೆಯ ಮಾನವಹಕ್ಕುಗಳ ಶಿಕ್ಷಣದ ದಶಕವೆಂದು ಘೋಷಿಸುವಂತೆ ಮಹಾಧಿವೇಶನಕ್ಕೆ ಮನವಿ ಮಾಡಿತು. 1994ರಲ್ಲಿ ಸ್ವೀಕಾರ ಮಾಡಿದ ತನ್ನ 49/184ನೇ ನಿರ್ಣಯದ ಮೂಲಕ ವಿಶ್ವಸಂಸ್ಥೆಯ ಮಹಾಧಿವೇಶನವು ಜನವರಿ 1, 1995ರಿಂದ ಪ್ರಾರಂಭಗೊಂಡ ಹತ್ತು ವರ್ಷಗಳ ಅವಧಿಯನ್ನು ವಿಶ್ವಸಂಸ್ಥೆಯ ಮಾನವಹಕ್ಕುಗಳ ಶಿಕ್ಷಣದ ದಶಕವೆಂದು ಘೋಷಿಸಿದೆ.

ದಶಕದ (1995-2004) ಉದ್ದೇಶಗಳನ್ನು ಕ್ರಿಯಾಯೋಜನೆಯಲ್ಲಿ ಸ್ಪಷ್ಟಪಡಿಸಲಾಗಿದೆ. ಅದು ಈ ಕೆಳಗಿನವುಗಳನ್ನು ಒಳಗೊಂಡಿದೆ:

ಅ. ಶಾಲೆಗಳ ಮಟ್ಟದಲ್ಲಿ ವೃತ್ತಿ ಶಿಕ್ಷಣ ಮತ್ತು ಸಾಂಪ್ರದಾಯಿಕ ಹಾಗೂ ಅನೌಪಚಾರಿಕ ಕಲಿಯುವಿಕೆಗಳಲ್ಲಿ ಮಾನವಹಕ್ಕುಗಳ ಶಿಕ್ಷಣವನ್ನು ಪ್ರೋತ್ಸಾಹಿಸಲು ಬೇಕಾದ ಅವಶ್ಯಕತೆಗಳನ್ನು ಅಂದಾಜು ಮಾಡಿ ಪರಿಣಾಮಕಾರಿ ಕಾರ್ಯತಂತ್ರಗಳನ್ನು ರೂಪಿಸುವುದು.

ಆ. ಅಂತರರಾಷ್ಟ್ರೀಯ, ಪ್ರಾದೇಶಿಕ, ರಾಷ್ಟ್ರೀಯ ಹಾಗೂ ಸ್ಥಳೀಯ ಸ್ತರಗಳಲ್ಲಿ ಮಾನವಹಕ್ಕುಗಳ ಶಿಕ್ಷಣಕ್ಕೆ ಕಾರ್ಯಕ್ರಮಗಳನ್ನು ಮತ್ತು ಸಾಮರ್ಥ್ಯವನ್ನು ನಿರ್ಮಾಣ ಮಾಡುವುದು ಮತ್ತು ಬಲಪಡಿಸುವುದು.

ಇ. ಮಾನವಹಕ್ಕು ಶಿಕ್ಷಣ ಸಾಮಗ್ರಿಗಳ ಸುಸಂಘಟಿತ ಅಭಿವೃದ್ಧಿ.

ಈ. ಮಾನವಹಕ್ಕು ಶಿಕ್ಷಣದ ಮುನ್ನಡೆಯಲ್ಲಿ ಸಮೂಹ ಮಾಧ್ಯಮಗಳ ಪಾತ್ರ ಮತ್ತು ಸಾಮರ್ಥ್ಯವನ್ನು ಬಲಪಡಿಸುವುದು.

ಉ. ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆಯನ್ನು ಸಾಧ್ಯವಿದ್ದಷ್ಟು ಗರಿಷ್ಠ ಸಂಖ್ಯೆಯ ಭಾಷೆಗಳಲ್ಲಿ ಮತ್ತು ಸಾಕ್ಷರತೆಯ ವಿವಿಧ ಸ್ತರಗಳಿಗೆ ಮತ್ತು ಅಂಗವಿಕಲರಿಗೆ ಸೂಕ್ತವೆನಿಸುವ ಇನ್ನಿತರ ರೂಪಗಳಲ್ಲಿ ವಿಶ್ವದಾದ್ಯಂತ ಪ್ರಸಾರ ಮಾಡುವುದು.

ಮಹಾಧಿವೇಶನವು, ಕ್ರಿಯಾಯೋಜನೆಯ ಅನುಷ್ಠಾನಕ್ಕೆ ನೆರವು ನೀಡುವಂತ ಮತ್ತು ಅನಕ್ಷರತೆಯ ನಿರ್ಮೂಲನದ ಪ್ರಯತ್ನಗಳನ್ನು ಇನ್ನಷ್ಟು ಹೆಚ್ಚಿಸುವುದಕ್ಕೆ, ಶಿಕ್ಷಣವನ್ನು ಮಾನವ ವ್ಯಕ್ತಿತ್ವದ ಪೂರ್ಣ ವಿಕಸನದೆಡೆಗೆ ಹಾಗೂ ಮಾನವಹಕ್ಕುಗಳು, ಮೂಲಭೂತ ಸ್ವಾತಂತ್ರ್ಯಗಳ ಬಗ್ಗೆ ಗೌರವವನ್ನು ಹೆಚ್ಚಿಸುವತ್ತ ನಿರ್ದೇಶಿಸುವಂತೆ ಎಲ್ಲಾ ಸರ್ಕಾರಗಳಿಗೆ ಮನವಿ ಮಾಡಿದೆ, ಮತ್ತು ಮಾನವಹಕ್ಕುಗಳ ಶಿಕ್ಷಣ ಕಾರ್ಯಕ್ರಮಗಳನ್ನು ರೂಪಿಸುವ ಹಾಗೂ ಕಾರ್ಯಗತಗೊಳಿಸುವ ತಮ್ಮ ಪ್ರಯತ್ನಗಳನ್ನು, ನಿರ್ದಿಷ್ಟವಾಗಿ ಈ ಕ್ಷೇತ್ರದಲ್ಲಿ ರಾಷ್ಟ್ರೀಯ ಯೋಜನೆಗಳನ್ನು ತಯಾರಿಸಿ, ಕಾರ್ಯಗತಗೊಳಿಸುವುದರ ಮೂಲಕ ತೀವ್ರಗೊಳಿಸಲು ಒತ್ತಾಯಿಸಿದೆ. ಈ ಕ್ರಿಯಾ ಯೋಜನೆಯ ಅನುಷ್ಠಾನವನ್ನು ಸುಸಂಘಟಿಸುವಂತೆ ವಿಶ್ವಸಂಸ್ಥೆಯ ಮಾನವಹಕ್ಕುಗಳ ರಾಯಭಾರಿಯನ್ನು ಕೇಳಿಕೊಳ್ಳಲಾಗಿದೆ. ಕಾರ್ಯಾಲಯದ ಮಾನವಹಕ್ಕುಗಳ ಕೇಂದ್ರ, ಮಾನವಹಕ್ಕುಗಳ ಆಯೋಗ ಅವುಗಳು, ಸದಸ್ಯ ರಾಷ್ಟ್ರಗಳ ಮಾನವಹಕ್ಕು ಒಪ್ಪಂದಗಳ ನಿಯಂತ್ರಣ ಘಟಕಗಳ ಮತ್ತು ಇನ್ನಿತರ ಸೂಕ್ತ ಸಂಸ್ಥೆಗಳ ಮತ್ತು ಸಮರ್ಥ ಸರ್ಕಾರೇತರ ಸಂಘಟನೆಗಳ ಸಹಕಾರದೊಂದಿಗೆ, ಆ ಅಧಿಕಾರಿಯ ಪ್ರಯತ್ನಗಳಿಗೆ ಬೆಂಬಲ ಕೊಡುವಂತ ಕೇಳಲಾಗಿದೆ. ತಮ್ಮ ತಮ್ಮ ಸಾಮರ್ಥ್ಯದ ವಲಯಗಳಲ್ಲಿ ಕ್ರಿಯಾಯೋಜನೆಯ ಅನುಷ್ಠಾನಕ್ಕೆ ನೆರವು ನೀಡುವಂತೆ ತಜ್ಞ ವಿಭಾಗಗಳನ್ನು ಮತ್ತು ವಿಶ್ವಸಂಸ್ಥೆಯ ಕಾರ್ಯಯೋಜಕರನ್ನು ಆಹ್ವಾನಿಸಲಾಗಿದೆ.

ಅಂತರರಾಷ್ಟ್ರೀಯ, ಪ್ರಾದೇಶಿಕ ಮತ್ತು ರಾಷ್ಟ್ರೀಯ ಸರ್ಕಾರೇತರ ಸಂಘಟನೆಗಳಿಗೆ, ನಿರ್ದಿಷ್ಟವಾಗಿ ಮಹಿಳೆಯರ ಮತ್ತು ಕಾರ್ಮಿಕರ ಅಭಿವೃದ್ಧಿ, ಪರಿಸರ-ಇವುಗಳಿಗೆ ಸಂಬಂಧಿಸಿದವರಿಗೆ ಹಾಗೆಯೇ ಇನ್ನಿತರ ಸಾಮಾಜಿಕ ನ್ಯಾಯಪ್ರತಿಪಾದಕ ಗುಂಪುಗಳು, ಮಾನವಹಕ್ಕುಗಳ ಪ್ರತಿಪಾದಕರು, ಶಿಕ್ಷಕರು, ಧಾರ್ಮಿಕ ಸಂಘಟನೆಗಳು ಮತ್ತು ಸಮೂಹ ಮಾಧ್ಯಮಗಳಿಗೆ, ಸಂಪ್ರದಾಯಿಕ ಮತ್ತು ಅನೌಪಚಾರಿಕ ಮಾನವಹಕ್ಕುಗಳ ಶಿಕ್ಷಣದಲ್ಲಿ ಇನ್ನೂ ಹೆಚ್ಚಾಗಿ ತೊಡಗಿಕೊಳ್ಳುವಂತೆ ಮಹಾಧಿವೇಶನ ಕರೆ ನೀಡಿದೆ.

**ಘೋಷಣೆಯ ಮೊದಲ ಇಪ್ಪತ್ತೊಂದು ಕಲಮುಗಳ ಬಹು ಭಾಗ ನಾಗರಿಕ ಮತ್ತು ರಾಜಕೀಯ ಹಕ್ಕುಗಳೆಂದು ಕರೆಯಲ್ಪಡುವುದಕ್ಕೆ ತಾಳೆಯಾಗುತ್ತವೆ ಮತ್ತು ಅವು ವ್ಯಕ್ತಿ ಸ್ವಾತಂತ್ರ್ಯ ಮತ್ತು ವೈಯಕ್ತಿಕ ಭದ್ರತೆಗೆ ಸಂಬಂಧಿಸಿವೆ.**

## ಕಲಮು *1.*

*ಎಲ್ಲ ಮಾನವಜೀವಿಗಳು ಸ್ವತಂತ್ರರಾಗಿ ಮತ್ತು ಸಮಾನ ಘನತೆ ಹಾಗೂ ಹಕ್ಕುಳ್ಳವರಾಗಿ ಹುಟ್ಟಿದ್ದಾರೆ. ಅವರು ವಿವೇಚನಾಶಕ್ತಿ ಮತ್ತು ಮನಸ್ಸಾಕ್ಷಿ ಸಂಪನ್ನರಾಗಿದ್ದಾರೆ ಮತ್ತು ಒಬ್ಬರು ಇನ್ನೊಬ್ಬರ ಬಗ್ಗೆ ಸಹೋದರ ಭಾವನೆಯಿಂದ ನಡೆದುಕೊಳ್ಳತಕ್ಕದ್ದು.*

## *ಇದರ ಅರ್ಥ ಎಲ್ಲರೂ ಸಮಾನರೆಂದಾಗುತ್ತದೆಯೇ?*

ಸ್ವತಂತ್ರರಾಗಿ ಹುಟ್ಟಿರುವುದೆಂದರೆ ಎಲ್ಲ ಜನರಿಗೂ ಸ್ವಾತಂತ್ರ್ಯಕ್ಕೆ ಸಮಾನ ಹಕ್ಕುಗಳಿವೆಯೆಂದು ಅರ್ಥ. ಆದರೆ ಜೀವನದುದ್ದಕ್ಕೂ ಅನೇಕರು ಆರ್ಥಿಕ ಮತ್ತು ಸಾಮಾಜಿಕ ಅಂತೆಯೇ ನಾಗರಿಕ ಹಾಗೂ ರಾಜಕೀಯ ನಿರ್ಬಂಧಗಳಿಂದ ಪೀಡಿತರಾಗಿದ್ದಾರೆಂದು ನಮಗೆ ತಿಳಿದಿದೆ. ಸ್ವಾತಂತ್ರ್ಯ ಪರಿಪೂರ್ಣವಲ್ಲ, ಪರಿಪೂರ್ಣವಾಗಿರುವುದು ಸಾಧ್ಯವೂ ಇಲ್ಲ; ಅಥವಾ ಒಬ್ಬನ ಸ್ವಾತಂತ್ರ್ಯ ಇನ್ನಿತರರ ಸ್ವಾತಂತ್ರ್ಯವನ್ನು ನಷ್ಟಗೊಳಿಸುವಂತಿರುವುದು ಸಾಧ್ಯವಿಲ್ಲ. ಆದ್ದರಿಂದ ಸ್ವಾತಂತ್ರ್ಯವನ್ನು ಅನಾಯಕತ್ವಕ್ಕೆ ಸಮವೆಂದು ತಿಳಿಯಬಾರದು.

'ಸಮಾನ'ರೆಂದರೆ ವ್ಯಕ್ತಿಗಳು ದೈಹಿಕ ಹಾಗೂ ಬೌದ್ಧಿಕ ಸಾಮರ್ಥ್ಯಗಳಲ್ಲಿ, ಜಾಣ್ಮೆಗಳು ಮತ್ತು ಅವರವರ ವೈಶಿಷ್ಟ್ಯಗಳಲ್ಲಿ ತದ್ರೂಪಿಗಳು ಅಥವಾ ಸಮಾನರೂಪಿಗಳಾಗಿರುತ್ತಾರೆಂದು ಅರ್ಥವಲ್ಲ. ನಿಜವಾಗಿಯೂ ಪ್ರತಿ ವ್ಯಕ್ತಿಯು ಬೇರೆ ಯಾವುದೇ ವ್ಯಕ್ತಿಗಿಂತ ಭಿನ್ನವಾಗಿದ್ದಾನೆ, ಮತ್ತು ಒಂದೇ ಸಾಮಾಜಿಕ ಅಥವಾ ಸಾಂಸ್ಕೃತಿಕ ಗುಂಪಿನೊಳಗಡೆಯ ವ್ಯಕ್ತಿಗಳ ಮಧ್ಯದ ವಿಭಿನ್ನತೆಗಳು, ಬೇರೆ ಬೇರೆ ಸಾಮಾಜಿಕ, ಸಾಂಸ್ಕೃತಿಕ ಗುಂಪಿಗೆ ಸೇರಿರುವ ವ್ಯಕ್ತಿಗಳ ಮಧ್ಯದ ವಿಭಿನ್ನತೆಗಳಿಗಿಂತ ಹೆಚ್ಚಿರಬಹುದು. ಬೌದ್ಧಿಕ, ಸಾಂಸ್ಕೃತಿಕ ಅಥವಾ ಅನುವಂಶಿಕ ಸಾಮರ್ಥ್ಯಗಳಿಗೆ ಸಂಬಂಧ ಕಲ್ಪಿಸಿ ಜನರನ್ನು ಶ್ರೇಣೀಕೃತ ಗುಂಪುಗಳನ್ನಾಗಿ ಮಾಡಿ ಇಡಲು ಯಾವ ನ್ಯಾಯಬದ್ಧ ಆಧಾರವೂ ಇಲ್ಲ. ಜನಾಂಗೀಯ ಅಥವಾ ವಿಭಿನ್ನ ಸಾಮಾಜಿಕ ಅಥವಾ ಬುಡಕಟ್ಟು ಗುಂಪುಗಳ ಮಧ್ಯೆ ಜನ್ಮಜಾತ ಅಸಮಾನತೆಯ ಸಮಾಜ ವಿರೋಧಿ ನಂಬಿಕೆಗಳ ಆಧಾರದ ಮೇಲೆ ತಾರತಮ್ಯ ಅಥವಾ ನಿರಾಕರಣೆಗೆ ಯಾವುದೇ ವೈಜ್ಞಾನಿಕ ಆಧಾರಗಳಿಲ್ಲ. ಯಾವುದೇ ಗುಂಪಿಗೆ ಅವರು ಸೇರಿದ್ದಾಗ್ಯೂ, ವ್ಯಕ್ತಿಗಳಿಗೆ ಅವರ ವ್ಯಕ್ತಿತ್ವದ ಅಂತಃಸ್ಥ ಶಕ್ತಿಗಳ ಪೂರ್ಣ ವಿಕಸನದ ಅವಕಾಶಗಳಿಂದ ವಂಚಿಸುವುದು ಒಂದು ಗುರುತರ ಅನ್ಯಾಯವಾಗಿದ್ದು, ಅವರ ಸಮಾನತೆ ಹಾಗೂ

ಘನತೆಯ ಹಕ್ಕಿನ ನಿರಾಕರಣೆಯಾಗಿದೆ. ಪ್ರತಿಯೊಬ್ಬರನ್ನು ಸಮಾನವಾಗಿ ನೋಡುವುದನ್ನು ಸಾಧ್ಯಗೊಳಿಸುವುದಕ್ಕಾಗಿ ಈ ಕಲಮು ಪ್ರತಿಯೊಬ್ಬರು ಉಳಿದವರನ್ನು, ಸಹೋದರತ್ವ ಅಂದರೆ ಸಮಾನ ಹಕ್ಕುಗಳ ಘನತೆಯಿರುವ ತಮ್ಮಂಥದೇ ಮಾನವಜೀವಿಗಳೆಂಬ ಭಾವನೆಯಿಂದ ನೋಡಬೇಕೆಂಬುದನ್ನು ಜ್ಞಾಪಿಸುತ್ತದೆ.

ಜನರು ಒಬ್ಬರಿನ್ನೊಬ್ಬರ ಜತೆ ಸಹೋದರ ಭಾವನೆಯಿಂದ ಮತ್ತು ಒಟ್ಟಾಗಿ ಶಾಂತಿಯಿಂದ ಬದುಕಲು, ಸಹಿಷ್ಣುತೆಯ ಅಭ್ಯಾಸವೇ ಮೂಲಾಧಾರ. ಈ ತತ್ವವನ್ನು ಉತ್ತೇಜಿಸಲು ವಿಶ್ವಸಂಸ್ಥೆಯ ಮಹಾಧಿವೇಶನ 1995ನ್ನು 'ವಿಶ್ವಸಂಸ್ಥೆಯ ಸಹಿಷ್ಣುತೆಯ ವರ್ಷ'ವೆಂದು ಘೋಷಿಸಿತು. ಸಹಿಷ್ಣುತೆ-ಬೇರೆಯವರ ಬಗ್ಗೆ ಮೆಚ್ಚುಗೆ ಮತ್ತು ಮಾನ್ಯತೆ, ಒಟ್ಟಾಗಿ ಬದುಕುವ ಸಾಮರ್ಥ್ಯ, ಬೇರೆಯವರ ಮಾತಿಗೆ ಬೆಲೆ ನೀಡುವುದು-ಇವೇ ಒಂದು ನಾಗರಿಕ ಸಮಾಜದ ಮತ್ತು ಶಾಂತಿಯ ಬುನಾದಿ.[74] ಈ ವರ್ಷವನ್ನು ಘೋಷಿಸುವ ಉಪಕ್ರಮಕ್ಕೆ ಕಾರಣವಾದ ಯುನೆಸ್ಕೋವನ್ನು ಮಾರ್ಗದರ್ಶಿ ಸಂಸ್ಥೆಯ ಪಾತ್ರವಹಿಸಿಕೊಳ್ಳುವಂತೆ ಆಹ್ವಾನಿಸಲಾಗಿದೆ.

## ಕಲಮು *2.*

*ಜನಾಂಗ, ಬಣ್ಣ, ಲಿಂಗ, ಭಾಷೆ, ಧರ್ಮ, ರಾಜಕೀಯ ಮತ್ತು ಇನ್ನಿತರ ಅಭಿಪ್ರಾಯ, ರಾಷ್ಟ್ರೀಯ ಅಥವಾ ಸಾಮಾಜಿಕ ಮೂಲ, ಆಸ್ತಿ, ಹುಟ್ಟು, ಇತರ ಸ್ಥಾನಮಾನ-ಈ ಯಾವುದೇ ವಿಧದ ಭೇದವಿಲ್ಲದೆ, ಈ ಘೋಷಣೆಯಲ್ಲಿ ನಮೂದಿಸಿರುವ ಎಲ್ಲ ಹಕ್ಕುಗಳು ಹಾಗೂ ಸ್ವಾತಂತ್ರ್ಯಗಳಿಗೆ ಪ್ರತಿಯೊಬ್ಬರೂ ಅರ್ಹರಾಗಿರುತ್ತಾರೆ. ಅದಕ್ಕಿಂತ ಹೆಚ್ಚಾಗಿ ವ್ಯಕ್ತಿಯು ನಿವಾಸಿಯಾಗಿರುವ ದೇಶದ ಅಥವಾ ಭೂಭಾಗದ ರಾಜಕೀಯ ಅಧಿಕಾರ ವ್ಯಾಪ್ತಿಯ, ಅಂತರರಾಷ್ಟ್ರೀಯವಾದ ಸ್ಥಾನಮಾನಗಳ ಆಧಾರದ ಮೇಲೆ ಅದು ಸ್ವತಂತ್ರವಿರಲಿ, ವಿಶ್ವಸ್ಥ ಸಮಿತಿಯಿರಲಿ, ಸ್ವಯಮಾಡಳಿತವಿಲ್ಲದ್ದಾಗಿರಲಿ ಅಥವಾ ಸಾರ್ವಭೌಮತ್ವದ ಬೇರಾವುದೇ ಇತಿಮಿತಿಗೆ ಒಳಪಟ್ಟಿರಲಿ, ಯಾವುದೇ ಭೇದವನ್ನು ಮಾಡತಕ್ಕದ್ದಲ್ಲ.*

## ಕಲಮು *7.*

*ಶಾಸನದ ಎದುರು ಎಲ್ಲರೂ ಸಮಾನರು ಮತ್ತು ಯಾವುದೇ ಭೇದವಿಲ್ಲದೆ ಸಮಾನ ಶಾಸನಾತ್ಮಕ ರಕ್ಷಣೆಗೆ ಅರ್ಹರು. ಈ ಘೋಷಣೆಯನ್ನು ಉಲ್ಲಂಘಿಸಿ ಯಾವುದೇ ತಾರತಮ್ಯ ಮಾಡುವ ಮತ್ತು ಅಂಥಾ ಪ್ರಚೋದನೆಗಳ ವಿರುದ್ಧ ಎಲ್ಲರೂ ಸಮಾನ ರಕ್ಷಣೆಗೆ ಅರ್ಹರಾಗಿರುತ್ತಾರೆ.*

ಈ ಎರಡೂ ಕಲಮುಗಳು ತಾರತಮ್ಯ ಪ್ರತಿಬಂಧನಕ್ಕೆ ಮಾರ್ಗದರ್ಶಿ ಸೂತ್ರಗಳನ್ನು ಅಭಿವ್ಯಕ್ತಿಸುತ್ತವೆ. ತಾರತಮ್ಯ ನಿವಾರಣೆಯು ಘೋಷಣೆಯನ್ನು ಸಮಗ್ರವಾಗಿ ವ್ಯಾಪಿಸಿಕೊಂಡಿರುವ ಮೂಲಭೂತ ತತ್ವವಾಗಿದೆ ಮತ್ತು ನಿಜವಾಗಿಯೂ

ಮಾನವಹಕ್ಕುಗಳ ರಕ್ಷಣೆಗೆ ಒಂದು ನಿರ್ಣಾಯಕ ಸೂತ್ರವಾಗಿದೆ. 2ನೇ ಕಲಮು ಘೋಷಣೆಯ ನಿಯಮಗಳನ್ನು ಅನ್ವಯಿಸುವುದರಲ್ಲಿ ತಾರತಮ್ಯ ಮಾಡದಿರುವುದಕ್ಕೆ ಸಂಬಂಧಿಸಿದೆ; 7ನೇ ಕಲಮು, ಶಾಸನಗಳನ್ನು ಮುಖ್ಯವಾಗಿ ರಾಷ್ಟ್ರೀಯ ಶಾಸನಗಳನ್ನು ಅನ್ವಯಿಸುವುದರಲ್ಲಿ ತಾರತಮ್ಯವಿಲ್ಲದಿರುವುದನ್ನು ಖಾತರಿಪಡಿಸುತ್ತದೆ. 2ನೇ ಕಲಮಿನಲ್ಲಿ ದೃಢಪಡಿಸಿರುವ ಯಾವುದೇ ವಿಷಯದ ಆಧಾರದ ಮೇಲೆ, ಯಾವುದೇ ಭೇದ ಮಾಡದಿರುವುದನ್ನು ಎಲ್ಲ ದೇಶಗಳು ಖಾತರಿಪಡಿಸುವಂತೆ 7ನೇ ಕಲಮು ಒತ್ತಾಯಿಸುತ್ತದೆ. ಶಾಸನಾತ್ಮಕ ಸಮಾನತೆ, ಶಾಸನಾಡಳಿತಾಧಿಕಾರಿಗಳನ್ನು, ನ್ಯಾಯಾಂಗ ಮತ್ತು ಪೋಲೀಸನ್ನು ಬದ್ಧಗೊಳಿಸುತ್ತದೆ ಮತ್ತು ಪ್ರತಿಯೊಬ್ಬರಿಗೂ ಶಾಸನಾತ್ಮಕವಾದ ರಕ್ಷಣೆಗೆ ಅವಕಾಶವಿರುವ ವ್ಯವಸ್ಥೆಯನ್ನು ಬಯಸುತ್ತದೆ. ಅದಕ್ಕಿಂತ ಹೆಚ್ಚಾಗಿ ವಿಶ್ವವ್ಯಾಪಿ ಘೋಷಣೆಯ ನಿಯಮಗಳನ್ನು ಉಲ್ಲಂಘಿಸಿ ಅಲ್ಪಸಂಖ್ಯಾತರ ವಿರುದ್ಧ ಯಾವುದೇ ತಾರತಮ್ಯ ಮಾಡದಂತೆ ರಕ್ಷಿಸಲು ಈ ರಾಷ್ಟ್ರಗಳು ಕರ್ತವ್ಯಬದ್ಧವಾಗಿವೆ. ತಾರತಮ್ಯವನ್ನು ಪ್ರೋತ್ಸಾಹಿಸುವುದು ಅಥವಾ ಪ್ರಚೋದಿಸುವುದು ಕೂಡ ಕಾನೂನುಬಾಹಿರ ಕೃತ್ಯವೆಂದೂ ಅದರ ಅರ್ಥವಾಗಿದೆ.

ಮಾನವಹಕ್ಕುಗಳ ಸಮಿತಿ (ಭಾಗ I, 13-16 ಪ್ರಶ್ನೆಗಳನ್ನೂ ನೋಡಿರಿ) ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಅಂತರರಾಷ್ಟ್ರೀಯ ಒಡಂಬಡಿಕೆಗಳಲ್ಲಿ ಇದಕ್ಕೆ ತಾಳೆ ಹೊಂದುವ ಕಲಮಿನ ಅರ್ಥವಿವರಣೆ ಮಾಡಿ, ಸಮಾನಸ್ತರದ ಮೇಲೆ ಹಕ್ಕುಗಳ ಮತ್ತು ಸ್ವಾತಂತ್ರ್ಯಗಳನ್ನು ಅನುಭವಿಸುವುದೆಂದರೆ, ಎಲ್ಲಾ ಸಂದರ್ಭದಲ್ಲೂ ಒಂದೇ ರೀತಿಯ ವ್ಯವಹರಣೆಯೆಂದೇನು ಅಲ್ಲವೆಂಬುದನ್ನು ಸ್ಪಷ್ಟಪಡಿಸಿದೆ. ಉದಾಹರಣೆಗೆ ಅಪ್ರಾಪ್ತವಯಸ್ಸಿನ ಅಪರಾಧಿಗಳನ್ನು ವಯಸ್ಕರಿಂದ ಪ್ರತ್ಯೇಕಿಸಿ ನೋಡಬೇಕಾಗುತ್ತದೆ. ಒಡಂಬಡಿಕೆ ನಿಷೇಧಿಸಿರುವ (ಸಾರ್ವತ್ರಿಕ ಟಿಪ್ಪಣಿ ಸಂ. 18) ತಾರತಮ್ಯವನ್ನು ಮುಂದುವರಿಸದಂತೆ ಸಹಾಯ ಮಾಡುವ ಅಥವಾ ಉಂಟಾಗುವುದಕ್ಕೆ ಕಾರಣವಾಗುವ ಪರಿಸ್ಥಿತಿಗಳನ್ನು ಕುಗ್ಗಿಸಲು ಅಥವಾ ನಿವಾರಿಸಲು, ಭಾಗಸ್ಥ ದೇಶಗಳು ಇತ್ಯರ್ಥಕ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಸಮಿತಿ ಸ್ಪಷ್ಟಪಡಿಸಿದೆ.

### *ಜನಾಂಗಭೇದವನ್ನು ಜನರು ಹೇಗೆ ಸಮರ್ಥಿಸಲು ಪ್ರಯತ್ನಿಸಿದ್ದಾರೆ?*

ಎಲ್ಲ ಬಗೆಯ ಜನಾಂಗಭೇದ ನಿರ್ಮೂಲನದ ಅಂತರರಾಷ್ಟ್ರೀಯ ಒಡಂಬಡಿಕೆ (ಭಾಗ Iರ 25-26ನೇ ಪ್ರಶ್ನೆಗಳನ್ನೂ ನೋಡಿ) 'ಜನಾಂಗಭೇದ' ಎಂಬುದರ ಅರ್ಥವನ್ನು, 'ರಾಜಕೀಯ, ಆರ್ಥಿಕ ಸಾಂಸ್ಕೃತಿಕ ಅಥವಾ ಸಾರ್ವಜನಿಕ ಜೀವನದ ಯಾವುದೇ ಕ್ಷೇತ್ರದಲ್ಲಿ ಮಾನವಹಕ್ಕುಗಳು ಮತ್ತು ಮೂಲಭೂತ ಸ್ವಾತಂತ್ರ್ಯಗಳನ್ನು ಸಮಾನಸ್ತರದಲ್ಲಿ ಅನುಭವಿಸುವ ಅಥವಾ ಚಲಾಯಿಸುವುದನ್ನು ರದ್ದುಪಡಿಸುವ ಅಥವಾ ಈ ಬಗೆಗಿನ ಮಾನ್ಯತೆಯನ್ನು ಕುಗ್ಗಿಸುವ, ಜನಾಂಗ, ವರ್ಣ, ಅನುವಂಶಿಕತೆ, ರಾಷ್ಟ್ರೀಯ ಅಥವಾ ಬುಡಕಟ್ಟು ಮೂಲಗಳ ಮೇಲೆ ಆಧಾರಿತವಾದ ಯಾವುದೇ

ಭೇದ ಅಥವಾ ಬಹಿಷ್ಕಾರ, ನಿರ್ಬಂಧ ಮೊದಲ ಹಕ್ಕು' ಎಂಬುದಾಗಿ ವ್ಯಾಖ್ಯಾನಿಸಿದೆ (ಕಲಮು 1).

ಗುಲಾಮಗಿರಿಯನ್ನು ಮತ್ತು 'ಕೆಳದರ್ಜೆ'ಯ ಜನರ ನಿರ್ಮೂಲನವನ್ನು ಸಹ ಸಮರ್ಥಿಸಲು ಬಳಸಲ್ಪಡುವ ಜನಾಂಗನೀತಿ ಮತ್ತು ಜನಾಂಗಭೇದ ಮೂಲತಃ ಜನಾಂಗೀಯ ಅಥವಾ ಬುಡಕಟ್ಟು ಗುಂಪುಗಳಲ್ಲಿನ, ಶ್ರೇಷ್ಠತೆ ಮತ್ತು ಅಧಮತೆಯ ಭಾವನೆಗಳಿಂದ ಹುಟ್ಟುತ್ತದೆ. 1978ರಲ್ಲಿ ಸ್ವೀಕೃತವಾದ ಜನಾಂಗ ಮತ್ತು ಜನಾಂಗೀಯ ಪೂರ್ವಗ್ರಹಗಳ ಮೇಲಿನ ಯುನೆಸ್ಕೋ ಘೋಷಣೆಯ ಪ್ರಕಾರ ಯಾವುದೇ ಅಂಥಾ ವಿಚಾರಸರಣಿಗೆ 'ವೈಜ್ಞಾನಿಕ ಆಧಾರಗಳಿಲ್ಲ ಮತ್ತು ಅದು ಮನುಕುಲದ ನೀತಿಗಳಿಗೆ ಮತ್ತು ನೈತಿಕ ತತ್ವಗಳಿಗೆ ವಿರುದ್ಧವಾಗಿದೆ' (2ನೇ ಕಲಮು, ಪರಿಚ್ಛೇದ 1). ಆದಾಗ್ಯೂ, ಜನಾಂಗನೀತಿ ಮತ್ತು ಜನಾಂಗ ಅಥವಾ ಬುಡಕಟ್ಟು ಮೂಲದ ಕಾರಣಗಳ ಮೇಲಿನ ತಾರತಮ್ಯ ನಮ್ಮ ಕಾಲದ ಪ್ರಮುಖ ಸಮಸ್ಯೆಯಾಗಿ ಮುಂದುವರಿದಿದೆ ಮತ್ತು ಇದು ನಾನಾ ರೂಪಗಳಲ್ಲಿ ಕಾಣಿಸಿಕೊಳ್ಳುತ್ತವೆ.

ಈ ಶತಮಾನದ ಪೂರ್ವಾರ್ಧದಲ್ಲಿ ಜರ್ಮನರ ಯಹೂದ್ಯ ವಿರೋಧಿ ವಿಚಾರಸರಣಿ ಜ್ಯೂ ಜನಾಂಗವನ್ನು ನಾಶಪಡಿಸುವ ನಾಜೀ ಪ್ರಯತ್ನದಲ್ಲಿ ಮತ್ತು ಮಾನವತೆಯ ವಿರುದ್ಧವಾಗಿ ನಿರಂಕುಶ ಪ್ರಭುತ್ವಗಳ ಬೇರೆ ಬೇರೆ ಅಪರಾಧಗಳಲ್ಲಿ ತುಟ್ಟತುದಿ ಮುಟ್ಟಿದ್ದನ್ನು ನಾವು ಕಂಡಿದ್ದೇವೆ.

ಈ ಶತಮಾನದ ಕೊನೆಯ ಹೊತ್ತಿಗೆ, ಮೊದಲಿನ ಯುಗೋಸ್ಲಾವಿಯಾದಲ್ಲಿ 'ಬುಡಕಟ್ಟು ಶುದ್ಧೀಕರಣ'ವನ್ನೂ ರ್‍ವಾಂಡಾದಲ್ಲಿ ಟುಟ್ಸಿಗಳ ವ್ಯವಸ್ಥಿತ ಹತ್ಯೆಯನ್ನೂ ಮನುಕುಲ ನೋಡುವಂತಾಯಿತು. ಎಲ್ಲ ಖಂಡಗಳಲ್ಲಿನ ವರ್ತಮಾನ ಕಾಲದ ಬುಡಕಟ್ಟು ಅಥವಾ ಜನಾಂಗೀಯ ಘರ್ಷಣೆಗಳ ಅನೇಕ ಸಂದರ್ಭದಲ್ಲಿ ನಡೆದ ಪಾಶವೀಕೃತ್ಯಗಳಲ್ಲಿ, ಇವು ಕೇವಲ ಎರಡು ಉದಾಹರಣೆಗಳಷ್ಟೆ.

ಹಿಂದಿನ ಶತಮಾನಗಳಲ್ಲಿ ಯೂರೋಪಿನ ಮತ್ತು ಇತರ ಶಕ್ತಿವಂತ ರಾಷ್ಟ್ರಗಳು ತಮ್ಮ ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ವಿಸ್ತರಣೆಯ ಭಾಗವಾಗಿ ಮೂಲನಿವಾಸಿಗಳೂ ಒಳಗೊಂಡಂತೆ ಅಧೀನ ಜನರ ಬಗ್ಗೆ ಜನಾಂಗೀಯ ಶ್ರೇಷ್ಠತೆ ಮತ್ತು ತಾರತಮ್ಯದ ಕೆಡುಕು ನೀತಿಯನ್ನು ಆಚರಣೆಯಲ್ಲಿ ತಂದಿದ್ದವು. ಇವೇ ಭಾವನೆಗಳು ಜನಾಂಗೀಯತೆಯ ಮತ್ತು ವಿದೇಶಿಯರ ಭಯದ ಹೊಸ ರೂಪಗಳಲ್ಲಿ ಯೂರೋಪಿನ ರಾಷ್ಟ್ರಗಳಲ್ಲಿ ಪುನರಾವರ್ತನೆಗೊಳ್ಳುತ್ತಿವೆ. ಯೂರೋಪಿನಲ್ಲಿ ಮತ್ತು ಇನ್ನಿತರ ಕೆಲವು ಖಂಡಗಳಲ್ಲಿ ವಾಸಿಸುತ್ತಿರುವ ಅನೇಕ ದಶಲಕ್ಷ ವಲಸೆ ಬಂದ ಕೆಲಸಗಾರರು, ನಿರಾಶ್ರಿತರು, ಸ್ಥಾನಪಲ್ಲಟರು ಮತ್ತು ಇತರ ವಿದೇಶಿಯರು, ಅಂತೆಯೇ ರಾಷ್ಟ್ರೀಯ ಅಥವಾ ಬುಡಕಟ್ಟು, ಧಾರ್ಮಿಕ, ಭಾಷಿಕ ಅಲ್ಪಸಂಖ್ಯಾತರು ತಾರತಮ್ಯ, ಧೋರಣೆ, ಪೂರ್ವಗ್ರಹಪೀಡಿತ ಹಿಂಸಾಚಾರ ಮತ್ತು ಶೋಷಣೆಯನ್ನು ಅನುಭವಿಸುತ್ತಿದ್ದಾರೆ. ಉಗ್ರ ಜನಾಂಗನೀತಿಯನ್ನು ಹಾಗೂ ಉತ್ಕಟ ರಾಷ್ಟ್ರೀಯತೆಯನ್ನು ಪ್ರಚಾರ ಮಾಡುತ್ತಿರುವ ಬಲಪಂಥೀಯ ಅತಿರೇಕದ ರಾಜಕೀಯದ ಗುಂಪುಗಳು ಹೆಚ್ಚಾಗುತ್ತಾ ಹೋಗುತ್ತಿವೆ.


ಸ್ವಾತಂತ್ರ್ಯ! ನ್ಯಾಯ! ಘನತೆ! ಶಾಂತಿ! ಪ್ರಜಾಪ್ರಭುತ್ವ!
ಇವನು ದೊಡ್ಡವನಾದ್ಮೇಲೆ ಇವನ್ನ ನಾವೇನಪ್ಪಾ ಮಾಡೋದು?

ಮೊದಲಿನ ವಸಾಹತು ದೇಶಗಳಲ್ಲಿ, ಭೂತಕಾಲದ ಅನೇಕ ತಾರತಮ್ಯ ನಡವಳಿಕೆಗಳು ಮತ್ತು ಪದ್ಧತಿಗಳು, ಆಳುತ್ತಿರುವ ರಾಜಕೀಯ, ಆರ್ಥಿಕ, ಸಾಮಾಜಿಕ ವಿನ್ಯಾಸಗಳ ಮುಂದುವರಿಕೆಯಲ್ಲಿ ತಾರತಮ್ಯದ ಮಾದರಿಗಳಲ್ಲಿ ಭದ್ರವಾಗಿ ನೆಲೆಗೊಂಡಿವೆ. ಈ ಜನಾಂಗೀಯ ನೀತಿಯಿಂದ ಸಂತ್ರಸ್ತರಾದ ಜನರೇ ತಮ್ಮ ಮೊದಲಿನ ಸ್ವಾತಂತ್ರ್ಯದ ಹುಡುಕಾಟವನ್ನು ಜನಾಂಗೀಯ ಸಿದ್ಧಾಂತಗಳು ಮಬ್ಬುಗೊಳಿಸಲು ಹಲವೊಮ್ಮೆ ತಾವೇ ಅವಕಾಶ ಮಾಡಿದ್ದಾರೆ.

ಇತ್ತೀಚಿನವರೆಗೂ ದಕ್ಷಿಣ ಆಫ್ರಿಕಾದಲ್ಲಿ ವರ್ಣಭೇದ ವ್ಯವಸ್ಥೆ ಅದರ ಸಾಂಸ್ಥೀಕೃತ ಜನಾಂಗ ವಿಂಗಡಣೆಯೊಂದಿಗೆ ಒಂದು ನಿರ್ದಿಷ್ಟ ಬಗೆಯ ಜನಾಂಗೀಯತೆ ಮತ್ತು ಜನಾಂಗಭೇದವಾಗಿ ಅಸ್ತಿತ್ವದಲ್ಲಿತ್ತು. ನಿಷೇಧಿಸಲ್ಪಟ್ಟ ರಾಜಕೀಯ ಪಕ್ಷಗಳ ಮೇಲಿನ ಬಹಿಷ್ಕಾರವನ್ನು ತೆಗೆದಿರುವುದಾಗಿ ಫೆಬ್ರವರಿ 1990ರಲ್ಲಿ ಅಧ್ಯಕ್ಷ ಡಿಕ್ಲರ್ಕ್ ಮಾಡಿದ ಪ್ರಕಟಣೆಯ ಮೂಲಕ ಪ್ರಜಾಪ್ರಭುತ್ವಾತ್ಮಕ ಸಮಾಜದ ನಿರ್ಮಾಣದ ದಿಸೆಯಲ್ಲಿ ಮೊದಲ ಹೆಜ್ಜೆಯನ್ನಿಟ್ಟಂತಾಯಿತು. ಇದನ್ನು ಅನುಸರಿಸಿ ನೆಲ್ಸನ್ ಮಂಡೇಲಾರವರನ್ನು ಇಪ್ಪತ್ತೇಳು ವರ್ಷಗಳ ಸೆರೆವಾಸದಿಂದ ಬಿಡುಗಡೆ ಮಾಡಲಾಯಿತು ಮತ್ತು ವರ್ಣಭೇದ ಶಾಸನವನ್ನು ರದ್ದುಪಡಿಸಲಾಯಿತು. 1991ರಲ್ಲಿ ಆಗ ಇದ್ದ ದಕ್ಷಿಣ ಆಫ್ರಿಕಾ ಸರಕಾರವು ಸೇರಿದಂತೆ ಹದಿನೆಂಟು ರಾಜಕೀಯ ಸಂಘಟನೆಗಳ ವೇದಿಕೆಯೊಂದನ್ನು ವರ್ಣಭೇದ ರದ್ದತಿಯ ನಂತರದ ದೇಶದ ರಾಜಕೀಯ ವಿನ್ಯಾಸವನ್ನು ತಯಾರಿಸುವುದಕ್ಕಾಗಿ ರಚಿಸಲಾಯಿತು. ಅನಂತರದ ವರ್ಷ, ಕೇವಲ ಬಿಳಿಯರದೇ ಸಾರ್ವತ್ರಿಕ ಮತದಾನ ನಡೆದು ಅದು ಎಲ್ಲಾ ದಕ್ಷಿಣ ಆಫ್ರಿಕನ್ನರಿಗೂ ಪ್ರಜಾಸತ್ತಾತ್ಮಕ ಪ್ರಕ್ರಿಯೆಯಲ್ಲಿ ಭಾಗವಹಿಸಲು ಅವಕಾಶವಾಗುವಂತೆ ವರ್ಣಭೇದ ರದ್ದತಿಗೆ ಒಪ್ಪಿಗೆ ನೀಡಿತು. ಏಪ್ರಿಲ್ 1994ರಲ್ಲಿ ಸಾರ್ವತ್ರಿಕ ಮತದಾನದ ಮೇಲೆ ಆಧಾರಿತ ಬಹುಪಕ್ಷೀಯ ಚುನಾವಣೆ ನಡೆದು ಐದು ವರ್ಷಗಳ ಅವಧಿಗೆ ನೆಲ್ಸನ್ ಮಂಡೇಲಾರವರ ನೇತೃತ್ವದಲ್ಲಿ ರಾಷ್ಟ್ರೀಯ ಐಕ್ಯತೆಯ ಮಧ್ಯಂತರ ಸರ್ಕಾರ ರಚನೆಗೊಂಡಿತು.

ವರ್ಣಭೇದ ರದ್ದತಿಯಲ್ಲಿ ಅಂತರರಾಷ್ಟ್ರೀಯ ಸಂಘಟನೆಗಳು, ನಿರ್ದಿಷ್ಟವಾಗಿ ವಿಶ್ವಸಂಸ್ಥೆಯ ವ್ಯವಸ್ಥೆ ಮಹತ್ವದ ಪಾತ್ರ ವಹಿಸಿದೆಯೆಂಬುದನ್ನು ಹೇಳಲೇಬೇಕು.

## ಕಲಮು 3.

*ಪ್ರತಿಯೊಬ್ಬರಿಗೂ ಜೀವದ, ಸ್ವಾತಂತ್ರ್ಯದ, ವೈಯಕ್ತಿಕ ಭದ್ರತೆಯ ಹಕ್ಕಿದೆ.*

## *ಈ ಹಕ್ಕುಗಳನ್ನು ಖಾತರಿಪಡಿಸುವುದು ರಾಷ್ಟ್ರದ ಜವಾಬ್ದಾರಿಯೇ?*

ಈ ಹಕ್ಕುಗಳನ್ನು ರಕ್ಷಿಸಬೇಕಾದ್ದು ರಾಷ್ಟ್ರದ ಕರ್ತವ್ಯವಾಗಿದ್ದಾಗ್ಯೂ ವಿಶ್ವದ ಅನೇಕ ಭಾಗಗಳಲ್ಲಿ ಅವು ಸರ್ಕಾರಗಳಿಂದ ಸತತವಾಗಿ ಉಲ್ಲಂಘಿಸಲ್ಪಡುತ್ತಲೇ ಇವೆ. ಇತ್ತೀಚಿನ ವರ್ಷಗಳಲ್ಲಿ ಬಂಧನದ ಸಾವುಗಳ ಬಗ್ಗೆ ಅಂತೆಯೇ ಲೆಖ್ಖವಿಲ್ಲದಷ್ಟು ಜನರ ಕಾಣೆಯಾಗುವಿಕೆಯ ಬಗ್ಗೆ ವಿಸ್ತೃತ ಪುರಾವೆಗಳಿವೆ.

ವಿಶ್ವಸಂಸ್ಥೆ ವಿಶ್ವದ ಅನೇಕ ದೇಶಗಳಲ್ಲಿನ ಬಲಾತ್ಕಾರದ ಅಥವಾ ಅನೈಚ್ಛಿಕ ಕಾಣೆಯಾಗುವಿಕೆಗಳ ಬಗ್ಗೆ ಮತ್ತು ನಿರಂಕುಶ, ನ್ಯಾಯಬಾಹಿರ ಮರಣದಂಡನೆಗಳ ಬಗ್ಗೆ ಈಗ ಕ್ರಮಬದ್ಧವಾಗಿ ವರದಿ ಸಲ್ಲಿಸುತ್ತದೆ. ಈ ವಿದ್ಯಮಾನಗಳಿಂದ ಸಂತ್ರಸ್ತರಾಗುತ್ತಿರುವವರ ಸಂಖ್ಯೆ ಇಳಿಮುಖವಾಗಿರುವುದಕ್ಕೆ ಯಾವ ಪುರಾವೆಗಳೂ ಇಲ್ಲ. ಚಿತ್ರಹಿಂಸೆಯನ್ನು ಒಳಗೊಂಡಂತೆ ಇವು ಮಾನವಹಕ್ಕುಗಳ ಗುರುತರ ಉಲ್ಲಂಘನೆಯಾಗಿದ್ದು ವಿಶ್ವಸಮುದಾಯದ ಮುಂದುವರಿದ ಗಮನವನ್ನು ಅಪೇಕ್ಷಿಸುತ್ತದೆ.

ಕೆಲವು ಪ್ರಕರಣಗಳಲ್ಲಿ, ಜೀವದ ಹಕ್ಕಿನ ಉಲ್ಲಂಘನೆ ಒಂದು ರಾಷ್ಟ್ರೀಯ, ಬುಡಕಟ್ಟು, ಜನಾಂಗೀಯ ಅಥವಾ ಧಾರ್ಮಿಕ ಗುಂಪನ್ನು ಭಾಗಶಃ ಅಥವಾ ಸಂಪೂರ್ಣವಾಗಿ ನಾಶಪಡಿಸುವ ಉದ್ದೇಶದಿಂದ ದೈಹಿಕವಾಗಿ ಅಥವಾ ಮಾನಸಿಕವಾಗಿ ಕೊಲ್ಲುವ ಅಥವಾ ಕೆಡುಕು ಮಾಡುವವರೆಗೂ ಹೋಗಿ ಮುಟ್ಟಿದೆ. ಅಂಥಾ ವರ್ತನೆಗಳಿಗೆ 'ಜನಾಂಗಹತ್ಯೆ'ಯೆಂದು ಹೆಸರು ಮತ್ತು ಅದು ಅಂತರರಾಷ್ಟ್ರೀಯ ಜನಾಂಗಹತ್ಯೆ ಪ್ರತಿಬಂಧನ ಮತ್ತು ಶಿಕ್ಷಾ ಒಡಂಬಡಿಕೆಯ ಅನುಸಾರ ಒಂದು ಅಂತರರಾಷ್ಟ್ರೀಯ ಅಪರಾಧವಾಗಿದೆ (ಭಾಗ Iರ ಪ್ರಶ್ನೆ 23ನ್ನೂ ನೋಡಿ).

## *ಒಂದು ರಾಷ್ಟ್ರೀಯ ಶಾಸನ ಮರಣದಂಡನೆಯ ಮೂಲಕ ಮಾನವ ಜೀವಾಪಹರಣಕ್ಕೆ ಅವಕಾಶ ಮಾಡಿದ್ದಲ್ಲಿ ಮಾಡುವುದೇನು?*

ಇನ್ನೊಬ್ಬರ ಜೀವಾಪಹರಣ ಮಾಡಿದ್ದಕ್ಕೆ, ನ್ಯಾಯಯುತ ಶಿಕ್ಷೆಯಾಗಿದೆಯೆಂಬ ನಂಬಿಕೆ ಮತ್ತು ಆದರಿಂದಾಗಿ ಅಂಥದೇ ಅಪರಾಧಗಳನ್ನು ಮಾಡುವ ಪ್ರಲೋಭನೆಗೊಳಗಾಗುವವರು ಭಯದಿಂದ ಹಿಂದೆ ಸರಿಯುತ್ತಾರೆಂಬುದರಿಂದಾಗಿ ಅನೇಕ ದೇಶಗಳಲ್ಲಿ ಮರಣದಂಡನೆ ಜಾರಿಯಲ್ಲಿದೆ. ಮರಣದಂಡನೆಯ ಭಯದಿಂದ ಅಪರಾಧಗಳು ಕಡಿಮೆಯಾಗುವ ಬಗ್ಗೆ ಸಾಕಷ್ಟು ಸಾಕ್ಷ್ಯಾಧಾರಗಳಿಲ್ಲ. ಅದಕ್ಕಿಂತ ಹೆಚ್ಚಾಗಿ, ಅತ್ಯಂತ ಕಠಿಣ ವಿಚಾರಣೆಯ ನಂತರವೂ, ಅಮಾಯಕ ವ್ಯಕ್ತಿಗಳು ಮರಣದಂಡನೆಗೊಳಗಾದ ಅನೇಕ ಉದಾಹರಣೆಗಳಿದ್ದು, ಒಮ್ಮೆ ತಪ್ಪಾಗಿ ಮರಣದಂಡನೆ ವಿಧಿಸಿದ ನಂತರ ಅದನ್ನು ಸರಿಪಡಿಸಲು ದಾರಿಯಿರದು.

ಮರಣದಂಡನೆಯ ಪರ ಮತ್ತು ವಿರೋಧಿ ಸಾರ್ವಜನಿಕ ಅಭಿಪ್ರಾಯ ಸಂದರ್ಭಾನುಸಾರ ಬದಲಾಯಿಸುತ್ತಿರುತ್ತದೆ. ಜನರು ನ್ಯಾಯದಾನದ ಹಳಿ ತಪ್ಪುವಿಕೆಯಿಂದಾಗಿ, ಅಥವಾ ದಮನಕಾರಿ ಪ್ರಭುತ್ವದ ಅತಿರೇಕಗಳಿಂದ ಮುಗ್ಧಜನರು ಜೀವತೆತ್ತಾಗ ಮರಣದಂಡನೆಯನ್ನು ವಿರೋಧಿಸುತ್ತಾರೆ. ಆದಾಗ್ಯೂ ಒಂದೇ ಒಂದು ಹೀನ ಅಪರಾಧ ಅಥವಾ ವಿಮಾನಾಪಹರಣ, ಭಯೋತ್ಪಾದನೆ, ಮನುಷ್ಯಾಪಹರಣಗಳೇ ಮುಂತಾದ ಹೊಸ ಅಪರಾಧಗಳು ಸಂಭವಿಸಿದಾಗ ಜನಾಭಿಪ್ರಾಯ ಸಂಪೂರ್ಣ ವಿರುದ್ಧ ದಿಕ್ಕಿಗೆ ಚಲಿಸುತ್ತದೆ. ಮರಣದಂಡನೆಯ ಬಗೆಗಿನ ಜನಾಭಿಪ್ರಾಯ ಹೆಚ್ಚಾಗಿ ಭಾವನಾತ್ಮಕ ಅಂಶಗಳಿಂದ ಪ್ರಭಾವಿತವಾಗಿದೆ.


ಅಭಿಪ್ರಾಯ ಸಂಗ್ರಹ, ಅಷ್ಟೆ! ಮರಣದಂಡನೆಗೆ ನೀನು ಪರವೋ? ವಿರೋಧವೋ?
PLANTU

ದೇಶಗಳು ತಮ್ಮ ಹಣಕಾಸಿನ ಅವಶ್ಯಕತೆಯ ದೃಷ್ಟಿಯಿಂದಲೂ ಶಾಸನವನ್ನು ಮಾಡುತ್ತವೆ. 'ತುರ್ತುಸ್ಥಿತಿ' ಅಥವಾ 'ಲಗ್ಗೆಯ ಸ್ಥಿತಿ'ಗಳು ಸೈನ್ಯಾಧಿಕಾರಿಗಳಿಂದ ಅಥವಾ ಸರ್ಕಾರೀ ಆಜ್ಞೆಗಳಿಂದಲೂ ಸಹ ಕಾರ್ಯಾನ್ವಯಗೊಂಡ ಮರಣದಂಡನೆಯ ಅವಕಾಶಗಳನ್ನೊಳಗೊಂಡಿರುತ್ತವೆ. ಅಂಥಾ ಶಾಸನಗಳಿಂದ ಮಾನವಹಕ್ಕುಗಳಿಗೆ ಒದಗಬಹುದಾದ ಅಪಾಯಗಳ ಬಗ್ಗೆ ಮಾನವಹಕ್ಕುಗಳ ಆಯೋಗ (ಭಾಗ Iರ ಪ್ರಶ್ನೆ 50ನ್ನೂ ನೋಡಿ) ಅಧ್ಯಯನ ಮಾಡುತ್ತಿದೆ.

ದಮನಕಾರಿ ಪ್ರಭುತ್ವಗಳು, ಯಾವುದೇ ಪ್ರತಿರೋಧದ ವಿರುದ್ಧದ ಅಸ್ತ್ರವಾಗಿ, ಹಾಗೂ ಸಾಮಾಜಿಕ ಅನ್ಯಾಯ ಮತ್ತು ಜನಾಂಗೀಯ ನೀತಿಗಳನ್ನು ಮುಂದುವರಿಸಿಕೊಂಡು ಹೋಗಲು ಸಹಾಯ ಮಾಡುವ ಸಾಧನವಾಗಿ, ಮರಣದಂಡನೆಯನ್ನು ಆಗಾಗ್ಗೆ ಬಳಸಿಕೊಂಡಿದ್ದಾವೆ.

## *ಮರಣದಂಡನೆಯನ್ನು ರದ್ದುಪಡಿಸುವ ಉದ್ದಿಶ್ಯದ ಅಂತರರಾಷ್ಟ್ರೀಯ ದಸ್ತಾವೇಜುಗಳು ಯಾವುದಾದರೂ ಇವೆಯೇ?*

ಈ ವಿಚಾರ ಅಂತರರಾಷ್ಟ್ರೀಯ ಮಾನವಹಕ್ಕುಗಳಿಗೆ ಸಂಬಂಧಿಸಿದ್ದೆಂಬ ಮಾನ್ಯತೆ, ಅದರ ರದ್ದತಿಯ ಗುರಿ ಹೊಂದಿರುವ, ಅಂತರರಾಷ್ಟ್ರೀಯ ಹಾಗೂ ಪ್ರಾದೇಶಿಕ ದಸ್ತಾವೇಜುಗಳಲ್ಲಿ ಪ್ರತಿಫಲನಗೊಂಡಿದೆ. ಇವುಗಳೆಂದರೆ: ಅಂತರರಾಷ್ಟ್ರೀಯ ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಒಡಂಬಡಿಕೆಯ ಎರಡನೇ ಶಿಷ್ಟಾಚಾರ (1989)(ಭಾಗ Iರ ಪ್ರಶ್ನೆ 11ನ್ನು ಭಾಗಸ್ಥ ದೇಶಗಳ ಪಟ್ಟಿಗಾಗಿ ನೋಡಿರಿ); ಅಮೇರಿಕಾ ರಾಷ್ಟ್ರಗಳ ಸಂಘಟನೆ ಅಂಗೀಕರಿಸಿರುವ, ಮಾನವಹಕ್ಕುಗಳ ಅಮೇರಿಕಾ ಒಡಂಬಡಿಕೆಯ ಶಿಷ್ಟಾಚಾರ (1990)[75] ಮತ್ತು ಯುರೋಪಿನ ಪರಿಷತ್ತಿನಿಂದ 1983ರಲ್ಲಿ ಅಂಗೀಕೃತಗೊಂಡು 1985ರಲ್ಲಿ[76] ಜಾರಿಗೊಂಡ ಮಾನವಹಕ್ಕುಗಳ ಯುರೋಪು ಒಡಂಬಡಿಕೆಯ 6ನೇ ಶಿಷ್ಟಾಚಾರ. ಈ ದಸ್ತಾವೇಜುಗಳು ಅವುಗಳನ್ನು ಸ್ಥಿರೀಕರಿಸಿರುವ ಎಲ್ಲ ರಾಷ್ಟ್ರಗಳಿಗೂ ಅನ್ವಯವಾಗುತ್ತವೆ.

## *ಕಲಮು 4.*

*ಯಾರನ್ನೂ ಗುಲಾಮಗಿರಿಯಲ್ಲಾಗಲೀ, ದಾಸ್ಯದಲ್ಲಿಯಾಗಲೀ ಇಡತಕ್ಕದ್ದಲ್ಲ. ಗಲಾಮಗಿರಿ ಮತ್ತು ದಾಸ್ಯವನ್ನು ಅವುಗಳ ಎಲ್ಲ ರೂಪಗಳಲ್ಲೂ ನಿಷೇಧಿಸತಕ್ಕದ್ದು.*

## *ಈಗಿನ ಸಂದರ್ಭದಲ್ಲಿ ಗುಲಾಮಗಿರಿಯ ಅರ್ಥವೇನು?*

ಈಗಿನ ಕಾಲದ ಗುಲಾಮಗಿರಿಯೆಂದರೆ, ಚಾರಿತ್ರಿಕವಾಗಿ ಇದ್ದಂಥಾ, ಮನುಷ್ಯನನ್ನು ಸೆರೆಹಿಡಿದು, ಸರಪಳಿಯಲ್ಲಿ ಬಂಧಿಸಿ, ಬಹಿರಂಗ ಮಾರುಕಟ್ಟೆಯಲ್ಲಿ ಮಾರುತ್ತಿದ್ದ ಪಾಶವೀ ಆಚರಣೆಯಲ್ಲ. ಒಮ್ಮೊಮ್ಮೆ ಚರಾಸ್ತಿ ವಿಕ್ರಯ ಸ್ವರೂಪದ ಗುಲಾಮಗಿರಿಯ ಕುರುಹು ಕಂಡುಬಂದಿದ್ದಾಗ್ಯೂ, ಆ ರೀತಿಯ ಗುಲಾಮಿ ವಿಕ್ರಯ ನಿಷೇಧಿಸಲ್ಪಟ್ಟು ಅನೇಕ ವರ್ಷಗಳಾಗಿವೆ, ಮತ್ತು ವಿಶ್ವದ ಪ್ರತಿಯೊಂದು ದೇಶದಲ್ಲೂ ಗುಲಾಮಗಿರಿ

ಕಾನೂನುಬಾಹಿರವಾಗಿದೆ. ಆದಾಗ್ಯೂ, ವಿಶ್ವದ ಅನೇಕ ದೇಶಗಳಲ್ಲಿ, ಮನುಷ್ಯರು ಮನುಷ್ಯರನ್ನೇ ಶೋಷಿಸುವುದನ್ನು ಪ್ರತಿಬಿಂಬಿಸುವ ದಾಸ್ಯದ ಸ್ಥಿತಿಯಲ್ಲಿ ಅನೇಕ ದಶಲಕ್ಷ ಜನರು ಬದುಕುತ್ತಿರುವುದನ್ನು ಗುರುತಿಸುವುದು ಸಾಧ್ಯವಿದೆ. ವರ್ತಮಾನದ ಗುಲಾಮಗಿರಿಯು ಮಾನವ ಘನತೆಯ ಕ್ರೂರ ನಿರಾಕರಣೆಯಾಗಿಯೇ ಉಳಿದಿದೆ. ಆರ್ಥಿಕ ಮತ್ತು ಸಾಮಾಜಿಕ ವಿನ್ಯಾಸಗಳಲ್ಲಿ, ದಾರಿದ್ರ್ಯ, ತಾರತಮ್ಯ, ಅಜ್ಞಾನ, ಪದ್ಧತಿಗಳು ಮತ್ತು ದುರಾಸೆಗಳಲ್ಲಿ ಆಳವಾಗಿ ಬೇರುಬಿಟ್ಟಿರುವ ಈ ಆಚರಣೆಗಳನ್ನು ಮೂಲೋತ್ಪಾಟನೆ ಮಾಡುವುದು ಕಠಿಣವಾದ ಕಾರ್ಯವಾಗಿ ಪರಿಣಮಿಸಿದೆ.

ಗುಲಾಮಗಿರಿಗೆ ಸರಿಸಮವಾದ ಆದರೆ ಬೇರೆ ಹೆಸರುಗಳಿಂದ ಕರೆಯಲ್ಪಡುವ ಅಂಥಾ ಆಚರಣೆಗಳು ಗುಪ್ತಾಚರಣೆಗಳಾಗಿದ್ದು, ಸಮಾಜದ ಅತ್ಯಂತ ದುರ್ಬಲ ಮತ್ತು ವಂಚಿತ ಸ್ತರಗಳನ್ನು ಬಾಧಿಸುತ್ತವೆ. ಗುಲಾಮಗಿರಿ, ಗುಲಾಮಿ ವ್ಯಾಪಾರ ಮತ್ತು ಗುಲಾಮಗಿರಿಯಂಥದೇ ಪದ್ಧತಿಗಳು ಮತ್ತು ಆಚರಣೆಗಳ ರದ್ದತಿಯ ಮೇಲಿನ ಪೂರಕ ಒಡಂಬಡಿಕೆ (1956)ಯಲ್ಲಿ[77] ಅವುಗಳನ್ನು ಸಾಲದ ದಾಸ್ಯ, ಜೀತಪದ್ಧತಿ, ಮಕ್ಕಳ ಶೋಷಣೆ ಮತ್ತು ದಾಸ್ಯಪದ್ಧತಿಯ ಮದುವೆಗಳೆಂದು ವ್ಯಾಖ್ಯಾನಿಸಲಾಗಿದೆ. ಸಾಲದ ದಾಸ್ಯವೆಂದರೆ, ಸಾಲಕ್ಕೆ ವ್ಯಕ್ತಿಗತ ಸೇವೆಯನ್ನು ವಿನಿಮಯ ಮಾಡಿಕೊಳ್ಳುವ, ಮತ್ತು ಆ ರೀತಿಯಲ್ಲಿ ಸಾಲವನ್ನು ತೀರಿಸುವುದರಿಂದಾಗಿ ಉಂಟಾದ ಸ್ಥಿತಿ. ಅದು ಅನೇಕ ರೂಪಗಳನ್ನು ಪಡೆಯುತ್ತದೆ ಮತ್ತು ಹಲವು ಸಾರಿ ನಿಜವಾದ ಶೋಷಣಾತ್ಮಕ ಸಂಬಂಧವನ್ನು ಮರೆಮಾಚುತ್ತದೆ. ಅದು ಮುಖ್ಯವಾಗಿ ಕೃಷಿ ಹಾಗೂ ವಲಸೆಗಾರ ಕಾರ್ಮಿಕರಿಗೆ ಸಂಬಂಧಿಸಿದ್ದು, ವಿಶ್ವದ ಅನೇಕ ಕಡೆಗಳಲ್ಲಿ ಕಂಡುಬರುತ್ತದೆ, ಮತ್ತು ಅನೇಕ ಸಂದರ್ಭಗಳಲ್ಲಿ ಪ್ರತಿರೋಧವಿಲ್ಲದ, ಗುಲಾಮಿ ಕಾರ್ಮಿಕ ತಂಡವನ್ನು ಖಾತರಿಪಡಿಸಿಕೊಳ್ಳುವ ಪದ್ಧತಿಯಾಗಿ ಮಾರ್ಪಟ್ಟಿದೆ. ಅದು ಮಗು ತಂದೆಯಿಂದ ಪಡೆದುಕೊಳ್ಳುವ ಶಾಶ್ವತ ದಾಸ್ಯವಾಗಿ ಪರಿಣಮಿಸಬಹುದು. ರೈತಾಪಿಜನರು ಈ ಪದ್ಧತಿಯ ವಿರುದ್ಧ ದಂಗೆಯೇಳಲು ಪ್ರಯತ್ನಿಸಿದ ಕೆಲವು ಸಂದರ್ಭಗಳಲ್ಲಿ ಅದನ್ನು ಹಿಂಸಾತ್ಮಕವಾಗಿ ದಮನಗೊಳಿಸಲಾಗಿದೆ. ಈ ಸಮಸ್ಯೆಯನ್ನು ಬಗೆಹರಿಸಲು ಭೂಸುಧಾರಣೆ ಒಂದು ಮೂಲಭೂತ ಅಗತ್ಯವಾಗಿದೆ.

ಕೆಲವೊಂದು ದೇಶಗಳಲ್ಲಿ ಈ ರೀತಿಯ ದಾಸ್ಯವನ್ನು ಹೋಗಲಾಡಿಸಲು ಸಹಾಯಕವಾಗಬಲ್ಲ ಭೂಸುಧಾರಣೆಗಳನ್ನು ಕೈಗೊಂಡಿದ್ದಾಗ್ಯೂ, ಗೇಣದಾರರನ್ನು ಶೋಷಿಸುವ ಜನರ ಕೈಯಲ್ಲೇ ರಾಜಕೀಯ ಅಧಿಕಾರವಿರುವುದರಿಂದಾಗಿ ತಾವೇ ಅಂಗೀಕರಿಸಿರುವ ಭೂಸುಧಾರಣಾ ಶಾಸನವನ್ನು ಜಾರಿಗೊಳಿಸಲು ಅಂಥಾ ಸರ್ಕಾರಗಳು ನಿಜವಾಗಿ ಪ್ರಯತ್ನಿಸುವುದು ಅತಿ ವಿರಳ.

ಬಾಲಕಾರ್ಮಿಕರ ಶೋಷಣೆ ಒಂದು ವಿಶ್ವವ್ಯಾಪಿ ಸಮಸ್ಯೆಯಾಗಿದ್ದು, ಕೆಲವು ಸಂದರ್ಭಗಳಲ್ಲಿ, ಮಕ್ಕಳ ವ್ಯಾಪಾರಕ್ಕೆ ನೇರವಾಗಿ ಸಂಬಂಧಿಸಿದೆ. ಈ ಸಮಸ್ಯೆಯ ನಿರ್ದಿಷ್ಟ ವಿಶ್ವವ್ಯಾಪಿ ಆಯಾಮಗಳನ್ನು ನಿರ್ಧರಿಸಲು ಅಗತ್ಯವಾದ,

ನಂಬಲರ್ಹವಾದ ಸಮಗ್ರ ಅಂಕೆ ಸಂಖ್ಯೆ ಮಾಹಿತಿಯ ಕೊರತೆಯಿದ್ದಾಗ್ಯೂ ಪ್ರಪಂಚದ ಮಕ್ಕಳ ಸಂಖ್ಯೆಯಲ್ಲಿ ಬಹು ಭಾಗದ ಮಕ್ಕಳು ಚಿಕ್ಕಂದಿನಿಂದಲೇ ಬಲಾತ್ಕಾರದ ದುಡಿಮೆಯಲ್ಲಿ ತೊಡಗಿಸಲ್ಪಟ್ಟಿದ್ದಾರೆಂಬುದು ಐ.ಎಲ್.ಓ.ದ ಅಧ್ಯಯನಗಳಿಂದ ದೃಢಪಟ್ಟಿದೆ. ಬಾಲಕಾರ್ಮಿಕ ವ್ಯವಸ್ಥೆ ಹೆಚ್ಚಾಗಿ ಬಲಾತ್ಕಾರದ ದುಡಿಮೆಯ ಉಲ್ಬಣಾವಸ್ಥೆಯೆಂದು ಪರಿಗಣಿಸಲ್ಪಟ್ಟಿದೆ. ಕೆಲಸದ ಪರಿಸರ ಅನೇಕ ಕಡೆ ತುಂಬಾ ಕೆಟ್ಟದಾಗಿದ್ದು ಸಂಭಾವನೆ ಅತ್ಯಂತ ಕನಿಷ್ಠ ಅಥವಾ ಸೊನ್ನೆಯಾಗಿರುತ್ತದೆ. ಆ ರೀತಿಯ ಮಕ್ಕಳು ಹೆಚ್ಚಾಗಿ ಶಿಕ್ಷಣದಿಂದ ವಂಚಿತರಾಗುತ್ತಾರೆ ಮತ್ತು ಅವರ ಆರೋಗ್ಯ ಮತ್ತು ಯೋಗಕ್ಷೇಮವನ್ನು ಹಾಳುಮಾಡುವಂಥ ಪರಿಸ್ಥಿತಿಗೆ ಒಳಪಟ್ಟಿರುತ್ತಾರೆ.

ಬಾಲಕಾರ್ಮಿಕ ವ್ಯವಸ್ಥೆ, ಮಕ್ಕಳ ಮಾರಾಟ, ಬಾಲ ವೇಶ್ಯಾವೃತ್ತಿ ಮತ್ತು ಅಶ್ಲೀಲ ಸಾಹಿತ್ಯಗಳಿಗೆ ಮಕ್ಕಳ ಬಳಕೆ, ಇವುಗಳಿಗೆ ಪ್ರತಿಬಂಧಕದ ಕ್ರಮ ಕೈಗೊಳ್ಳಲು ವಿಶ್ವಸಂಸ್ಥೆಯ ವಿಶೇಷ ಕಾರ್ಯಕ್ರಮಗಳು ಕಾಳಜಿ ವಹಿಸಿವೆ (ಭಾಗ I ರ 33ನೇ ಪ್ರಶ್ನೆಯನ್ನೂ ನೋಡಿರಿ).

ಅಂಥಾ ಪದ್ಧತಿಗಳಿಂದ ನಿರ್ದಿಷ್ಟವಾಗಿ ಬಾಧಿತರಾದವರಲ್ಲಿ ಮಹಿಳೆಯರೂ ಸೇರಿದ್ದಾರೆ. ದಾಸಿ ಮದುವೆಗಳೆಂದರೆ, ಮಹಿಳೆಯರಿಗೆ ಮದುವೆಗಳನ್ನು ನಿರಾಕರಿಸುವ ಹಕ್ಕಿಲ್ಲದ ಅಥವಾ ಗಂಡನ ನಿಧನದ ನಂತರ ಅವರು ಮತ್ತೊಬ್ಬನಿಗೆ ವರ್ಗಾಯಿಸಲ್ಪಡಬಹುದಾದ ಸಂದರ್ಭಗಳಿಗೆ ಸಂಬಂಧಿಸಿದೆ. ಹೆಂಗಸರು ಮತ್ತು ಮಕ್ಕಳನ್ನು ನಿರ್ದಿಷ್ಟವಾಗಿ ಬಾಧಿಸುತ್ತಿರುವ, ಗುಲಾಮಗಿರಿಯಂಥದೇ ಇನ್ನೊಂದೆಂದರೆ ಮನುಷ್ಯನ ಮಾರಾಟದ ಪದ್ಧತಿ. ಇದು ಮನುಷ್ಯ ವ್ಯಾಪಾರವನ್ನು ಮತ್ತು ಇತರರ ವೇಶ್ಯಾವೃತ್ತಿಯ ಶೋಷಣೆಯನ್ನು ಹತ್ತಿಕ್ಕುವ, ಈವರೆಗೆ ಕೇವಲ ಎಪ್ಪತ್ತು ದೇಶಗಳಿಂದ[78] ಮಾತ್ರ ಸ್ಥಿರೀಕರಣಗೊಂಡ ಒಡಂಬಡಿಕೆ (1949)ಯಲ್ಲಿ ಪ್ರಸ್ತಾಪಗೊಂಡಿದೆ. ಪ್ರವಾಸೋದ್ಯಮದ ಉತ್ತೇಜನದ ನೆಪದಲ್ಲಿ ಈ ಪದ್ಧತಿಗಳು ಲೈಂಗಿಕ ಶೋಷಣೆಯ ಉದ್ದಿಶ್ಯದಿಂದ ಇತ್ತೀಚಿನ ವರ್ಷಗಳಲ್ಲಿ ಚಿಗುರಿಕೊಳ್ಳುತ್ತಿರುವುದು ನಿರ್ದಿಷ್ಟ ಕಳವಳದ ವಿಚಾರವಾಗಿದೆ.

## *ಅದರ ಎಲ್ಲ ರೂಪಗಳಲ್ಲೂ ಗುಲಾಮಗಿರಿಯನ್ನು ತೊಡೆದುಹಾಕಲು ಏನು ಮಾಡಬಹುದು ?*

ಗುಲಾಮಗಿರಿ ಮತ್ತು ಅಂಥದೇ ಪದ್ಧತಿಗಳು ಬಹಳ ತೊಡಕಿನ ಸಮಸ್ಯೆಗಳಾಗಿದ್ದು, ಅನೇಕ ಜನರು ಅವುಗಳ ಇರುವಿಕೆಯನ್ನೇ ಅಲ್ಲಗಳೆಯುವುದರಿಂದಾಗಿ ಇನ್ನಷ್ಟು ಜಟಿಲಗೊಂಡಿವೆ. ಗುಲಾಮಗಿರಿಯ ಮೇಲಿನ ಕಾರ್ಯತಂಡಕ್ಕೆ ಒಪ್ಪಿಸಲಾದ ಪುರಾವೆಗಳಿಂದಾಗಿ ವಿಶ್ವಸಂಸ್ಥೆಗೆ ಅಂಥಾ ಸನ್ನಿವೇಶಗಳ ಬಗ್ಗೆ ಮಾಹಿತಿ ದೊರಕುತ್ತದೆ. ಅದಕ್ಕೆ ವರದಿ ಸಲ್ಲಿಸುವ ಮಾನವಹಕ್ಕುಗಳ ಆಯೋಗದ ಸಹಾಯಕ ಘಟಕವಾದ ಅಲ್ಪಸಂಖ್ಯಾತರ ತಾರತಮ್ಯ ಪ್ರತಿಬಂಧಕ ಮತ್ತು ರಕ್ಷಣಾ ಉಪ ಆಯೋಗದ ಐದು ಸದಸ್ಯರಿಂದ ಈ ಕಾರ್ಯತಂಡ ಕೂಡಿದೆ. ಗುಲಾಮಗಿರಿ ರದ್ದತಿಯ ಪೂರಕ

ಒಡಂಬಡಿಕೆಯನ್ನು 110ಕ್ಕೂ ಹೆಚ್ಚು ರಾಷ್ಟ್ರಗಳು ಸ್ಥಿರೀಕರಿಸಿವೆ (ಟಿಪ್ಪಣಿ 77ನ್ನು ನೋಡಿ). ಆದೇನಿದ್ದರೂ ಅವುಗಳ ಅನುಷ್ಠಾನವು ರಾಷ್ಟ್ರೀಯ ಸರ್ಕಾರಗಳನ್ನವಲಂಬಿಸಿದೆ. ಒಡಂಬಡಿಕೆಯ ಅನುಷ್ಠಾನಕ್ಕಾಗಿ ಒಂದು ನೂತನ ಪರಿಣಾಮಕಾರಿ ಕ್ರಿಯಾವಿನ್ಯಾಸವನ್ನು ರೂಪಿಸಿ ಇದನ್ನು ಇತ್ಯರ್ಥಕವಾಗಿ ಪ್ರೋತ್ಸಾಹಿಸುವುದು ಅಗತ್ಯ. ಈ ಪದ್ಧತಿಗಳ ನಿರ್ಮೂಲನದ ವಿಚಾರದಲ್ಲಿ ಗಣನೀಯ ಪ್ರಗತಿಯ ಸಾಧನೆ, ರಾಜಕೀಯ ಇಚ್ಛಾಶಕ್ತಿ, ವ್ಯಾಪಕ ಶಿಕ್ಷಣ, ಸಾಮಾಜಿಕ ಸುಧಾರಣೆ ಮತ್ತು ಆರ್ಥಿಕಾಭಿವೃದ್ಧಿ-ಇವುಗಳನ್ನು ಅವಲಂಬಿಸಿದೆ.

## ಕಲಮು 5.

*ಯಾರನ್ನೂ ಚಿತ್ರಹಿಂಸೆಗೆ ಅಥವಾ ಕ್ರೂರ, ಅಮಾನುಷ ಅಥವಾ ಹೀನಾಯವಾದ ನಡವಳಿಕೆಗೆ ಅಥವಾ ಶಿಕ್ಷೆಗೆ ಒಳಪಡಿಸತಕ್ಕದ್ದಲ್ಲ.*

### *ಚಿತ್ರಹಿಂಸೆಯೆಂದರೇನು ?*

10ನೇ ಡಿಸೆಂಬರ್ 1984ರಲ್ಲಿ ವಿಶ್ವಸಂಸ್ಥೆಯ ಮಹಾಧಿವೇಶನದಲ್ಲಿ, ಒಟ್ಟು ಅಭಿಪ್ರಾಯದ ಮೇಲೆ ಅಂಗೀಕೃತಗೊಂಡ 'ಚಿತ್ರಹಿಂಸೆ ಮತ್ತು ಇನ್ನಿತರ ಕ್ರೂರ, ಅಮಾನುಷ ಅಥವಾ ಹೀನಾಯವಾದ ನಡವಳಿಕೆ ಅಥವಾ ಶಿಕ್ಷೆಗಳ ವಿರೋಧಿ ಒಡಂಬಡಿಕೆ' ಚಿತ್ರಹಿಂಸೆಯನ್ನು, 'ಅವನಿಂದ ಅಥವಾ ಮೂರನೇ ವ್ಯಕ್ತಿಯಿಂದ ಮಾಹಿತಿ ಅಥವಾ ತಪ್ಪೊಪ್ಪಿಗೆ ಪಡೆಯುವುದಕ್ಕಾಗಿ, ಅವನಾಗಲೀ ಅಥವಾ ಮೂರನೇ ವ್ಯಕ್ತಿಯಾಗಲೀ ಮಾಡಿದ ಅಥವಾ ಮಾಡಿರುವುದಾಗಿ ಸಂಶಯಪಟ್ಟಿರುವ ತಪ್ಪಿಗೆ ಶಿಕ್ಷೆ ವಿಧಿಸುವುದಕ್ಕಾಗಿ, ಅಥವಾ ಅವನನ್ನು ಅಥವಾ ಮೂರನೇ ವ್ಯಕ್ತಿಯನ್ನು ಬೆದರಿಸುವ ಅಥವಾ ಬಲಾತ್ಕರಿಸುವುದಕ್ಕಾಗಿ, ಅಥವಾ ಯಾವುದೇ ಬಗೆಯ ತಾರತಮ್ಯ ಆಧಾರಿತವಾದ ಕಾರಣಕ್ಕಾಗಿ, ಉದ್ದೇಶಪೂರ್ವಕವಾಗಿ ಒಬ್ಬ ವ್ಯಕ್ತಿಯನ್ನು ಅತಿಯಾದ ದೈಹಿಕ ಅಥವಾ ಮಾನಸಿಕ ನೋವು ಅಥವಾ ಯಾತನೆಯ ಶಿಕ್ಷೆಗೆ ಒಳಪಡಿಸುವ ಕೃತ್ಯ' ಎಂದು ವ್ಯಾಖ್ಯಾನಿಸಿದೆ.

ಒಬ್ಬ ಸಾರ್ವಜನಿಕ ಅಧಿಕಾರಿಯಿಂದಾಗಲೀ ಅಥವಾ ಅಧಿಕಾರಸ್ಥಾನದಲ್ಲಿ ಕಾರ್ಯನಿರ್ವಹಿಸುತ್ತಿರುವ ಯಾವುದೇ ವ್ಯಕ್ತಿಯಿಂದಾಗಲೀ ಅಂಥಾ ನೋವು ಅಥವಾ ಯಾತನೆಯ ಶಿಕ್ಷೆಗಳು ಜಾರಿಗೊಂಡಾಗ, ನ್ಯಾಯಬದ್ಧ ಅಪ್ಪಣೆಗಳಲ್ಲಿ ಅಂತರ್ಗತವಾದ, ಅಥವಾ ಆನುಷಂಗಿಕವಾದ, ಅಥವಾ ಅದರಿಂದಲೇ ಉಂಟಾಗಬಹುದಾದ ನೋವು ಮತ್ತು ಯಾತನೆಗಳನ್ನು ಚಿತ್ರಹಿಂಸೆಯ ವ್ಯಾಖ್ಯಾನ ಒಳಗೊಳ್ಳುವುದಿಲ್ಲ (ಕಲಮು 1). ವಿಯೆನ್ನಾ ಘೋಷಣೆ ಮತ್ತು ಕ್ರಿಯಾ ಯೋಜನೆ (1993) ಮನುಷ್ಯನ ಘನತೆಯನ್ನು ನಾಶಪಡಿಸುವ ಮತ್ತು ಅದರಿಂದಾಗಿ ಸಂತ್ರಸ್ತರಾದವರು ತಮ್ಮ ಜೀವನವನ್ನು ಹಾಗೂ ಚಟುವಟಿಕೆಗಳನ್ನು ಮುಂದುವರಿಸದಂತೆ ಅವರ ಸಾಮರ್ಥ್ಯವನ್ನು ಕುಗ್ಗಿಸುವ ಪರಿಣಾಮದ,

ಚಿತ್ರಹಿಂಸೆಯ ಕೃತ್ಯವು ಮಾನವ ಘನತೆಯ ಅತಿ ಕ್ರೂರ ಉಲ್ಲಂಘನೆಗಳಲ್ಲೊಂದು ಎಂದು ಒತ್ತಿ ಹೇಳಿದೆ (ಪರಿಚ್ಛೇದ 55).

### *ಕ್ರೂರ, ಅಮಾನುಷ, ಹೀನಾಯ ನಡವಳಿಕೆಯೆಂಬುದರ ಅರ್ಥವೇನು?*

ಈ ಶಬ್ದ ಜೋಡಣೆಗೆ ಅಂತರರಾಷ್ಟ್ರೀಯವಾಗಿ ಒಪ್ಪಿಗೆ ಪಡೆದ ವ್ಯಾಖ್ಯಾನ ಇನ್ನೂ ಲಭ್ಯವಿಲ್ಲ. ಅಂತರರಾಷ್ಟ್ರೀಯ ಸಂಘಸಂಸ್ಥೆಗಳು ಹಾಗೂ ತಜ್ಞರು, ಈ ಶಬ್ದವೃಂದದಲ್ಲಿ, ದೈಹಿಕ ಶಿಕ್ಷೆಗಳು, ಕತ್ತಲೆ ಕೋಣೆಗಳಲ್ಲಿಡುವುದು, ಬೇಡಿಗಳು ಅಥವಾ ಇನ್ನಿತರ ನೋವುಂಟುಮಾಡುವ ಉಪಕರಣಗಳಿಂದ ನಿರ್ಬಂಧಿಸುವುದು, ಒತ್ತಡದ ಸ್ಥಿತಿಯಲ್ಲಿ ಪ್ರಶ್ನಿಸುವುದು, ಕೈದಿಗಳ ಮೇಲೆ ಜೀವವೈದ್ಯಕೀಯ ಪ್ರಯೋಗಗಳನ್ನು ಮಾಡುವುದು, ಅಥವಾ ಮಾದಕ ಔಷಧಿಗಳನ್ನು ಉಪಯೋಗಿಸುವುದು, ಪುರುಷತ್ವಹರಣ, ಹೆಣ್ಣಿನ ಗುಪ್ತಾಂಗಗಳ ಛೇದನದಂಥಾ ಪದ್ಧತಿಗಳು, ಆಹಾರದ ಕಡಿತ, ಏಕಾಂತವಾಸ, ಬಲಾತ್ಕಾರದ ಆಹಾರ ಸೇವನೆ ಮುಂತಾದವುಗಳನ್ನು ವಿಶೇಷವಾಗಿ ಹೆಸರಿಸಿದ್ದಾರೆ.

### *ಚಿತ್ರಹಿಂಸೆ ಎಲ್ಲಿ ನಡೆಯುತ್ತಿದೆ, ಹಾಗೆ ಮಾಡಲು ಕಾರಣವೇನು ಮತ್ತು ಚಿತ್ರಹಿಂಸೆ ಮಾಡುತ್ತಿರುವವರು ಯಾರು?*

ಚಿತ್ರಹಿಂಸೆಗೆ ಭೌಗೋಳಿಕ ಎಲ್ಲೆಗಳೇನಿಲ್ಲ, ಅಥವಾ ಅದು ಒಂದೇ ಒಂದು ರಾಜಕೀಯ ಸಿದ್ಧಾಂತ ಅಥವಾ ಅರ್ಥವ್ಯವಸ್ಥೆಗೆ ಆರೋಪಿಸುವಂಥಾದ್ದಲ್ಲ. ಸರ್ಕಾರೇತರ ಸಂಸ್ಥೆಗಳಾದ ಅಂತರರಾಷ್ಟ್ರೀಯ ಕ್ಷಮಾದಾನ ಸಂಸ್ಥೆ ಮತ್ತು ಅಂತರರಾಷ್ಟ್ರೀಯ ನ್ಯಾಯಶಾಸ್ತ್ರಜ್ಞರ ಆಯೋಗಗಳು ವಿಶ್ವದ ಎಲ್ಲೆಡೆಗಳಿಂದ ಸಾವಿರಾರು ಚಿತ್ರಹಿಂಸೆಯ ಪ್ರಕರಣಗಳನ್ನು ಸಾಬೀತುಗೊಳಿಸಿವೆ. ಚಿತ್ರಹಿಂಸೆ ಈಗ ಕೆಲವೇ ವಿಂಗಡಿತ ಘಟನೆಗಳಲ್ಲಿ ನಡೆದ ಶಾಸನಾತ್ಮಕ ಸಂಯಮದ ಸಾಂದರ್ಭಿಕ ಲೋಪ ಮಾತ್ರವಾಗಿಲ್ಲ, ಬದಲು ಅದು, ಸರ್ಕಾರದ ಉನ್ನತಾಧಿಕಾರಿಗಳು, ತಮ್ಮ ಅಧಿಕಾರದ ಅತಿರೇಕವನ್ನು ತಡೆಯುವ ಶಾಸನಾತ್ಮಕ ಸಂಯಮಗಳನ್ನು ಹಾಳುಮಾಡಲು ಉದ್ದೇಶಪೂರ್ವಕವಾಗಿ ಮಾಡುವ ಆಯ್ಕೆಯನ್ನು ಪ್ರತಿಬಿಂಬಿಸುತ್ತದೆ. ಕೆಲವು ಸರ್ಕಾರಗಳು (ಕೆಲವು ದಂಗೆಕೋರ ಚಳವಳಿಗಳು) ಚಿತ್ರಹಿಂಸೆಯನ್ನು, ಮಾಹಿತಿ ಪಡೆಯುವ, ತಪ್ಪೊಪ್ಪಿಗೆಗೆ ಬಲಾತ್ಕರಿಸುವ ಮತ್ತು ಸಾರ್ವಜನಿಕರನ್ನು ಭಯೋತ್ಪಾದನೆಗೊಳಪಡಿಸುವ ಸಾಧನವಾಗಿ ಬಳಕೆ ಮಾಡುತ್ತವೆ.

### *ಚಿತ್ರಹಿಂಸೆಯನ್ನು ಸಮರ್ಥಿಸುವುದು ಸಾಧ್ಯವೇ?*

ನೈತಿಕವಾಗಿಯಾಗಲೀ, ಶಾಸನಾತ್ಮಕವಾಗಿಯಾಗಲೀ ಸಾಧ್ಯವಿಲ್ಲ. ಬಹುಪಾಲು ರಾಷ್ಟ್ರೀಯ ಶಾಸನ ವ್ಯವಸ್ಥೆಗಳು ಹಾಗೂ ಅಂತರರಾಷ್ಟ್ರೀಯ ಶಾಸನ ಚಿತ್ರಹಿಂಸೆಯ ಉಪಯೋಗವನ್ನು ಸ್ಪಷ್ಟವಾಗಿ ನಿಷೇಧಿಸಿವೆ. ಚಿತ್ರಹಿಂಸೆಯನ್ನು ನಿಷೇಧಿಸುವ,


ಸರಿ... ಈಗ...
"ಸಹಜ ಸಾವು" ಅಂತ ಹೇಳ್ತೀಯಾ
PLANTU

ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆಯ 5ನೇ ಕಲಮಿಗೆ ವಿಶ್ವಸಂಸ್ಥೆಯ ಎಲ್ಲಾ ಸದಸ್ಯ ರಾಷ್ಟ್ರಗಳು ಬದ್ಧವಾಗಿವೆ. ವಿಶೇಷ ಸಂದರ್ಭಗಳಲ್ಲಿ ಚಿತ್ರಹಿಂಸೆ ಸಮರ್ಥನೀಯವೆಂದು ಕೆಲವರು ವಾದಿಸುತ್ತಾರೆ. ಅಮಾಯಕ ಜನರ ಜೀವವನ್ನು ಅಪಾಯಕ್ಕೆ ಒಳಪಡಿಸಿದ ಭಯೋತ್ಪಾದಕನಿಂದ ಮಾಹಿತಿ ಪಡೆಯಲು, ಒಂದು ರಾಷ್ಟ್ರ ಸಾಧ್ಯವಿರುವ ಎಲ್ಲ ವಿಧಾನಗಳನ್ನು ಬಳಸಬಾರದೇಕೆ-ಎಂದು ಅವರು ಪ್ರಶ್ನಿಸುತ್ತಾರೆ. ಚಿತ್ರಹಿಂಸೆಯನ್ನು ಅಸಂದಿಗ್ಧವಾಗಿ ನಿಷೇಧಿಸುವ ನೈತಿಕ ಮತ್ತು ಶಾಸನಾತ್ಮಕ ತತ್ವಗಳ ಹೊರತಾಗಿ, ಚಿತ್ರಹಿಂಸೆಯ ಪರವಾದ ವಾದವು ಅನೇಕ ರೀತಿಯ ತಪ್ಪು ತಿಳಿವಳಿಕೆಯಿಂದ ಕೂಡಿದೆ: ಮೊದಲನೆಯದಾಗಿ, ಚಿತ್ರಹಿಂಸೆಯು, ಸುಳ್ಳು ತಪ್ಪೊಪ್ಪಿಗೆಗಳಿಗೆ ಮತ್ತು ತಪ್ಪು ಮಾಹಿತಿಗಳಿಗೆ ಕಾರಣವಾಗಬಹುದು. ಎರಡನೆಯದಾಗಿ, ಚಿತ್ರಹಿಂಸೆ ನ್ಯಾಯಯುತ ಶಿಕ್ಷೆಯ ತತ್ವಗಳಿಗೆ ವಿರುದ್ಧವಾಗಿದೆ. ಮೂರನೆಯದಾಗಿ, ಒಂದು ಪ್ರಕರಣದಲ್ಲಿ ಆದ ಚಿತ್ರಹಿಂಸೆಯ ಉಪಯೋಗವು ಇನ್ನೂ ದೊಡ್ಡ ಪ್ರಮಾಣದಲ್ಲಿ ಅದರ ದುರುಪಯೋಗಕ್ಕೆ ಮತ್ತು ರಾಷ್ಟ್ರಗಳು ತಮ್ಮ ಸ್ವೇಚ್ಛೆಗೆ ತಕ್ಕಂತೆ ಅದನ್ನು ಬಳಕೆ ಮಾಡಲು ಪೂರ್ವನಿದರ್ಶನವನ್ನು ಸೃಷ್ಟಿಸಲು ಕಾರಣವಾಗಬಹುದು.

## *ಚಿತ್ರಹಿಂಸೆಯನ್ನು ನಿಲ್ಲಿಸಲು ಏನು ಮಾಡಬಹುದು?*

ಬಂಧಿತನಿಗೆ ಪೂರ್ಣ ಕಾನೂನಿನ ಹಕ್ಕುಗಳನ್ನು ಮಂಜೂರು ಮಾಡುವುದು ಚಿತ್ರಹಿಂಸೆಯನ್ನು ತಡೆಗಟ್ಟುವ ಸ್ಪಷ್ಟ ವಿಧಾನ. ಒಂದು ಸ್ವತಂತ್ರ ನ್ಯಾಯಾಂಗ ಮತ್ತು ಬಂಧಿತರಿಗೆ ಅವನ ಅಥವಾ ಅವಳ ಆಯ್ಕೆಯ ಕಾನೂನಿನ ಮತ್ತು ವೈದ್ಯಕೀಯ ಸಲಹೆ ಪಡೆಯುವುದಕ್ಕೆ ಸಮರ್ಪಕ ಅವಕಾಶಗಳು ಅತ್ಯಗತ್ಯ. ಚಿತ್ರಹಿಂಸೆಯ ಬಗ್ಗೆ ಅಂತರರಾಷ್ಟ್ರೀಯ ಸ್ತರದಲ್ಲಿ ಪ್ರಚಾರ, ಚಿತ್ರಹಿಂಸೆಯ ಅಪಾಯದಲ್ಲಿರುವ ವ್ಯಕ್ತಿಯ ಪರವಾಗಿ ಅಂತರ-ಸರ್ಕಾರಿ ಮತ್ತು ಸರ್ಕಾರೇತರ ಸಂಘಟನೆಗಳ ಮಧ್ಯಪ್ರವೇಶ, ರಾಷ್ಟ್ರೀಯ ನ್ಯಾಯಾಂಗ ವ್ಯವಸ್ಥೆಯೇ ಒಬ್ಬ ವ್ಯಕ್ತಿಗೆ ಸಮರ್ಪಕವಾದ ರಕ್ಷಣೆಯನ್ನು ಒದಗಿಸುವುದನ್ನು ಖಾತರಿಪಡಿಸುವುದಕ್ಕೆ ಸಹಾಯವಾಗುತ್ತದೆ. ಚಿತ್ರಹಿಂಸೆಗೆ ಗುರಿಯಾದವರ ಸಂಪರ್ಕಕ್ಕೆ ಪದೇ ಪದೇ ಬರುವವರು ಮತ್ತು ಚಿತ್ರಹಿಂಸೆಯ ಪ್ರಕರಣಗಳು ಬಹಿರಂಗಗೊಳ್ಳುವುದು ಯಾರ ಧೈರ್ಯದ ಮೇಲೆ ಅವಲಂಬಿಸಿದೆಯೋ ಅಂಥಾ ಶಾಸನಾಧಿಕಾರಿಗಳು, ನ್ಯಾಯವಾದಿಗಳು, ವೈದ್ಯಕೀಯ ಕರ್ಮಚಾರಿಗಳ ಮಾರ್ಗದರ್ಶನ ಮತ್ತು ರಕ್ಷಣೆಗಾಗಿ ನೈತಿಕ ಮತ್ತು ನಡವಳಿಕೆಗಳ ಸಂಹಿತೆಯನ್ನು ರೂಪಿಸಲಾಗಿದೆ.

## *ಚಿತ್ರಹಿಂಸೆಯ ವಿರುದ್ಧದ ವಿಶ್ವಸಂಸ್ಥೆಯ ಒಡಂಬಡಿಕೆಯ ಮುಖ್ಯವಾದ ಕಲಮುಗಳೇನು?*

10ನೇ ಡಿಸೆಂಬರ್ 1984ರಲ್ಲಿ ವಿಶ್ವಸಂಸ್ಥೆಯ ಮಹಾಧಿವೇಶನವು ಸ್ವೀಕಾರ ಮಾಡಿರುವ, ಚಿತ್ರಹಿಂಸೆ ಮತ್ತು ಇನ್ನಿತರ ಕ್ರೂರ, ಅಮಾನುಷ ಅಥವಾ ಹೀನಾಯ

ವರ್ತನೆ ಅಥವಾ ಶಿಕ್ಷೆಗಳ ವಿರುದ್ಧದ ಒಡಂಬಡಿಕೆ, ಇಪ್ಪತ್ತು ರಾಷ್ಟ್ರಗಳ ಸ್ಥಿರೀಕರಣದ ನಂತರ 26ನೇ ಜೂನ್ 1987ರಲ್ಲಿ ಜಾರಿಗೊಂಡಿದೆ. ಇಲ್ಲಿಯವರೆಗೆ ತೊಂಭತ್ತಕ್ಕೂ ಹೆಚ್ಚು ದೇಶಗಳು[79] ಒಡಂಬಡಿಕೆಯನ್ನು ಸ್ಥಿರೀಕರಿಸಿವೆ.

ಭಾಗಸ್ಥ ದೇಶಗಳು, ಚಿತ್ರಹಿಂಸೆಯನ್ನು ಪ್ರತಿಬಂಧಿಸಲು ಮತ್ತು ಅದನ್ನು ಶಿಕ್ಷಾರ್ಹ ಅಪರಾಧವನ್ನಾಗಿಸಲು ಪರಿಣಾಮಕಾರಿ ಶಾಸನಾತ್ಮಕ, ಆಡಳಿತಾತ್ಮಕ, ನ್ಯಾಯಿಕ ಮತ್ತು ಇನ್ನಿತರ ಕ್ರಮಗಳನ್ನು ತೆಗೆದುಕೊಳ್ಳುವುದಾಗಿ ಒಪ್ಪಿಕೊಳ್ಳುತ್ತವೆ. ಈ ಬಾಧ್ಯತೆಯಿಂದ ತಪ್ಪಿಸಿಕೊಳ್ಳಲು ಒಡಂಬಡಿಕೆ ಅವಕಾಶ ಕೊಡುವುದಿಲ್ಲ; ಮತ್ತು ಯುದ್ಧಪರಿಸ್ಥಿತಿ, ಯುದ್ಧ ಭಯದ ಸ್ಥಿತಿ, ಆಂತರಿಕ ರಾಜಕೀಯ ಅಭದ್ರತೆ, ಅಥವಾ ಬೇರೆ ಯಾವುದೇ ಸಾರ್ವಜನಿಕ ತುರ್ತುಸ್ಥಿತಿಯ ಕಾರಣವನ್ನು ಆವಾಹಿಸಿ, ಚಿತ್ರಹಿಂಸೆಯನ್ನು ಸಮರ್ಥಿಸುವ ಯಾವುದೇ ಸಂದರ್ಭಕ್ಕೆ ಅವಕಾಶ ಕಲ್ಪಿಸಿಲ್ಲ. 'ವಿಶ್ವವ್ಯಾಪಿ ಶಿಕ್ಷಾಧಿಕಾರ ವ್ಯಾಪ್ತಿ'ಯನ್ನು ಸ್ಥಾಪಿಸುವ ಕಲಮುಗಳನ್ನು ಮಾಡಲಾಗಿದೆ. ಅಪರಾಧಿ ಯಾವುದೇ ದೇಶದಲ್ಲಿದ್ದರೂ ಅವನನ್ನು ಆ ದೇಶವೇ ಶಿಕ್ಷೆಗೆ ಒಳಪಡಿಸಬೇಕು ಅಥವಾ ಬೇರೆಯವರಿಗೆ ಒಪ್ಪಿಸಬೇಕೆಂಬುದೇ ಅದರ ಅರ್ಥ. ಚಿತ್ರಹಿಂಸೆಯಿಂದ ನೊಂದವರ ಸುಧಾರಣೆ, ಪುನರ್ವಸತಿಯ ಸಾಧನ ಸಾಮಗ್ರಿಗಳ ಪೂರೈಕೆಯೂ ಸೇರಿದಂತೆ ನ್ಯಾಯವಾದ ಮತ್ತು ಸಮರ್ಪಕವಾದ ಪರಿಹಾರ ಪಡೆಯುವ ಹಕ್ಕು ಚಲಾವಣೆಯನ್ನು ಖಾತರಿಪಡಿಸಲು, ಭಾಗಸ್ಥ ದೇಶಗಳು ಶಾಸನಾತ್ಮಕ ಅವಕಾಶಗಳನ್ನು ಅವಶ್ಯವಾಗಿ ಮಾಡಿಕೊಡಬೇಕು.

### *ಚಿತ್ರಹಿಂಸೆಯ ವಿರುದ್ಧದ ಒಡಂಬಡಿಕೆಯ ಅನುಷ್ಠಾನವನ್ನು ಯಾವ ಕ್ರಿಯಾವಿನ್ಯಾಸ ಖಾತರಿಪಡಿಸುತ್ತದೆ?*

ತಮ್ಮ ವ್ಯಕ್ತಿಗತ ಸ್ಥಾನಬಲದಿಂದ ಕಾರ್ಯನಿರ್ವಹಿಸುವ ಹತ್ತು ಜನ ತಜ್ಞರಿಂದ ಕೂಡಿದ ಚಿತ್ರಹಿಂಸೆಯ ವಿರುದ್ಧದ ಸಮಿತಿಯ ಸ್ಥಾಪನೆಗೆ ಒಡಂಬಡಿಕೆ ಅವಕಾಶ ಮಾಡಿದೆ. ದೇಶಗಳಿಂದ ನಾಮನಿರ್ದೇಶಿತವಾದ ಪಟ್ಟಿಯಿಂದ ಭಾಗಸ್ಥ ದೇಶಗಳು ಸಮಿತಿಯ ಸದಸ್ಯರನ್ನು ರಹಸ್ಯ ಮತದಾನದ ಮೂಲಕ ಆರಿಸುತ್ತಾರೆ.

ಈ ಕೆಳಗಿನ ರೀತಿಯಲ್ಲಿ ಒಡಂಬಡಿಕೆಯ ಅನುಷ್ಠಾನವನ್ನು ನಿರ್ದೇಶಿಸಲು ಸಮಿತಿ ಸಮರ್ಥವಾಗಿದೆ. ಅದು ಭಾಗಸ್ಥ ರಾಷ್ಟ್ರಗಳು ಒಡಂಬಡಿಕೆಯನ್ನು ಅನುಷ್ಠಾನಕ್ಕೆ ತರಲು ತಾವು ತೆಗೆದುಕೊಂಡಿರುವ ಕ್ರಮಗಳ ಬಗ್ಗೆ ಸಲ್ಲಿಸುವ ವರದಿಗಳನ್ನು ಪರಿಶೀಲಿಸುತ್ತದೆ. ಸಮಿತಿಯ ಈ ಕೆಲಸವನ್ನು ಸಂಬಂಧಿಸಿದ ದೇಶ ಅಥವಾ ದೇಶಗಳು ಮಾನ್ಯ ಮಾಡಿ ಘೋಷಣೆಗಳನ್ನು ಮಾಡಿದ್ದಲ್ಲಿ, ಅದು ವ್ಯಕ್ತಿಗಳಿಂದ (ಅಥವಾ ವ್ಯಕ್ತಿಗಳ ಪರವಾಗಿ) ಮತ್ತು ದೇಶಗಳಿಂದ ಉಲ್ಲಂಘನೆಗಳ ಆರೋಪದ ದೂರುಗಳನ್ನು ಸ್ವೀಕರಿಸಿ ಪರಿಶೀಲಿಸುತ್ತದೆ. ಇಲ್ಲಿಯವರೆಗೆ ನಲವತ್ತು ರಾಷ್ಟ್ರಗಳು ಎರಡೂ ಘೋಷಣೆಗಳನ್ನು ಮಾಡಿವೆ.[80] ವ್ಯವಸ್ಥಿತ ಚಿತ್ರಹಿಂಸೆಯ ಸನ್ನಿವೇಶಗಳ ಆರೋಪದ ಬಗ್ಗೆ ಸಂಬಂಧಿಸಿದ ಭಾಗಸ್ಥ ದೇಶದ ಸಹಕಾರದೊಂದಿಗೆ ಗೌಪ್ಯ ವಿಚಾರಣೆಗಳ ಬಗ್ಗೆ ಉಪಕ್ರಮ ಕೈಗೊಳ್ಳಲು ಸಮಿತಿಗೆ ಅಧಿಕಾರವಿದೆ. ಪರಿಶೀಲನೆಗೆ

ಒಳಪಟ್ಟ ಭಾಗಸ್ಥ ದೇಶಕ್ಕೆ ಸಮಿತಿಯ ತೀರ್ಮಾನಗಳನ್ನು ಕಳಿಸಲಾಗುವುದು ಮತ್ತು ಸಂಬಂಧಿಸಿದ ದೇಶದೊಡನೆ ಸಮಾಲೋಚಿಸಿ, ವಿಚಾರಣೆಯ ಸಂಕ್ಷಿಪ್ತ ವರದಿಯನ್ನು ವಿಶ್ವಸಂಸ್ಥೆಯ ಮಹಾಧಿವೇಶನಕ್ಕೆ ಸಮಿತಿಯು ಸಲ್ಲಿಸುವ ವಾರ್ಷಿಕ ವರದಿಯಲ್ಲಿ ಸೇರಿಸಬಹುದು.

ಭಾಗಸ್ಥ ದೇಶಗಳಲ್ಲಿ ಬಂಧನಗಳು ನಡೆದಿರುವ ಭೂಭಾಗಕ್ಕೆ ತಜ್ಞರು ನಿಯಮಿತವಾಗಿ ಭೇಟಿ ನೀಡುವ ಒಂದು ನಿವಾರಕ ವ್ಯವಸ್ಥೆಯ ಸ್ಥಾಪನೆಗಾಗಿ ಈ ಒಡಂಬಡಿಕೆಗೆ ಒಂದು ಐಚ್ಛಿಕ ಶಿಷ್ಟಾಚಾರ ತಯಾರಿಯಲ್ಲಿದೆ.

### *ಚಿತ್ರಹಿಂಸೆಯನ್ನು ತಡೆಯಲು ಬೇರಾವುದಾದರೂ ವಿಶ್ವಸಂಸ್ಥೆಯ ಕ್ರಿಯಾವಿನ್ಯಾಸವಿದೆಯೇ ?*

1985ರಿಂದ ಕಾರ್ಯನಿರತವಾಗಿರುವ ಚಿತ್ರಹಿಂಸೆಯ ವಿಷಯದ ವಿಶೇಷ ಸಾಮರಸ್ಯಾಧಿಕಾರಿ (ಭಾಗ Iರ ಪ್ರಶ್ನೆ ಸಂಖ್ಯೆ 51ನ್ನೂ ನೋಡಿರಿ) ಚಿತ್ರಹಿಂಸೆಯ ಸಂಬಂಧದ ಸಮಸ್ಯೆಗಳನ್ನು ಪರಿಶೀಲಿಸುವ ವಿಶ್ವವ್ಯಾಪಿ ಅಧಿಕಾರ ಹೊಂದಿರುತ್ತಾನೆ. ಮತ್ತು ಅವನು ವಿಶ್ವಾಸಾರ್ಹ ಹಾಗೂ ನೆಚ್ಚಿಕೊಳ್ಳಬಹುದಾದ ಮಾಹಿತಿಗಳನ್ನು ಕೇಳಬಹುದು ಮತ್ತು ಸ್ವೀಕರಿಸಬಹುದು, ಅಲ್ಲದೆ ಅದಕ್ಕೆ ತಕ್ಷಣವೇ ಪ್ರತಿಸ್ಪಂದಿಸಬಹುದು. ಗುರುತಿಸಲ್ಪಟ್ಟ ಚಿತ್ರಹಿಂಸೆಯ ಅಪಾಯವಿರುವ ಸಂದರ್ಭದಲ್ಲಿ, ಒಂದು ತುರ್ತುಕ್ರಮ ವಿಧಾನದಲ್ಲಿ ತಕ್ಷಣವೇ ಕಾರ್ಯಪ್ರವೃತ್ತನಾಗಲು ಅವಕಾಶ ಮಾಡಲಾಗಿದೆ. ಚಿತ್ರಹಿಂಸೆಯ ನಿರ್ಮೂಲನೆ ಒಂದು ರಾಜಕೀಯ ಇಚ್ಛಾಶಕ್ತಿಯ ವಿಷಯವಾಗಿದ್ದು, ಅದರ ಸತತ ಮುಂದುವರಿಕೆಯು ರಾಜಕೀಯ ಇಚ್ಛಾಶಕ್ತಿಯ ವೈಫಲ್ಯದ ದ್ಯೋತಕವೆಂದು ವಿಶೇಷ ಸಾಮರಸ್ಯಾಧಿಕಾರಿಯು 1993ರಲ್ಲಿ ಮಾನವಹಕ್ಕುಗಳ ಆಯೋಗಕ್ಕೆ ಸಲ್ಲಿಸಿರುವ ವರದಿಯಲ್ಲಿ ನಿರ್ಧರಿಸಲಾಗಿದೆ.

### *ಚಿತ್ರಹಿಂಸೆಯ ಬಗ್ಗೆ ವ್ಯವಹರಣೆಗೆ ಪ್ರಾದೇಶಿಕ ದಸ್ತಾವೇಜುಗಳೇನಾದರೂ ಇವೆಯೆ ?*

ಚಿತ್ರಹಿಂಸೆ ಮತ್ತು ಅಮಾನುಷ ಅಥವಾ ಹೀನಾಯ ನಡವಳಿಕೆ ಪ್ರತಿಬಂಧಕದ ಯೂರೋಪು ಒಡಂಬಡಿಕೆ (1987) 1ನೇ ಫೆಬ್ರವರಿ 1989ರಿಂದ ಜಾರಿಗೊಂಡಿದೆ.[81] ಈ ಒಡಂಬಡಿಕೆ ಸ್ವತಂತ್ರ ತಜ್ಞರಿರುವ ಚಿತ್ರಹಿಂಸೆ ಪ್ರತಿಬಂಧಕ ಸಮಿತಿಯನ್ನು ಸ್ಥಾಪಿಸಿದೆ (ಪ್ರತಿಯೊಂದು ಭಾಗಸ್ಥ ದೇಶವೂ ಒಬ್ಬ ತಜ್ಞನಿಂದ ಪ್ರತಿನಿಧಿಸಲ್ಪಟ್ಟಿದೆ). ಭಾಗಸ್ಥ ದೇಶಗಳು ತಮ್ಮ ದೇಶದಲ್ಲಿ ಬಂಧನಗಳಾಗಿರುವ ಜಾಗಗಳಿಗೆ ಭೇಟಿ ನೀಡಲು ಸಮಿತಿಯ ಸದಸ್ಯರುಗಳಿಗೆ ಅವಕಾಶ ನೀಡಬೇಕು. ಒಡಂಬಡಿಕೆಯ ಅನುಷ್ಠಾನದ ವಿಚಾರದಲ್ಲಿ ತಮ್ಮ ತೀರ್ಮಾನಗಳನ್ನು ತಜ್ಞರು ವರದಿ ಮಾಡುತ್ತಾರೆ. ಸರ್ಕಾರೇತರ ಸಂಘಟನೆಗಳಿಂದ ಸಿಗುವ ಮಾಹಿತಿಯು ಸಮಿತಿಗೆ ಮುಖ್ಯವಾದ ಹೆಚ್ಚುವರಿ ಸಾಮಗ್ರಿಯಾಗುತ್ತದೆ. ವರದಿಗಳನ್ನು ಸಂಬಂಧಿಸಿದ ದೇಶಗಳಿಗೆ ಕಳಿಸಲಾಗುತ್ತದೆ.

ಸಂಬಂಧಿಸಿದ ದೇಶವು ಪರಿಹಾರಕ್ರಮಗಳನ್ನು ಕೈಗೊಳ್ಳಲು ವಿಫಲವಾದ ಸಂದರ್ಭದಲ್ಲಿ ಮಾತ್ರ ಸಮಿತಿ ತನ್ನ ಕಾಳಜಿಗಳನ್ನು ಬಹಿರಂಗಗೊಳಿಸಬಹುದು ಉಳಿದಂತೆ ಸಮಿತಿಯ ವರದಿ ಗೌಪ್ಯವಾಗಿರುತ್ತದೆ.

1985ರಲ್ಲಿ ಅಮೇರಿಕಾ ರಾಷ್ಟ್ರ ಸಂಘಟನೆ ಸ್ವೀಕಾರ ಮಾಡಿದ ಚಿತ್ರಹಿಂಸೆ ಪ್ರತಿಬಂಧಕ ಹಾಗೂ ಶಿಕ್ಷಾ ಅಂತರ-ಅಮೇರಿಕಾ ಒಡಂಬಡಿಕೆ 1987 ರಲ್ಲಿ ಜಾರಿಗೊಂಡಿದೆ.[82] ಈ ಒಡಂಬಡಿಕೆಯ ಅಡಿಯಲ್ಲಿ ಈ ಪ್ರದೇಶದಲ್ಲಿ ಚಿತ್ರಹಿಂಸೆಯ ಪ್ರತಿಬಂಧ ಹಾಗೂ ನಿರ್ಮೂಲನಕ್ಕೆ ಸಂಬಂಧಿಸಿದ ಪರಿಸ್ಥಿತಿಯನ್ನು ವಿಶ್ಲೇಷಿಸಲು ಮತ್ತು ವಾರ್ಷಿಕವಾಗಿ ಇದರ ಮೇಲೆ ವರದಿ ಸಲ್ಲಿಸಲು ಅಂತರ-ಅಮೇರಿಕಾ ಆಯೋಗಕ್ಕೆ ಅಧಿಕಾರವಿದೆ.

### *ಬಂಧಿತರ ಬಗ್ಗೆ ನಡವಳಿಕೆಗೆ ಅಂತರರಾಷ್ಟ್ರೀಯ ಸಂಹಿತೆಯೇನಾದರೂ ಇದೆಯೆ ?*[83]

1955ರಲ್ಲಿ ಅಪರಾಧಗಳ ಪ್ರತಿಬಂಧನ ಮತ್ತು ಅಪರಾಧಿಗಳನ್ನು ನಡೆಸಿಕೊಳ್ಳುವ ಬಗ್ಗೆ, ಪ್ರಥಮ ವಿಶ್ವಸಂಸ್ಥೆಯ ಸಮ್ಮೇಳನವು, ಬಂಧಿತರನ್ನು ನಡೆಸಿಕೊಳ್ಳುವ ಬಗ್ಗೆ ನಿಗದಿತ ಕನಿಷ್ಠ ನಿಯಮಾವಳಿಗಳನ್ನು ಅಂಗೀಕರಿಸಿತು. ಅವುಗಳು ತದನಂತರ ತಿದ್ದುಪಡಿ ಮಾಡಲ್ಪಟ್ಟು ಇ.ಸಿ.ಓ.ಎಸ್.ಓ.ಸಿ.ಯಿಂದ 1957 ಮತ್ತು 1977ರಲ್ಲಿ ಒಪ್ಪಿಗೆ ಪಡೆದಿವೆ. ಸುಧಾರಣಾ ವ್ಯವಸ್ಥೆಗಳ ಮಾದರಿಯ ವಿವರಗಳನ್ನು ವರ್ಣಿಸುವುದರ ಬದಲು ಬಂಧಿತರ ಬಗೆಗಿನ ನಡವಳಿಕೆಯ ತತ್ವಗಳನ್ನೂ ಮಾನದಂಡಗಳನ್ನೂ ಸ್ಥಾಪಿಸುವುದೇ ಈ ನಿಯಮಾವಳಿಗಳ ಉದ್ದೇಶವಾಗಿದೆ. 1979ರಲ್ಲಿ ಶಾಸನ ಜಾರಿಗೆ ಸಂಬಂಧಿಸಿದ ಅಧಿಕಾರಿಗಳಿಗಾಗಿ ಒಂದು ನಡಾವಳಿ ಸಂಹಿತಿಯನ್ನು ಮತ್ತು 1988ರಲ್ಲಿ, ಯಾವುದೇ ಬಗೆಯ ಬಂಧನ ಮತ್ತು ಜೈಲುವಾಸದಲ್ಲಿರುವವರ ರಕ್ಷಣೆಗಾಗಿ ಒಂದು ನೀತಿಸಂಹಿತೆಯನ್ನು, ವಿಶ್ವಸಂಸ್ಥೆಯ ಮಹಾಧಿವೇಶನವು ಅಂಗೀಕರಿಸಿದೆ. ನಿಗದಿತ ಕನಿಷ್ಠ ನಿಯಮಗಳ ಪೂರ್ಣ ಅನುಷ್ಠಾನಕ್ಕೆ ಅನುಕೂಲವಾಗುವಂತೆ 1990ರಲ್ಲಿ ಬಂಧಿತರನ್ನು ನಡೆಸಿಕೊಳ್ಳುವ ಬಗ್ಗೆ ಹನ್ನೊಂದು ಮೂಲಭೂತ ತತ್ವಗಳನ್ನು ಒಪ್ಪಿಕೊಳ್ಳಲಾಗಿದೆ (ಮಹಾಧಿವೇಶನದ ನಿರ್ಣಯ 45/111). ಇವು ಯಾವುದೂ ಕಡ್ಡಾಯಗೊಳಿಸುವುದಿಲ್ಲವಾದರೂ, ಈ ಎಲ್ಲಾ ದಸ್ತಾವೇಜುಗಳು ಬಂಧಿತರನ್ನು ನಡೆಸಿಕೊಳ್ಳುವ ವಿಷಯದಲ್ಲಿ ರಾಜ್ಯಗಳಿಗೆ ಮುಖ್ಯ ಮಾರ್ಗದರ್ಶಿಗಳಾಗಿವೆ.

### *ಕಲಮು 6.*

*ಪ್ರತಿಯೊಬ್ಬರಿಗೂ, ಪ್ರತಿಯೊಂದು ಕಡೆಯಲ್ಲೂ, ಶಾಸನದ ಎದುರು ಒಬ್ಬ ವ್ಯಕ್ತಿಯೆಂಬ ಮಾನ್ಯತೆಯ ಹಕ್ಕಿರುತ್ತದೆ.*

## ಕಲಮು 7.

*ಕಲಮು 2ರ ಜತೆ ಈ ಕಲಮು ಪರಿಶೀಲಿಸಲ್ಪಟ್ಟಿದೆ.*

## ಕಲಮು 8.

*ರಾಜ್ಯಾಂಗದಿಂದ ಅಥವಾ ಶಾಸನಗಳಿಂದ ಪ್ರತಿಯೊಬ್ಬ ವ್ಯಕ್ತಿಗೂ ಮಂಜೂರಾದ ಮೂಲಭೂತಹಕ್ಕುಗಳ ಉಲ್ಲಂಘನೆಯ ಕೃತ್ಯಗಳ ಬಗ್ಗೆ, ಆ ಬಗ್ಗೆ ಅಧಿಕಾರವಿರುವ ರಾಷ್ಟ್ರೀಯ ನ್ಯಾಯಾಧಿಕರಣಗಳಿಂದ ಪರಿಣಾಮಕಾರಿ ಪರಿಹಾರಕ್ಕೆ ಪ್ರತಿಯೊಬ್ಬನಿಗೂ ಹಕ್ಕಿರುತ್ತದೆ.*

ಹೆಚ್ಚಾಗಿ 'ಶಾಸನಾತ್ಮಕವಾದ' ಮಾನವಹಕ್ಕುಗಳನ್ನು ಪ್ರಸ್ತಾಪಿಸುವ ಕಲಮುಗಳ ಸಾಲಿನಲ್ಲಿ 6ನೇ ಕಲಮು ಮೊದಲನೆಯದು. 'ಶಾಸನದ ಎದುರು ವ್ಯಕ್ತಿ' ಎಂಬ ಶಬ್ದ ಜೋಡಣೆ ರಾಷ್ಟ್ರಗಳು ಎಲ್ಲಾ ವ್ಯಕ್ತಿಗಳಿಗೆ ನೀಡಬೇಕಾದ, ಉದಾಹರಣೆಗೆ, ಕರಾರು ಮತ್ತು ಒಪ್ಪಂದಗಳನ್ನು ಮಾಡಿಕೊಳ್ಳುವ, ಮತ್ತು ನ್ಯಾಯಾಲಯಗಳಲ್ಲಿ ತಮ್ಮ ಶಾಸನಾತ್ಮಕ ಹಕ್ಕುಗಳನ್ನು ಜಾರಿಗೊಳಿಸುವುದನ್ನು ಖಾತರಿಪಡಿಸುವಂತೆ ವ್ಯವಹರಣೆಗಳನ್ನು ಪ್ರಾರಂಭಿಸುವ ಹಕ್ಕುಗಳನ್ನು ಪ್ರಸ್ತಾಪಿಸುತ್ತದೆ.

'ಪ್ರತಿಯೊಬ್ಬ ವ್ಯಕ್ತಿಗೂ' ಎಂಬುದು ಈ ಕಲಮುಗಳ ಬಹುಮುಖ್ಯವಾದ ಶಬ್ದವಾಗಿದೆ. ಶಾಸನದ ಎದುರು ಒಬ್ಬ ವ್ಯಕ್ತಿ ಹೊಂದಿರಬೇಕಾದ ಎಲ್ಲಾ ಹಕ್ಕುಗಳನ್ನು ಜಾರಿಗೊಳಿಸುವ ವಿಚಾರದಲ್ಲಿ ರಾಷ್ಟ್ರ ತನ್ನ ಯಾವುದೇ ಪ್ರಜೆಗಳ ಮಧ್ಯದಲ್ಲಿ ವಿದೇಶಿಯರು ಅಥವಾ ದೇಶರಹಿತ ವ್ಯಕ್ತಿಗಳ ಮಧ್ಯೆ ಯಾವುದೇ ವ್ಯತ್ಯಾಸ ಅಥವಾ ವಿಂಗಡಣೆ ಮಾಡಬಾರದೆಂಬುದನ್ನು ಅದು ಸೂಚಿಸುತ್ತದೆ.

### *ಅವನ ಅಥವಾ ಅವಳ ರಾಜ್ಯಾಂಗಬದ್ಧ ಅಥವಾ ಶಾಸನಬದ್ಧ ಹಕ್ಕುಗಳ ಉಲ್ಲಂಘನೆಯಾದಾಗ ಒಬ್ಬ ವ್ಯಕ್ತಿ ಏನು ಮಾಡಬಹುದು?*

ಅವನ ಅಥವಾ ಅವಳ ರಾಜ್ಯಾಂಗ ಅಥವಾ ಶಾಸನಬದ್ಧ ಹಕ್ಕುಗಳ ಉಲ್ಲಂಘನೆಯಾಗಿದೆಯೆಂದು ಭಾವಿಸಿದ ವ್ಯಕ್ತಿಗೆ, ಆಂತರಿಕ ನ್ಯಾಯಾಧಿಕರಣ ಅಥವಾ ನ್ಯಾಯಾಲಯಕ್ಕೆ ಮೊರೆಹೋಗುವ ಹಕ್ಕನ್ನು ಸೃಷ್ಟಿಸುವುದೇ 8ನೇ ಕಲಮಿನ ಉದ್ದೇಶವಾಗಿದೆ. ಅದು ವಿಶ್ವವ್ಯಾಪಿ ಘೋಷಣೆ ಒಳಗೊಂಡಿರುವ ಹಕ್ಕುಗಳಿಗೆ ಸಂಬಂಧಿಸಿಲ್ಲ, ಆದರೆ ಕೇವಲ ರಾಷ್ಟ್ರಗಳು ತಮ್ಮದೇ ಸಂವಿಧಾನ ಅಥವಾ ಶಾಸನಗಳ ಮೂಲಕ ಖಾತರಿಪಡಿಸಿರುವ ಹಕ್ಕುಗಳಿಗೆ ಮಾತ್ರ ಸಂಬಂಧಪಟ್ಟಿದೆ. ಅವನ ಅಥವಾ ಅವಳ ಹಕ್ಕುಗಳು ಉಲ್ಲಂಘನೆಯಾದಾಗ ಯಾವುದೇ ಪರಿಹಾರ ಇಲ್ಲದಿರುವ ಸಂದರ್ಭ ಬರಬಾರದೆಂಬುದೇ ಅದರ ಅರ್ಥ. ಅಲ್ಲದೆ 'ಪ್ರತಿಯೊಬ್ಬರಿಗೂ' ಎಂಬುದನ್ನು ನಿರ್ದಿಷ್ಟವಾಗಿ ಹೇಳಿರುವುದರ ಅರ್ಥ, ಪರಿಹಾರದ ಹಕ್ಕು (ಉದಾಹರಣೆಗೆ, ದಾವೆಯ ಹಕ್ಕು) ಕೆಲವೇ ಗುಂಪಿನ ಜನರಿಗೆ ಸೀಮಿತಗೊಳಿಸತಕ್ಕದ್ದಲ್ಲವೆಂದಾಗುತ್ತದೆ. ನಿರ್ದಿಷ್ಟ ಉದ್ದಿಶ್ಯಗಳಿಗೆ ಹೆಸರಿಸಲ್ಪಟ್ಟ

ನ್ಯಾಯಾಲಯಗಳು ಎಂಬುದಕ್ಕೆ 'ಅಧಿಕಾರವಿರುವ' ಎಂಬ ಶಬ್ದ ಅನ್ವಯಿಸುತ್ತದೆ (ಆ ರೀತಿಯಲ್ಲಿ ಅವನ/ಅವಳ ಕೈಗಾರಿಕಾ ಹಕ್ಕುಗಳ ಉಲ್ಲಂಘನೆಯಾಗಿದೆಯೆಂದು ಹೇಳುವ ವ್ಯಕ್ತಿ ಆ ಸಮಸ್ಯೆಯ ಬಗ್ಗೆ ಪರಿಣತಿಯಿರುವ ನ್ಯಾಯಾಲಯಕ್ಕೆ ಮನವಿ ಸಲ್ಲಿಸಬೇಕೇ ವಿನಾ ಕೌಟುಂಬಿಕ ನ್ಯಾಯಾಲಯಕ್ಕಲ್ಲ).

**ಕಲಮು 9.**

*ಯಾರನ್ನೂ ಸ್ವೇಚ್ಛಾನುಸಾರಿ ಬಂಧನ, ಸೆರೆವಾಸ, ಗಡೀಪಾರುಗಳಿಗೆ ಒಳಪಡಿಸತಕ್ಕದ್ದಲ್ಲ.*

### *ಅಂಥಾ ನಡವಳಿಕೆಯನ್ನು ಎಂದಾದರೂ ಸಮರ್ಥಿಸುವುದು ಸಾಧ್ಯವೇ?*

ಎಲ್ಲಾ ಶಾಸನಾತ್ಮಕ ವ್ಯವಸ್ಥೆಗಳು ವ್ಯಕ್ತಿಗಳಿಗೆ ನೀಡಬೇಕಾದ ಮೂಲಭೂತ ಶಾಸನಾತ್ಮಕ ರಕ್ಷಣೋಪಾಯಗಳ ಬಗ್ಗೆ ವ್ಯವಹರಿಸುವ ಮೂರು ಕಲಮುಗಳಲ್ಲಿ ಇದು ಮೊದಲನೆಯದು. ಆ ರಕ್ಷಣೋಪಾಯಗಳೆಂದರೆ: ನಿರಂಕುಶ ಬಂಧಗಳಿಂದ ಮುಕ್ತಗೊಳಿಸುವುದು; ಒಂದು ನ್ಯಾಯಯುತ, ಮತ್ತು ಕ್ಷಿಪ್ರವಾದ ವಿಚಾರಣೆ; ಮತ್ತು ಅಪರಾಧ ಸಾಬೀತಾಗುವವರೆಗೆ ನಿರಪರಾಧಿ ಎಂದೇ ಪರಿಗಣಿಸಲ್ಪಡುವುದು. 'ಸ್ವೇಚ್ಛಾನುಸಾರ' ಎಂಬ ಶಬ್ದವೊಂದನ್ನು ಬಿಟ್ಟರೆ ಉಳಿದಂತೆ 9ನೇ ಕಲಮಿನ ಅರ್ಥ ಸ್ವಯಂವೇದ್ಯವಿದೆ. ಅದರ ಎರಡು ಅರ್ಥವಿವರಣೆಯ ಸಾಧ್ಯತೆಗಳನ್ನು ಆಗಾಗ್ಗೆ ಮುಂದಿಡಲಾಗಿದೆ: ಒಂದು, ವ್ಯಕ್ತಿಯನ್ನು ಶಾಸನಾಧೀನ ವಿಧಾನಗಳಿಂದ ಮಾತ್ರ ಬಂಧಿಸಬಹುದು, ಸೆರೆವಾಸ, ಗಡೀಪಾರುಗಳಿಗೊಳಪಡಿಸಬಹುದು; ಇನ್ನೊಂದು, ಯಾರನ್ನೂ ಅವನಾಗಲೀ, ಅವಳಾಗಲೀ ಅಪರಾಧವನ್ನು ಮಾಡಿರುವುದು ಸಂಭಾವ್ಯವೇ ಇಲ್ಲದ ಸಂದರ್ಭದಲ್ಲಿ ಮನಬಂದಂತೆ ಗೊತ್ತುಗುರಿಯಿರದ ಬಂಧನ, ಸೆರೆವಾಸ ಅಥವಾ ಗಡೀಪಾರಿಗೆ ಒಳಪಡಿಸಬಾರದು.

ಶಾಸನಗಳು ಆಗಾಗ್ಗೆ ವ್ಯಾಪಕವಾದ ಬಂಧನ ಅಧಿಕಾರವನ್ನು ನೀಡುವುದರಿಂದ ಮತ್ತು ಶಾಸನಾಧೀನ ವಿಧಾನಗಳೇ ಅನೇಕ ವೇಳೆ ಸ್ವತಃ ನಿರಂಕುಶವಾಗಿದ್ದು ದುರುಪಯೋಗಗೊಳ್ಳುವುದರಿಂದ ಮೊದಲನೆಯದು ಅಷ್ಟೊಂದು ಸಮರ್ಪಕ ಅರ್ಥವಿವರಣೆಯೆಂದೆನಿಸುವುದಿಲ್ಲ. ಮಾನವ ಘನತೆಗಿರುವ ಬೆದರಿಕೆಗಳನ್ನು ಎದುರಿಸುವಲ್ಲಿ ಅಂಥಾ ಅರ್ಥವಿವರಣೆಯಿಂದ ದೊರಕುವ ರಕ್ಷಣೆ ಸಮರ್ಪಕವಿರುವುದು ಸಾಧ್ಯವಿಲ್ಲ. ಆದ್ದರಿಂದ ಎರಡನೇ ಅರ್ಥವಿವರಣೆ ಮಾತ್ರವೇ ಸರಿಯಾದದ್ದು. ನಿರ್ದಿಷ್ಟವಾಗಿ ಅದೇ ಸರಿ ಎನ್ನುವುದಕ್ಕೆ ಕಾರಣವೇನೆಂದರೆ ವೈಧಾನಿಕವಾಗಿ ಸರಿಯಾದ ಬಂಧನಗಳು ವಾಸ್ತವಿಕವಾಗಿ ಸ್ವೇಚ್ಛಾನುಸಾರಿಯಾಗಿದ್ದು ಬಹಳ ಸಲ ಬಂಧಿತನನ್ನು ದುರ್ವರ್ತನೆ ಹಾಗೂ ಚಿತ್ರಹಿಂಸೆಗಳಿಗೆ ಗುರಿಪಡಿಸುವುದರಲ್ಲಿ ಪರ್ಯವಸಾನಗೊಳ್ಳುತ್ತವೆ.



**ಕಲಮು *10.***

*ಪ್ರತಿಯೊಬ್ಬನೂ ತನ್ನ ಹಕ್ಕು ಮತ್ತು ಬಾಧ್ಯತೆಗಳನ್ನು ನಿರ್ಧರಿಸುವ ವಿಚಾರದಲ್ಲಿ ಮತ್ತು ಅವನ ವಿರುದ್ಧ ಯಾವುದೇ ಅಪರಾಧದ ಆರೋಪದ ವಿಚಾರದಲ್ಲಿ, ಒಂದು ಸ್ವತಂತ್ರ ಮತ್ತು ನಿಷ್ಪಕ್ಷಪಾತ ನ್ಯಾಯಾಧಿಕರಣದ ಮುಂದೆ, ನ್ಯಾಯಬದ್ಧ ಮತ್ತು ಬಹಿರಂಗ ವಿಚಾರಣೆಗೆ ಸಂಪೂರ್ಣವೂ, ಸಮಾನವೂ ಆದ ಹಕ್ಕು ಉಳ್ಳವನಾಗಿದ್ದಾನೆ.*

ಕಲಮು 10ರಲ್ಲಿ ಮೂಲಭೂತ ಹಕ್ಕಾದ ನ್ಯಾಯಬದ್ಧ ವಿಚಾರಣೆಯ ಬಗ್ಗೆ ಪ್ರಸ್ತಾಪಿಸಿದೆ. ಇದು ಅಪರಾಧೀ ಪ್ರಕರಣಗಳಿಗೆ ಮಾತ್ರವಲ್ಲದೆ ಒಬ್ಬ ವ್ಯಕ್ತಿಯು ಇನ್ನೊಬ್ಬನ ಮೇಲೆ ದಾವೆಗಳನ್ನು ಮಾಡುವ ವ್ಯಾವಹಾರಿಕ ವಿವಾದಗಳಿಗೂ ಸಂಬಂಧಿಸಿದೆ. ನ್ಯಾಯಾಲಯದ ಮುಂದೆ ಬಂದು ನಿಲ್ಲುವ ಎಲ್ಲರಿಗೂ ಒಂದು ಸ್ವತಂತ್ರ ಮತ್ತು ನಿಷ್ಪಕ್ಷಪಾತವಾದ ನ್ಯಾಯಾಧಿಕರಣದ ವ್ಯಾಪ್ತಿಯಲ್ಲಿ ನ್ಯಾಯಬದ್ಧ ವಿಚಾರಣೆಯನ್ನು ಖಾತರಿಪಡಿಸುವುದೇ ಈ ಕಲಮಿನ ಉದ್ದೇಶ. 'ನ್ಯಾಯಬದ್ಧ',

'ಸ್ವತಂತ್ರ' ಮತ್ತು 'ನಿಷ್ಪಕ್ಷಪಾತ' ಎಂಬ ಶಬ್ದಗಳ ಕಲ್ಪನೆಗಳು ದೇಶದಿಂದ ದೇಶಕ್ಕೆ ವಿಭಿನ್ನವೆಂದು ಕೆಲವೊಮ್ಮೆ ವಾದ ನಡೆಯುತ್ತಿದೆಯಾದಾಗ್ಯೂ ಪ್ರತಿಯೊಬ್ಬರಿಗೂ ಅವನ ಅಥವಾ ಅವಳ ಪರವಾದ ವಿಷಯಗಳನ್ನು ಪ್ರಸ್ತುತಗೊಳಿಸಲು ನ್ಯಾಯವಾದ ಅವಕಾಶವಿರಬೇಕೆಂಬುದು ಸ್ಪಷ್ಟವಾಗಿದೆ. ದೇಶಗಳು ಸ್ವತಂತ್ರ ನ್ಯಾಯಾಂಗದ ಮೂಲಭೂತ ತತ್ವಗಳನ್ನು[84] ಗಣನೆಗೆ ತೆಗೆದುಕೊಳ್ಳುತ್ತವೆಂದು ನಿರೀಕ್ಷಿಸಲಾಗಿದೆ.

## ಕಲಮು *11.*

*1. ದಂಡಾರ್ಹ ಅಪರಾಧದ ಆರೋಪಕ್ಕೊಳಗಾದ ಪ್ರತಿಯೊಬ್ಬನಿಗೂ, ಅವನ ಸಮರ್ಥನೆಗಳಿಗೆ ಅಗತ್ಯವಾದ ಎಲ್ಲಾ ಖಾತರಿಗಳಿದ್ದ, ಬಹಿರಂಗವಾದ ವಿಚಾರಣೆಯಲ್ಲಿ ಶಾಸನಬದ್ಧವಾಗಿ ಅಪರಾಧಿಯೆಂದು ಸಾಬೀತಾಗುವವರೆಗೂ, ನಿರಾಪರಾಧಿಯೆಂದು ಭಾವಿಸಲ್ಪಡುವ ಹಕ್ಕಿರುತ್ತದೆ.*

*2. ಅದನ್ನು ಮಾಡಿದ ಕಾಲದಲ್ಲಿ, ರಾಷ್ಟ್ರೀಯ ಅಥವಾ ಅಂತರರಾಷ್ಟ್ರೀಯ ಶಾಸನದ ಅಡಿಯಲ್ಲಿ ಅಪರಾಧವೆಂದು ಪರಿಗಣಿಸಲ್ಪಡದಿದ್ದ ಕೃತಿ ಅಥವಾ ಲೋಪದ ಕಾರಣಕ್ಕಾಗಿ ಯಾರೊಬ್ಬರನ್ನೂ ದಂಡಾರ್ಹ ಅಪರಾಧದ ಆರೋಪಕ್ಕೆ ಗುರಿಪಡಿಸತಕ್ಕದ್ದಲ್ಲ. ಅಥವಾ ಅಂಥಾ ಅಪರಾಧವನ್ನು ಮಾಡಿದ ಕಾಲದಲ್ಲಿ ಅದಕ್ಕೆ ನಿಗದಿಪಡಿಸಿದ್ದಕ್ಕಿಂತ ಹೆಚ್ಚಿನ ಶಿಕ್ಷೆಯನ್ನು ವಿಧಿಸತಕ್ಕದ್ದಲ್ಲ.*

11ನೇ ಕಲಮು ನಾಲ್ಕು ಮೂಲಭೂತ ತತ್ವಗಳನ್ನೊಳಗೊಂಡಿದೆ:

*ನಿರಪರಾಧಿಯೆಂದು ಭಾವಿಸಲ್ಪಡುವಿಕೆ.* ಇದು ಒಂದು ಸರಳ ಆದರೆ ಮುಖ್ಯವಾದ ಕಲ್ಪನೆ. ದಂಡಾರ್ಹ ಅಪರಾಧದ ಆರೋಪಕ್ಕೆ ಒಳಗಾದ ಯಾರನ್ನೇ ಆಗಲಿ, ಅವನ ಅಥವಾ ಅವಳ ತಪ್ಪು ಸಾಬೀತಾಗುವವರೆಗೂ ಅಪರಾಧಿಯೆಂದು ನಡೆಸಿಕೊಳ್ಳಕೂಡದೆಂದು ಅದರ ಅರ್ಥವಾಗಿದೆ. ಕೆಲವು ದೇಶಗಳಲ್ಲಿ ಜಾಮೀನಿನ ಮೇಲೆ ಬಿಡುಗಡೆ ಮಾಡಲು ಅದೇ ಆಧಾರವಾಗಿದೆ. ವಿಚಾರಣೆ ಮುಗಿಯುವವರೆಗೂ ಅವನ ಅಥವಾ ಅವಳ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಬಹುದೆಂಬುದು ಅದರ ತಾತ್ಪರ್ಯ.

*ಸಮರ್ಥನೆಯ ಹಕ್ಕು.* ಉದಾಹರಣೆಗೆ 11ನೇ ಕಲಮಿನಲ್ಲಿನ 'ಖಾತರಿ' ಶಬ್ದವು ಒಂದು ಆರೋಪಿಗೆ ಅವನ ಅಥವಾ ಅವಳ ನಿರಪರಾಧವನ್ನು ಸಾಬೀತು ಮಾಡಲು, ಸಾಕ್ಷಿಗಳನ್ನು ಕರೆಸುವ ಹಕ್ಕು ಸೇರಿದಂತೆ ಶಾಸನಬದ್ಧ ಪ್ರಾತಿನಿಧ್ಯ ಮತ್ತು ಯೋಗ್ಯ ಅವಕಾಶಗಳೆಲ್ಲವನ್ನೂ ಖಾತರಿಪಡಿಸಲು ರಾಷ್ಟ್ರವು ಬದ್ಧವಾಗಿದೆಯೆಂಬುದನ್ನು ಒಳಗೊಂಡಿದೆ.

*ಬಹಿರಂಗ ವಿಚಾರಣೆಯ ಹಕ್ಕು.* 'ನ್ಯಾಯದಾನ ಮಾಡುವುದಷ್ಟೇ ಅಲ್ಲ, ಆದರೆ ನ್ಯಾಯದಾನ ಮಾಡಿರುವುದು ಸ್ಪಷ್ಟವಾಗಿ ಕಾಣುವಂತಿರಬೇಕು' ಎಂಬ ಸಾರ್ವತ್ರಿಕ ತತ್ವ ಇದರಲ್ಲಿ ಅಂತರ್ಗತವಾಗಿದೆ. ಶಾಸನಗಳ ಬಗ್ಗೆ ವಿಶ್ವಾಸವನ್ನು ಖಾತರಿಪಡಿಸಲು ಜನರಿಗೆ ಶಾಸನವನ್ನು ಬಹಿರಂಗವಾಗಿ ಅನ್ವಯಗೊಳಿಸುವುದನ್ನು ನೋಡುವುದನ್ನು, ಮತ್ತು ಶಾಸನದ ಕ್ರಿಯಾ

ವಿನ್ಯಾಸ ಹೇಗೆ ಕಾರ್ಯತಃ ನಿರ್ವಹಣೆಗೊಳ್ಳುತ್ತದೆಯೆಂಬುದನ್ನು ಅವಲೋಕಿಸುವುದನ್ನು, ಸಾಧ್ಯವಾಗಿಸುವುದು ಅಗತ್ಯ. ವಿಚಾರಣೆಗಳು ಗೌಪ್ಯವಾಗಿ ನಡೆದಲ್ಲಿ, ಮೂಲಭೂತ ಹಕ್ಕುಗಳನ್ನು ಗೌರವಿಸಲಾಗಿದೆ ಯೆಂಬುದಕ್ಕೆ ಯಾವುದೇ ಖಾತರಿ ಇರುವುದಿಲ್ಲ. 11ನೇ ಕಲಮಿನ ಈ ಭಾಗ, ಶಾಸನವನ್ನು ನ್ಯಾಯಬದ್ಧವಾಗಿ ಮತ್ತು ಸಮರ್ಪಕವಾಗಿ ಅನ್ವಯಿಸ ಲಾಗಿದೆಯೆಂದು ತೋರ್ಪಡಿಸುವ ಕರ್ತವ್ಯವನ್ನು ರಾಷ್ಟ್ರಗಳ ಮೇಲೆ ವಿಧಿಸಿದೆ.

*ಶಾಸನವನ್ನು ಪೂರ್ವಾನ್ವಯಗೊಳಿಸದಿರುವಿಕೆ.* ಈ ತೊಡಕಿನ ಶಬ್ದಜೋಡಣೆ ಒಂದು ಸರಳ ವಿಷಯವನ್ನೊಳಗೊಂಡಿದೆ. ಇದನ್ನು ಮಾಡಿದ ಕಾಲದಲ್ಲಿ ಶಾಸನಬದ್ಧವಾಗಿದ್ದ ಕೃತ್ಯಕ್ಕಾಗಿ ಒಬ್ಬ ವ್ಯಕ್ತಿಯನ್ನು ಆಮೇಲಿನ ಕಾಲದಲ್ಲಿ ಶಿಕ್ಷಿಸತಕ್ಕದ್ದಲ್ಲ. ಒಂದು ಕೃತ್ಯ ನಡೆದ ಸಂದರ್ಭದಲ್ಲಿ ಒಂದು ಬಗೆಯ ಶಿಕ್ಷೆಗೆ ಅರ್ಹವಾಗಿದ್ದಲ್ಲಿ, ತದನಂತರದ ಶಾಸನದ ಬದಲಾವಣೆಯ ಕಾರಣದಿಂದಾಗಿ ಶಿಕ್ಷೆಯನ್ನು ಹೆಚ್ಚಿಸಕೂಡದೆಂದೂ ಸಹ ಅದರ ಇನ್ನೊಂದು ಅರ್ಥ.

ಈ ಕಲಮಿನ 2ನೇ ಪರಿಚ್ಛೇದದಲ್ಲಿ 'ಅಂತರರಾಷ್ಟ್ರೀಯ ಶಾಸನ'ವೆಂದು ಸೇರಿಸಿರುವುದು, ಎರಡನೇ ಮಹಾಯುದ್ಧದ ಕೊನೆಯಲ್ಲಿ ನಡೆದ ನ್ಯೂರೆಂಬರ್ಗ್ ಮತ್ತು ಟೋಕಿಯೋ ಮಹತ್ತರ ಯುದ್ಧಾಪರಾಧಿಗಳ ವಿಚಾರಣೆಗಳ ನಿರ್ದಿಷ್ಟ ಪ್ರಸ್ತಾಪವಾಗಿದೆ. ಯುದ್ಧಾಪರಾಧಗಳನ್ನು ಮತ್ತು ಮಾನವತೆಯ ವಿರುದ್ಧದ ಅಪರಾಧಗಳನ್ನು ನಿರ್ದಿಷ್ಟ ರಾಷ್ಟ್ರೀಯ ಶಾಸನಗಳ ಬದಲು ವಿಶ್ವವ್ಯಾಪಿ ಶಾಸನಗಳ (ಅಂತರರಾಷ್ಟ್ರೀಯ ಶಾಸನ) ಆಧಾರದ ಮೇಲೆ, ಅಂತರರಾಷ್ಟ್ರೀಯ ನ್ಯಾಯಾಧಿಕರಣಗಳ ಮುಂದೆ ವಿಚಾರಣೆಗೆ ಒಳಪಡಿಸಲಾಯಿತು.

## ಕಲಮು *12.*

*ಯಾರೊಬ್ಬನನ್ನೂ ಅವನ ಖಾಸಗಿ, ಕೌಟುಂಬಿಕ, ಗೃಹ ಅಥವಾ ಪತ್ರವ್ಯವಹಾರಗಳ ವಿಷಯಗಳಲ್ಲಿ ಸ್ವೇಚ್ಛಾನುಸಾರಿ ಮಧ್ಯೆ ಪ್ರವೇಶಕ್ಕೆ ಅಥವಾ ಅವನ ಗೌರವ ಮತ್ತು ಕೀರ್ತಿಗಳ ಆಕ್ರಮಣಕ್ಕೆ ಒಳಪಡಿಸತಕ್ಕದ್ದಲ್ಲ. ಆ ರೀತಿಯ ಮಧ್ಯಪ್ರವೇಶ ಅಥವಾ ಆಕ್ರಮಣದ ವಿರುದ್ಧ ಪ್ರತಿಯೊಬ್ಬರೂ ಶಾಸನಬದ್ಧ ರಕ್ಷಣೆಯನ್ನು ಹೊಂದಿರುತ್ತಾರೆ.*

ಪದ್ಧತಿಗಳು ಮತ್ತು ಸಂಸ್ಕೃತಿಗಳು ವಿಭಿನ್ನವಾದಂತೆ ಶಾಸನಗಳು ಭಿನ್ನವಾಗಿರುತ್ತವೆ. 'ಖಾಸಗಿ', 'ಕುಟುಂಬ', 'ಗೃಹ', 'ಗೌರವ', 'ಕೀರ್ತಿ' ಇವುಗಳ ವಿಷಯಕ್ಕೆ ಬಂದಾಗ ಸರ್ಕಾರಗಳು, ಸ್ಥಳೀಯ ಶಾಸನಗಳು, ಪದ್ಧತಿಗಳು ನೀಡುವ ಶಾಸನಬದ್ಧ ಅರ್ಥವಿವರಣೆಗಳು ಮತ್ತು ವಿಧಿಸುವ ಇತಿಮಿತಿಗಳು ಕೂಡಾ ಅಷ್ಟೇ ವಿಭಿನ್ನವಾಗಿವೆ. ಈ ಹಕ್ಕಿನ ಅನುಷ್ಠಾನವನ್ನು ಅಂತಿಮವಾಗಿ ರಾಷ್ಟ್ರೀಯ ಶಾಸನಗಳಡಿಯಲ್ಲಿ ಕಂಡುಕೊಳ್ಳಬೇಕಾಗಿದೆ. ಮಾಹಿತಿ ಬ್ಯಾಂಕುಗಳಲ್ಲಿರುವ ಗೌಪ್ಯ ಮಾಹಿತಿಗಳ ಕಳವು, ಖಾಸಗೀ ದೂರವಾಣಿಗಳ ಸಂಭಾಷಣೆಗಳ ಕದ್ದಾಲಿಕೆಯ ಪದ್ಧತಿಗಳೇ ಮುಂತಾದ ಆಧುನಿಕ ಎಲೆಕ್ಟ್ರಾನಿಕ್ ತಂತ್ರಜ್ಞತೆಯ ಫಲವಾಗಿ ನಿರ್ದಿಷ್ಟ ಸಮಸ್ಯೆಗಳು


ನ್ಯಾಯಯುತ ವಿಚಾರಣೆ ಮೂಲಕ
ನಿನಗೆ ಮರಣದಂಡನೆಯ ಶಿಕ್ಷೆ
ಕೊಡೋದೇ ನಮ್ಮ ಉದ್ದೇಶ!

ಉದ್ಭವಿಸುತ್ತಿವೆ. ದುರುಪಯೋಗಗಳನ್ನು ಪತ್ತೆ ಮಾಡುವುದು ಮತ್ತು ಸಾಬೀತು ಮಾಡುವುದು ಈಗ ಇನ್ನೂ ಹೆಚ್ಚು ದುಸ್ತರವಾಗಿದೆ. ಹಾಗಿದ್ದಾಗ್ಯೂ ಅನೇಕ ದೇಶಗಳಲ್ಲಿ ಈ ಮೂಲಭೂತ ಸ್ವಾತಂತ್ರ್ಯಗಳನ್ನು ರಕ್ಷಿಸಲು ಸಾಕಷ್ಟು ವಿಸ್ತಾರಗೊಂಡ ಶಾಸನಗಳು ಅಸ್ತಿತ್ವದಲ್ಲಿವೆ ಮತ್ತು ಸರ್ಕಾರೇತರ ಸಂಘಟನೆಗಳು ಮತ್ತು ಸಮೂಹ ಮಾಧ್ಯಮಗಳು ಅವುಗಳ ಉಲ್ಲಂಘನೆಗಳ ವಿರುದ್ಧ ಹೋರಾಡುತ್ತಿವೆ.

## *ಕಲಮು 13.*

1. *ಒಂದು ದೇಶದ ಎಲ್ಲೆಯ ಒಳಗಡೆ ಪ್ರತಿಯೊಬ್ಬನಿಗೂ ಚಲನೆಯ ಮತ್ತು ವಾಸಿಸುವ ಹಕ್ಕಿರುತ್ತದೆ.*
2. *ಪ್ರತಿಯೊಬ್ಬರಿಗೂ ಯಾವುದೇ ದೇಶವನ್ನು, ಸ್ವದೇಶವನ್ನು ಸೇರಿದಂತೆ, ಬಿಟ್ಟು ಹೋಗುವ ಮತ್ತು ಸ್ವದೇಶಕ್ಕೆ ಮರಳುವ ಹಕ್ಕಿರುತ್ತದೆ.*

ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಅಂತರರಾಷ್ಟ್ರೀಯ ಒಡಂಬಡಿಕೆಯ 12ನೇ ಕಲಮು ಈ ಹಕ್ಕನ್ನು ಇನ್ನೂ ವಿಸ್ತರಿಸಿದ್ದು, ಶಾಸನ ರೀತ್ಯಾ ಅವಕಾಶ ಮಾಡಿರುವ, ಸಾರ್ವಜನಿಕ ಭದ್ರತೆ, ವ್ಯವಸ್ಥೆ, ಸಾರ್ವಜನಿಕ ಆರೋಗ್ಯ ಅಥವಾ ನೈತಿಕತೆ ಅಥವಾ ಬೇರೆಯವರ ಹಕ್ಕುಗಳು ಮತ್ತು ಸ್ವಾತಂತ್ರ್ಯಗಳು ಮತ್ತು ಒಡಂಬಡಿಕೆಯಲ್ಲಿ ಮಾನ್ಯ ಮಾಡಿರುವ ಇನ್ನಿತರ ಹಕ್ಕುಗಳಿಗೆ ಅನುಗುಣವಾಗಿರುವುಗಳು ಮಾತ್ರ ಈ ಹಕ್ಕನ್ನು ಮಿತಗೊಳಿಸುವ ಸಾಧ್ಯತೆಗಳೆಂಬುದನ್ನು ಸೇರಿಸಿದೆ. ಅದೇ ಒಡಂಬಡಿಕೆಯ 4ನೇ ಕಲಮಿನ ಪ್ರಕಾರ, ಅಸ್ತಿತ್ವದಲ್ಲಿದೆಯೆಂದು ಅಧಿಕೃತವಾಗಿ ಘೋಷಿಸಲ್ಪಟ್ಟ, ರಾಷ್ಟ್ರದ ಜೀವಕ್ಕೆ ಬೆದರಿಕೆಯೊಡ್ಡಿರುವ ಸಾರ್ವತ್ರಿಕ ತುರ್ತುಸ್ಥಿತಿಯಲ್ಲಿ ಈ ಹಕ್ಕುಗಳನ್ನು ಅವಮಾನತುಗೊಳಿಸಬಹುದು. ಈ ಅಪವಾದಗಳು ತಾತ್ಕಾಲಿಕ ಸ್ವರೂಪದ್ದಾಗಿರಬೇಕು ಮತ್ತು ಇನ್ನಿತರರ ಕ್ಷೇಮವನ್ನು ಕಾಪಾಡುವ ನ್ಯಾಯಸಮ್ಮತವಾದ ಅವಶ್ಯಕತೆಯನ್ನು ಆಧರಿಸಿರಬೇಕು. ಆ ರೀತಿಯಲ್ಲಿ, ಒಂದು ಪ್ರಾಕೃತಿಕ ಅನಾಹುತ, ಸಾಂಕ್ರಾಮಿಕ ಅಥವಾ ಯುದ್ಧ ಈ ಹಕ್ಕಿನ ಮೇಲೆ ಕೆಲವು ನಿರ್ಬಂಧಗಳನ್ನು ಅಗತ್ಯವಾಗಿಸಬಹುದು. ಹಾಗೆಯೇ ಜೈಲುವಾಸ ಅನುಭವಿಸುತ್ತಿರುವವರು ದೇಶವನ್ನು ಬಿಡಲು ಸ್ವತಂತ್ರರಾಗುವ ಮೊದಲು ಶಿಕ್ಷೆಯನ್ನು ಪೂರೈಸಬೇಕಾಗುತ್ತದೆ. ಈ ಯಾವುದೇ ಅಪವಾದಗಳು ಈ ಹಕ್ಕಿನ ಯಾವುದೇ ಬಗೆಯ ಸ್ವೇಚ್ಛಾನುಸಾರಿ ಅಥವಾ ಶಾಶ್ವತರೂಪದ ನಿರ್ಬಂಧಕ್ಕೆ ಒಪ್ಪಿಗೆಯನ್ನು ಸೂಚಿಸುವುದಿಲ್ಲ.

## *ಯಾವ ವಿಧದಲ್ಲಿ ಚಲನೆಯ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವುದು ಸಾಧ್ಯ ?*

ದೇಶದ ಒಳಗಡೆ ಮತ್ತು ದೇಶಗಳ ಮಧ್ಯೆ, ಚಲನೆಯ ಸ್ವಾತಂತ್ರ್ಯವನ್ನು ಸರ್ಕಾರಗಳು ನಿರ್ಬಂಧಿಸುವ ಹಲವು ವಿಧಾನಗಳಿವೆ. ಕೆಲವು ಸರ್ಕಾರಗಳು ರಾಜಕೀಯ ಕಾರಣಕ್ಕಾಗಿ ತಮ್ಮ ಪ್ರಜೆಗಳ ಅಂತೆಯೇ ವಿದೇಶಿಯರ ಆಂತರಿಕ ಚಲನೆಯನ್ನು

ನಿರ್ಬಂಧಿಸುತ್ತವೆ. ನಿರಂಕುಶ ಬಂಧನಗಳು (ಮೇಲಿನ 9ನೇ ಕಲಮು ನೋಡಿ) ಆಚರಣೆಯಲ್ಲಿ ಮುಂದುವರಿದುಕೊಂಡೇ ಇವೆ, ಅವರುಗಳ ರಾಜಕೀಯ ಪ್ರತಿರೋಧ ಅಥವಾ ಭಿನ್ನಾಭಿಪ್ರಾಯಕ್ಕಾಗಿ, ನಾಗರಿಕರನ್ನು ಹದ್ದುಬಸ್ತಿನಲ್ಲಿಡುವ ಸಾಧನವಾಗಿ ದುಡಿಮೆಪಾಳಯಗಳು ಮುಂದುವರಿದುಕೊಂಡೇ ಇವೆ. ಇಂಥಾ ನ್ಯಾಯಬಾಹಿರ ಚಟುವಟಿಕೆಗಳನ್ನು ಸಮರ್ಥಿಸಿಕೊಳ್ಳಲು ಸರ್ಕಾರಗಳು ನ್ಯಾಯಬದ್ಧವೆಂದು ಮೇಲ್ನೋಟಕ್ಕೆ ತೋರುವ ಕೃತಕ ಕಾರಣಗಳನ್ನು ನೀಡಿದಾಗ ಈ ಕೃತ್ಯಗಳು ಮರೆಮಾಚಲ್ಪಡುತ್ತವೆ.

ಆಂತರಿಕ ಕಲಹ ಮತ್ತು/ಅಥವಾ ಸಶಸ್ತ್ರಘರ್ಷಣೆಗಳ ಸಂದರ್ಭಗಳಲ್ಲಿ ಜನರ ವ್ಯಾಪಕವಾದ ಸ್ಥಾನಪಲ್ಲಟಗಳೂ ಮತ್ತು ಭಾರೀ ಪ್ರಮಾಣದ ಜನವಲಸೆಗಳೂ ಸಂಭವಿಸುತ್ತವೆ. ಇವೆಲ್ಲವೂ ಬಹುಪಾಲು ತಮ್ಮ ಮನೆಗಳಿಗೆ ಮತ್ತೆ ವಾಪಸಾಗುವ ಖಾತರಿ ಇಲ್ಲದ ಬಲಾತ್ಕಾರದ ಚಲನೆಗಳು, ಹಾಗಾಗಿ ಅವು ಚಲನೆಯ ಸ್ವಾತಂತ್ರ್ಯದ ತತ್ವದ ನಿರಾಕರಣೆಯಾಗಿವೆ. ಪ್ರಥಮತಃ ಮೂಲಭೂತ ಮಾನವಹಕ್ಕುಗಳ ಮತ್ತು ಸ್ವಾತಂತ್ರ್ಯಗಳ ಉಲ್ಲಂಘನೆಯಿಂದ ಹೊರಹೊಮ್ಮುವ ಈ ಘಟನಾವಳಿಗಳ ಅನೇಕ ಉದಾಹರಣೆಗಳಿರುವುದು ವಿಷಾದನೀಯ.

### ಕಲಮು *14.*

*1. ಪ್ರತಿಯೊಬ್ಬನಿಗೂ ಕಿರುಕುಳದಿಂದಾಗಿ ಬೇರೆ ದೇಶಗಳ ರಾಜಕೀಯ ಆಶ್ರಯ ಕೇಳುವ ಹಾಗೂ ಅನುಭವಿಸುವ ಹಕ್ಕಿರುತ್ತದೆ.*

*2. ರಾಜಕೀಯೇತರ ಅಪರಾಧಗಳಿಂದಾಗಿ, ಯಥಾರ್ಥವಾಗಿ ಉದ್ಭವಿಸಿದ ವಿಚಾರಣೆಗಳ ಪ್ರಕರಣಗಳಲ್ಲಿ, ಅಥವಾ ವಿಶ್ವಸಂಸ್ಥೆಯ ಉದ್ದೇಶಗಳು ಮತ್ತು ತತ್ವಗಳಿಗೆ ವಿರೋಧವಾದ ಕೃತ್ಯಗಳ ಸಂದರ್ಭದಲ್ಲಿ ಈ ಹಕ್ಕನ್ನು ಆವಾಹಿಸಲಾಗದು.*

### *ರಾಜಕೀಯ ಆಶ್ರಯವೆಂಬುದರ ಅರ್ಥವೇನು ?*

ರಾಜಕೀಯ ಆಶ್ರಯವೆಂಬುದು, ಕಿರುಕುಳದ ಭಯದಿಂದ ಪ್ರದೇಶವನ್ನು ತ್ಯಜಿಸಿದ ವ್ಯಕ್ತಿಗಳಿಗೆ ಆಶ್ರಯ ಮತ್ತು ರಕ್ಷಣೆಯ ಅವಕಾಶಗಳನ್ನು ಸೂಚಿಸುತ್ತದೆ (ಭಾಗ I, ಪ್ರಶ್ನೆ 45ನ್ನು ಸಹ ನೋಡಿರಿ). ರಾಜಕೀಯ ಆಶ್ರಯದ ಹಕ್ಕನ್ನು ಸಾರ್ವತ್ರಿಕವಾಗಿ ಕ್ರೋಢೀಕರಿಸಿರುವುದಿಲ್ಲ. ಅಸ್ತಿತ್ವದಲ್ಲಿರುವ ಪ್ರಾದೇಶಿಕ ದಸ್ತಾವೇಜುಗಳೆಂದರೆ ಅಮೇರಿಕಾ ರಾಷ್ಟ್ರ ಸಂಘಟನೆ ಸ್ಥಿರೀಕರಿಸಿರುವ ಒಡಂಬಡಿಕೆಗಳು ಮಾತ್ರ: 1928ರಲ್ಲಿ ಸ್ವೀಕೃತಗೊಂಡು, 21ನೇ ಮೇ 1929ರಲ್ಲಿ ಜಾರಿಗೊಂಡ ರಾಜಕೀಯ ಆಶ್ರಯದ ಮೇಲಿನ ಓ.ಎ.ಎಸ್. ಒಡಂಬಡಿಕೆ; 1933ರಲ್ಲಿ ಸ್ವೀಕೃತವಾಗಿ, 28ನೇ ಮಾರ್ಚ್ 1935ರಲ್ಲಿ ಜಾರಿಗೊಂಡ ರಾಜಕೀಯ ಆಶ್ರಯದ ಮೇಲಿನ ಓ.ಎ.ಎಸ್. ಒಡಂಬಡಿಕೆ; 1954ರಲ್ಲಿ ಸ್ವೀಕೃತಗೊಂಡು 29 ಡಿಸೆಂಬರ್ 1954ರಲ್ಲಿ ಜಾರಿಗೊಂಡ, ರಾಜತಾಂತ್ರಿಕ ಆಶ್ರಯದ ಮೇಲಿನ ಓ.ಎ.ಎಸ್. ಒಡಂಬಡಿಕೆ. ಅದೇನೇ ಇದ್ದರೂ ರಾಜಕೀಯ ಆಶ್ರಯ ನೀಡುವುದು ತನ್ನ ವಿವೇಚನೆಯ ಮೇಲೆ ರಾಷ್ಟ್ರವು

ಚಲಾಯಿಸಬಹುದಾದ ಅದರ ಸಾರ್ವಭೌಮ ವಿಶೇಷಾಧಿಕಾರವಾಗಿದೆ. ಕೆಲವು ದೇಶಗಳು ಈ ಕಲಮನ್ನು ತುಂಬಾ ಸಂಕುಚಿತ ರೀತಿಯಲ್ಲಿ ಅರ್ಥೈಸಿದರೆ ಇನ್ನುಳಿದವರು ಹೆಚ್ಚು ಉದಾರವಾಗಿದ್ದು, ಆಗಾಗ್ಗೆ ಗಂಭೀರ ಕಾರಣವಿರುವ ಮನವಿದಾರರನ್ನು ಉಳಿಸಿಕೊಳ್ಳುತ್ತಾರೆ.

***ಕಲಮು 15.***

*1. ಪ್ರತಿಯೊಬ್ಬರಿಗೂ ರಾಷ್ಟ್ರೀಯತೆಯ ಹಕ್ಕಿದೆ.*

*2. ಯಾರೊಬ್ಬರಿಂದಲೂ ಅವರ ರಾಷ್ಟ್ರೀಯತೆಯನ್ನು ಸ್ವೇಚ್ಛಾನುಸಾರ ಕಸಿದುಕೊಳ್ಳತಕ್ಕದ್ದಲ್ಲ, ಅಥವಾ ರಾಷ್ಟ್ರೀಯತೆಯನ್ನು ಬದಲಾಯಿಸುವ ಹಕ್ಕನ್ನು ನಿರಾಕರಿಸತಕ್ಕದ್ದಲ್ಲ.*

### *ಜನರಿಗೆ ಒಂದು ರಾಷ್ಟ್ರೀಯತೆಯ ಅಗತ್ಯವೇನು?*

ವಿಶ್ವವೇ ಒಂದು ರಾಷ್ಟ್ರವಾಗಿದ್ದು, ಎಲ್ಲ ಜನರಿಗೂ ವಿಶ್ವವ್ಯಾಪಿ ಶಾಸನದಡಿಯಲ್ಲಿ ಸಮಾನಹಕ್ಕುಗಳಿದ್ದಿದ್ದರೆ, ರಾಷ್ಟ್ರೀಯತೆಯ ಅಗತ್ಯವಿರುತ್ತಿರಲಿಲ್ಲ. ಅದು ಹಾಗಿಲ್ಲವಾದ್ದರಿಂದ ರಾಷ್ಟ್ರೀಯತೆಯೆಂಬುದು, ಸಮಾಜದೊಳಗಡೆ ಮನುಷ್ಯನ ಭೌತಿಕ ಹಾಗೂ ಬೌದ್ಧಿಕ ಯೋಗಕ್ಷೇಮವೆರಡಕ್ಕೂ ಅಗತ್ಯವಾದ ಗುಣಧರ್ಮವಾಗಿದೆ. ರಾಷ್ಟ್ರೀಯತೆ ಒಬ್ಬ ಮನುಷ್ಯನಿಗೆ ವ್ಯಕ್ತಿತ್ವವನ್ನು ಕಲ್ಪಿಸುತ್ತದೆ. ಭೌತಿಕವಾದ ಅರ್ಥದಲ್ಲಿ ಈ ವ್ಯಕ್ತಿತ್ವ ಒಂದು ಭೌಗೋಳಿಕ ಸ್ಥಳಕ್ಕೆ ಸಂಬಂಧಿಸಿದೆ ಮತ್ತು ಆ ದೇಶದ ವ್ಯಾಪ್ತಿಯಲ್ಲಿ ಜಾರಿಯಲ್ಲಿರುವ ಶಾಸನದತ್ತ ರಕ್ಷಣೆಗಳಿಗೆ ತನ್ನಷ್ಟಕ್ಕೇ ಅರ್ಹನನ್ನಾಗಿಸುತ್ತದೆ. ದೇಶಗಳಿಗೆ, ಬೇರೆ ದೇಶಗಳಲ್ಲಿರುವ ತನ್ನ ರಾಷ್ಟ್ರೀಯರ ಬಗ್ಗೆಯೂ ಸಹ ಜವಾಬ್ದಾರಿಗಳಿವೆ. ವ್ಯಕ್ತಿತ್ವದ ದೃಷ್ಟಿಯಿಂದ, ರಾಷ್ಟ್ರೀಯತೆ ಮನುಷ್ಯನಿಗೆ ದೇಶಾಭಿಮಾನವನ್ನೂ ಆತ್ಮಾಭಿಮಾನವನ್ನೂ ಕಲ್ಪಿಸುತ್ತದೆ. ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಅಂತರರಾಷ್ಟ್ರೀಯ ಒಡಂಬಡಿಕೆಯ 24ನೇ ಕಲಮು ಪ್ರತಿಯೊಂದು ಮಗುವಿಗೂ ರಾಷ್ಟ್ರೀಯತೆಯನ್ನು ಪಡೆದುಕೊಳ್ಳಲು ಇರುವ ಹಕ್ಕನ್ನು ಸ್ಪಷ್ಟ ರೀತಿಯಲ್ಲಿ ನಮೂದಿಸಿದೆ.

### *ರಾಷ್ಟ್ರೀಯತೆ ಕಸಿಯಲ್ಪಟ್ಟ ಜನರಿಗೆ ಯಾವ ರಕ್ಷಣೆಗಳಿದ್ದಾವೆ?*

ಇಡೀ ರಾಷ್ಟ್ರೀಯತೆಯ ಪ್ರಶ್ನೆಯನ್ನು ರಾಜಕೀಯ ವಿವಾದಗಳು ಮತ್ತು ಘರ್ಷಣೆಗಳು ಆಗಾಗ್ಗೆ ಸುತ್ತಿಕೊಂಡಿರುತ್ತವೆ. ಇತ್ತೀಚಿನ ದಿನಗಳಲ್ಲಿ ಅನೇಕ ಹಿಂಸಾತ್ಮಕ ಘರ್ಷಣೆಗಳಲ್ಲಿ ಬುಡಕಟ್ಟು ರಾಷ್ಟ್ರೀಯತೆ ಒಂದು ಗಣನೀಯ ಅಂಶವಾಗಿದೆ. ಹೊಸ ರಾಷ್ಟ್ರಗಳ ಉಗಮದ ಜತೆಜತೆಗೇ ಜನಪೀಡನ ಮತ್ತು ಹೊರದಬ್ಬುವಿಕೆಯೂ ನಡೆಯುತ್ತಿದ್ದು ದೇಶರಹಿತ ಸ್ಥಿತಿ ವಿಸ್ತಾರಗೊಳ್ಳುತ್ತಿದೆ. ಈಗಿನ ನಿರಾಶ್ರಿತ ಜನಸಂಖ್ಯೆಯ ಗಣನೀಯ ಭಾಗವಾಗಿರುವ ಅಲ್ಪಸಂಖ್ಯಾತರು ನಿರ್ದಿಷ್ಟವಾಗಿ ಬಾಧಿತರಾಗಿದ್ದಾರೆ.

ದೇಶರಹಿತ ಸ್ಥಿತಿಯನ್ನು ಕಡಿತಗೊಳಿಸುವುದರ ಮೇಲಿನ ಒಡಂಬಡಿಕೆ (1961)[85] ದೇಶರಹಿತರಾಗಿಬಿಡುವ ಅದರ ಭೂಭಾಗದಲ್ಲಿ ಜನಿಸಿದ ಯಾರಿಗೇ ಆಗಲಿ ರಾಷ್ಟ್ರೀಯತೆ ನೀಡುವುದಕ್ಕೆ ರಾಷ್ಟ್ರಗಳನ್ನು ಬಾಧ್ಯಸ್ಥರನ್ನಾಗಿಸಲು ಪ್ರಯತ್ನಿಸುತ್ತದೆ ಮತ್ತು ಅದರಿಂದಾಗಿ ದೇಶರಹಿತರಾಗಿಬಿಡುವ ಯಾರಿಗೇ ಆಗಲಿ ರಾಷ್ಟ್ರೀಯತೆಯನ್ನು ನಿರಾಕರಿಸುವುದನ್ನು ನಿಷೇಧಿಸುತ್ತದೆ. ಜನಾಂಗ, ಬುಡಕಟ್ಟು, ಧಾರ್ಮಿಕ ಅಥವಾ ರಾಜಕೀಯ ಆಧಾರದ ಮೇಲೆ, ಯಾವುದೇ ಸಂದರ್ಭದಲ್ಲೂ ಅವನ ಅಥವಾ ಅವಳ ರಾಷ್ಟ್ರೀಯತೆಯನ್ನು ಕಸಿದುಕೊಳ್ಳತಕ್ಕದ್ದಲ್ಲ.

## ಕಲಮು *16.*

*1.* *ಪೂರ್ಣ ವಯಸ್ಕರಾದ ಹೆಣ್ಣು ಮತ್ತು ಗಂಡು, ಜನಾಂಗ, ರಾಷ್ಟ್ರೀಯತೆ ಅಥವಾ ಧರ್ಮಗಳ ಕಾರಣದ ಯಾವುದೇ ಇತಿಮಿತಿಗಳಿಲ್ಲದೆ ಮದುವೆಯಾಗುವ, ಕುಟುಂಬವನ್ನು ಸ್ಥಾಪಿಸುವ ಹಕ್ಕನ್ನು ಹೊಂದಿರುತ್ತಾರೆ. ಮದುವೆಗೆ, ಮದುವೆಯಾಗಿರುವಾಗ, ಮತ್ತು ಅದರ ರದ್ದತಿಯಲ್ಲಿ ಸಮಾನ ಹಕ್ಕನ್ನು ಹೊಂದಿರುತ್ತಾರೆ.*

*2.* *ಉದ್ದೇಶಿತ ದಂಪತಿಗಳು ಸ್ವತಂತ್ರ ಮತ್ತು ಪೂರ್ಣ ಸಮ್ಮತಿಯಿಂದ ಮಾತ್ರ ಮದುವೆ ಜರುಗತಕ್ಕದ್ದು.*

*3.* *ಕುಟುಂಬವು ಸಮಾಜದ ಸಹಜ ಮತ್ತು ಮೂಲಭೂತ ಗುಂಪು ಘಟಕವಾಗಿದೆ ಮತ್ತು ಸಮಾಜ ಮತ್ತು ರಾಷ್ಟ್ರದ ಪೋಷಣೆಗೆ ಅರ್ಹವಾಗಿದೆ.*

ಮದುವೆಯ ಬಗ್ಗೆ ಇರುವ ಧೋರಣೆಗಳು ವಿಭಿನ್ನವಾಗಿವೆ, ಮತ್ತು ಕೌಟುಂಬಿಕ ಶಾಸನಗಳು ಕೆಲವೊಮ್ಮೆ ಧಾರ್ಮಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಮಾದರಿಗಳನ್ನೂ ಆಧರಿಸಿವೆ. 'ಸ್ವತಂತ್ರ ಮತ್ತು ಪೂರ್ಣ ಸಮ್ಮತಿ' ಕೆಲವೊಂದು ಸಾಂಸ್ಕೃತಿಕ ಸಂದರ್ಭದಲ್ಲಿ ವಿಶೇಷ ಸಮಸ್ಯೆಗಳನ್ನೊಡ್ಡುತ್ತವೆ. ಈ ವಿಷಯಕ್ಕೆ ಸಂಬಂಧಿಸಿದ ನಿಯಮಗಳನ್ನು, ವಿಶ್ವಸಂಸ್ಥೆಯ ಮದುವೆಗೆ ಸಮ್ಮತಿ, ಮದುವೆಯ ವಯೋಮಿತಿ ಮತ್ತು ಮದುವೆಯ ನೋಂದಾವಣೆಯ ಮೇಲಿನ ಒಡಂಬಡಿಕೆ (1962)[86] ಮತ್ತು 1965ರಲ್ಲಿ ವಿಶ್ವಸಂಸ್ಥೆಯ ಮಹಾಧಿವೇಶನ, ಇದೇ ವಿಷಯದ ಮೇಲೆ ಸ್ವೀಕಾರ ಮಾಡಿರುವ ಶಿಫಾರಸಿನಲ್ಲಿ ಹೆಚ್ಚು ವಿವರವಾಗಿ ನಮೂದಿಸಲಾಗಿದೆ.

ಕುಟುಂಬದ ಕಲ್ಪನೆ, ಪಾಶ್ಚಾತ್ಯ ಆಧಾರದ 'ಅಣುರೂಪಿ ಕುಟುಂಬ', ಮತ್ತು ಒಂದೇ ತಂದೆ ತಾಯಿಗಳಿರುವ ಕುಟುಂಬದಿಂದ ಹಿಡಿದು, ಪ್ರಪಂಚದ ಅನೇಕ ಭಾಗಗಳಲ್ಲಿರುವ ಲಂಬಿಸಿದ ಕುಟುಂಬದವರೆಗೆ ವಿಸ್ತೃತವಾದ ವಿಭಿನ್ನತೆಗೊಳಪಟ್ಟಿದೆ. ಆದಾಗ್ಯೂ, ಯಾವುದೇ ಸಮಾಜದಲ್ಲಿ ಅದು ಮೂಲಘಟಕವಾಗಿದೆ ಮತ್ತು ಅದನ್ನು ಆರ್ಥಿಕ, ಸಮಾಜಿಕ, ಮತ್ತು ಸಾಂಸ್ಕೃತಿಕ ಹಕ್ಕುಗಳ ಅಂತರರಾಷ್ಟ್ರೀಯ ಒಡಂಬಡಿಕೆಯ 10ನೇ ಕಲಮಿನಲ್ಲಿ, ಮತ್ತು ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಅಂತರರಾಷ್ಟ್ರೀಯ ಒಡಂಬಡಿಕೆಯ 23ನೇ ಕಲಮಿನಲ್ಲಿ (ಭಾಗ Iರ 12 ಮತ್ತು

17ನೇ ಪ್ರಶ್ನೆಗಳನ್ನು ಸಹ ನೋಡಿರಿ) ವ್ಯವಸ್ಥಿತವಾಗಿ ನಿರೂಪಿಸಿರುವಂತೆ ರಾಷ್ಟ್ರವು ಅದನ್ನು ರಕ್ಷಿಸಲು ಬದ್ಧವಾಗಿದೆ.

### *ಕಲಮು 17.*

*1. ಪ್ರತಿಯೊಬ್ಬನಿಗೂ ಏಕಾಂಗಿಯಾಗಿ ಅಥವಾ ಇತರರ ಜತೆಗೂಡಿ ಆಸ್ತಿಯ ಒಡೆತನದ ಹಕ್ಕಿರುತ್ತದೆ.*

*2. ಯಾರ ಆಸ್ತಿಯನ್ನೂ ಸ್ವೇಚ್ಛಾನುಸಾರ ಕಸಿದುಕೊಳ್ಳತಕ್ಕದ್ದಲ್ಲ.*

ಮಾನವನ ಮತ್ತು ನಾಗರಿಕನ ಹಕ್ಕುಗಳ ಫ್ರೆಂಚ್ ಘೋಷಣೆಯಲ್ಲಿ (1789) ಸ್ವಾತಂತ್ರ್ಯ, ಭದ್ರತೆ ಮತ್ತು ದಬ್ಬಾಳಿಕೆಯ ವಿರುದ್ಧ ಪ್ರತಿರೋಧಗಳ ಸಮಾನಸ್ತರದಲ್ಲೇ ಆಸ್ತಿಯನ್ನೂ ಇಡಲಾಗಿದೆ. ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ 200 ವರ್ಷಗಳ ನಂತರ, ಮಾನವಹಕ್ಕುಗಳಿಗೆ ಸಂಬಂಧಿಸಿದ ಒಡೆತನದ ಕಲ್ಪನೆ ರೂಪುಗೊಂಡಿದೆ ಮತ್ತು ಇನ್ನೂ ಸಹ ತೊಡಕಿನ ಮತ್ತು ವಿವಾದಗ್ರಸ್ತ ವಿಷಯವಾಗಿಯೇ ಉಳಿದಿದೆ. ಅಂತರರಾಷ್ಟ್ರೀಯ ಒಡಂಬಡಿಕೆಗಳ ಸ್ವೀಕಾರದ ಕಾಲದಲ್ಲಿ ಪ್ರಚಲಿತವಿದ್ದ ಸೈದ್ಧಾಂತಿಕ ತಿಕ್ಕಾಟಗಳಿಂದಾಗಿ ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆಯಲ್ಲಿ ನಮೂದಿಸಿದ್ದ ಹಕ್ಕುಗಳಲ್ಲಿ ಆಸ್ತಿಯ ಹಕ್ಕೊಂದು ಮಾತ್ರ ಒಡಂಬಡಿಕೆಗಳಲ್ಲಿ ಸೇರಿರುವುದಿಲ್ಲ. ಅದೇನಿದ್ದರೂ ಬೌದ್ಧಿಕ ಆಸ್ತಿಯ ಹಕ್ಕು ಸೇರಿದಂತೆ ಆಸ್ತಿ ಒಡೆತನದ ಹಕ್ಕಿನ ಬಗ್ಗೆ ಯಾವುದೇ ತಾರತಮ್ಯ ಸ್ಪಷ್ಟವಾಗಿ ಅಂತರರಾಷ್ಟ್ರೀಯ ಮಾನವಹಕ್ಕುಗಳ ಶಾಸನದ ವ್ಯಾಪ್ತಿಯಲ್ಲಿ ಬರುತ್ತದೆ.

### *ಕಲಮು 18.*

*ಪ್ರತಿಯೊಬ್ಬರೂ ಆಲೋಚನೆ, ಆತ್ಮಸಾಕ್ಷಿ ಮತ್ತು ಧಾರ್ಮಿಕ ಸ್ವಾತಂತ್ರ್ಯಗಳ ಹಕ್ಕನ್ನು ಹೊಂದಿರುತ್ತಾರೆ: ಈ ಹಕ್ಕು ಧರ್ಮವನ್ನು ಅಥವಾ ನಂಬಿಕೆ ಮತ್ತು ಸ್ವಾತಂತ್ರ್ಯಗಳನ್ನು, ಏಕಾಂಗಿಯಾಗಿ ಆಗಲೀ, ಅಥವಾ ಇತರರ ಜತೆ ಸಾಮುದಾಯಿಕವಾಗಿ ಆಗಲೀ, ಸಾರ್ವಜನಿಕವಾಗಿಯಾಗಲೀ ಅಥವಾ ಖಾಸಗಿಯಾಗಿ ಆಗಲೀ ಬದಲಾಯಿಸಿಕೊಳ್ಳುವ ಮತ್ತು ಅವನ ಧರ್ಮ ಅಥವಾ ನಂಬಿಕೆಯನ್ನು ಬೋಧನೆಯಲ್ಲಿ, ಆಚರಣೆಯಲ್ಲಿ, ಆರಾಧನೆಯಲ್ಲಿ, ಅನುಸರಣೆಯಲ್ಲಿ ಪ್ರಕಟಪಡಿಸುವ ಸ್ವಾತಂತ್ರ್ಯವನ್ನು ಒಳಗೊಂಡಿದೆ.*

ಆಲೋಚನೆ, ಆತ್ಮಸಾಕ್ಷಿ, ಧಾರ್ಮಿಕ ಅಥವಾ ನಂಬಿಕೆಯ ಸ್ವಾತಂತ್ರ್ಯಗಳು ಮೂಲಭೂತ ಸ್ವಾತಂತ್ರ್ಯಗಳಾಗಿದ್ದು, ತುರ್ತುಸ್ಥಿತಿಯ ಸಂದರ್ಭದಲ್ಲೂ ಅಮಾನತುಗೊಳ್ಳದಂಥವುಗಳಾಗಿವೆ. ಧಾರ್ಮಿಕ ನಂಬಿಕೆಗಳುಳ್ಳವರು ಇಲ್ಲದವರಿಬ್ಬರಿಗೂ ಒಂದೇ ರೀತಿಯ ರಕ್ಷಣೆಯಿರಬೇಕು. ಅವನ ಅಥವಾ ಅವಳ ಧರ್ಮ ಅಥವಾ ನಂಬಿಕೆಯ ಕಾರಣಕ್ಕಾಗಿ ಯಾರದೇ ವಿರುದ್ಧ ತಾರತಮ್ಯ ಕೂಡದು, ಮತ್ತು ಬೇರಾರದನ್ನಾದರೂ ಅನುಸರಿಸುವಂತೆ ಒತ್ತಾಯವೂ ಕೂಡದ್ದು. ತನ್ನದೇ ಆದ ಧರ್ಮ ಅಥವಾ ನಂಬಿಕೆಯನ್ನು ಆಚರಿಸಲು (ಏಕಾಂಗಿಯಾಗಿಯಾಗಲೀ,

ಇನ್ನಿತರರ ಜತೆ ಸಾಮುದಾಯಕವಾಗಿಯಾಗಲೀ) ಇರುವ ಸ್ವಾತಂತ್ರ್ಯ, ವಿಸ್ತೃತವಾದ ಚಟುವಟಿಕೆಗಳು ಮತ್ತು ಪದ್ಧತಿಗಳ ಶ್ರೇಣಿಗೆ ಸಂಬಂಧಿಸಿದೆ. (ವಿಶಿಷ್ಟ ಸಮಾರಂಭಗಳು, ಆಹಾರ ನಿಯಮಗಳು, ವಿಶಿಷ್ಟ ಉಡುಪುಗಳು, ಧಾರ್ಮಿಕ ಶಾಲೆಗಳ ಸ್ಥಾಪನೆಯ ಸ್ವಾತಂತ್ರ್ಯ, ತಜ್ಞರ ಸಭೆ ಮತ್ತು ಧಾರ್ಮಿಕ ಪುಸ್ತಕಗಳನ್ನೂ ಪ್ರಕಟಣೆಗಳನ್ನೂ ಹಂಚಲು, ಮತ್ತು ನಿರ್ದಿಷ್ಟ ಆರಾಧನಾ ಸ್ಥಳಗಳನ್ನು ಹೊಂದುವ ಹಕ್ಕುಗಳು ಇತ್ಯಾದಿ).

ಒಂದೇ ಅಧಿಕೃತ ಧರ್ಮವನ್ನು ಎಲ್ಲರೂ ಆಚರಿಸುವಂತೆ ಪ್ರೋತ್ಸಾಹಿಸುವುದರಿಂದ ಹಿಡಿದು, ಯಾವುದೇ ಧಾರ್ಮಿಕ ನಂಬಿಕೆಗಳಿಗೂ ಪ್ರೋತ್ಸಾಹಿಸದೇ ಅಸಮ್ಮತಿಸುವ, ವಿಶಾಲ ಶ್ರೇಣಿಯ ವಿಭಿನ್ನ ಧಾರ್ಮಿಕ ಧೋರಣೆಗಳನ್ನು ರಾಷ್ಟ್ರಗಳು ಹೊಂದಿವೆ. ಅವನು ಅಥವಾ ಅವಳು ಬದುಕುತ್ತಿರುವ ಸಾಮಾಜಿಕ ಅಥವಾ ರಾಜಕೀಯ ಸಂದರ್ಭಕ್ಕೆ ಒಬ್ಬ ವ್ಯಕ್ತಿಯ ಆತ್ಮಸಾಕ್ಷಿಯನ್ನು ಸಂಬಂಧಿಸುವ ವಿವಾದಾತ್ಮಕ ಸಮಸ್ಯೆಯೂ ಸಹ ಇದೆ. ಈ ಸ್ವಾತಂತ್ರ್ಯದ ಬಗ್ಗೆ ಏನೇ ವಿವಾದಾತ್ಮಕ ಗ್ರಹಿಕೆಗಳಿದ್ದಾಗ್ಯೂ ಧರ್ಮ ಹಾಗೂ ನಂಬಿಕೆಯ ಆಧಾರದ ಮೇಲಿನ ಎಲ್ಲ ಬಗೆಯ ಅಸಹಿಷ್ಣುತೆ ಮತ್ತು ತಾರತಮ್ಯ ನಿರ್ಮೂಲನಾ ಘೋಷಣೆಯ ಸ್ವೀಕಾರದ ಮೂಲಕ, ಈ ವಲಯಗಳಲ್ಲಿರುವ ಅಸಹಿಷ್ಣುತೆ ಮತ್ತು ತಾರತಮ್ಯಗಳ ಬಗ್ಗೆ ಅಂತರರಾಷ್ಟ್ರೀಯ ಸಮುದಾಯದ ಕಾಳಜಿ ಸಂಶಯರಹಿತವಾಗಿ ರುಜುವಾತಾಗಿದೆ. (ವಿಶ್ವಸಂಸ್ಥೆಯ ಮಹಾಧಿವೇಶನದ ನಿರ್ಣಯ 36/55, 25ನೇ ನವೆಂಬರ್ 1981).

ಈ ಘೋಷಣೆಯ ಅನುಷ್ಠಾನವನ್ನು ಉತ್ತೇಜಿಸಲು ಧಾರ್ಮಿಕ ಅಸಹಿಷ್ಣುತೆಯ ಮೇಲಿನ ಒಬ್ಬ ವಿಶೇಷ ಸಾಮರಸ್ಯಾಧಿಕಾರಿ ಮಾನವಹಕ್ಕುಗಳ ಆಯೋಗದಿಂದ 1986ರಲ್ಲಿ ನೇಮಕಗೊಂಡಿದ್ದಾನೆ (ಭಾಗ I, ಪ್ರಶ್ನೆ 51ನ್ನೂ ನೋಡಿ). 1955ರಲ್ಲಿ ವಿಶೇಷ ಸಾಮರಸ್ಯಾಧಿಕಾರಿ ಸಲ್ಲಿಸಿದ ವರದಿಯಲ್ಲಿ, ವಾಸ್ತವಿಕವಾಗಿ ವಿಶ್ವದ ಎಲ್ಲ ಭಾಗಗಳಿಂದಲೂ ತನ್ನ ಆಯ್ಕೆಯ ಧರ್ಮ ಅಥವಾ ನಂಬಿಕೆಯನ್ನು ಹೊಂದುವ ಹಕ್ಕಿನ ನಿರಾಕರಣೆಯಿಂದ ಹಿಡಿದು, ಈ ಕಾರಣಗಳಿಗಾಗಿ, ರಾಷ್ಟ್ರಗಳು ಮಾಡುತ್ತಿರುವ ತಾರತಮ್ಯದವರೆಗಿನ ಶ್ರೇಣಿಯ ದೂರುಗಳು ಬಂದಿರುವುದಾಗಿ ಹೇಳಲಾಗಿದೆ. ಅತಿರೇಕದ ಮತ್ತು ಮತಾಂಧತೆಯ ಅಭಿಪ್ರಾಯಗಳ ಹಬ್ಬುವಿಕೆಯಿಂದಾಗಿ, ಮತ್ತು ಜನರ ಜೀವ, ಸ್ವಾತಂತ್ರ, ಭದ್ರತೆಗೆ ಬೆದರಿಕೆಗಳು, ಸ್ವೇಚ್ಛಾನುಸಾರಿ ಬಂಧನ, ಸೆರೆವಾಸ ಮತ್ತು ಚಿತ್ರಹಿಂಸೆಗಳು ಒಳಗೊಂಡಂತೆ, ಈ ಮೇಲ್ಕಂಡ ಅಭಿಪ್ರಾಯಗಳ ಬೆನ್ನುಹತ್ತಿ ಎಸಗುತ್ತಿರುವ ಅಪರಾಧಗಳಿಂದಾಗಿ ವಿಶೇಷ ತೊಡಕು ತೊಂದರೆಗಳು ಎದುರಾಗಿವೆ. ವಿಶ್ವಸಂಸ್ಥೆಯ ಮಹಾಧಿವೇಶನ 'ಎಲ್ಲ ದ್ವೇಷದ, ಅಸಹಿಷ್ಣುತೆಯ ಘಟನೆಗಳನ್ನೂ ಹಿಂಸಾಕೃತ್ಯಗಳನ್ನೂ, ಧಾರ್ಮಿಕ ಅಂಧಾಭಿಮಾನ ಮತ್ತು ಧರ್ಮ ಹಾಗೂ ನಂಬಿಕೆಗಳ ಬಗ್ಗೆ ಅಸಹಿಷ್ಣುತೆಯಿಂದಾಗಿ ಪ್ರೇರೇಪಿಸಲ್ಪಟ್ಟ ಬೆದರಿಕೆ ಮತ್ತು ಬಲಾತ್ಕಾರಗಳನ್ನೂ' ಇತ್ತೀಚೆಗೆ ಮತ್ತೆ ಖಂಡಿಸಿದೆ (ಮತದಾನವಿಲ್ಲದೆ 23 ಡಿಸೆಂಬರ್ 1994ರಲ್ಲಿ ಸ್ವೀಕರಿಸಿದ ನಿರ್ಣಯ 49/188).

ಮಿಲಿಟರಿ ಸೇವೆಗೆ ಆತ್ಮಸಾಕ್ಷಿ ಆಕ್ಷೇಪಣೆ, ಆಲೋಚನೆ, ಆತ್ಮಸಾಕ್ಷಿ ಮತ್ತು ಧಾರ್ಮಿಕ ಸ್ವಾತಂತ್ರ್ಯದ ಹಕ್ಕಿನ ನ್ಯಾಯಬದ್ಧ ಚಲಾವಣೆಯಾಗಿದೆಯೆಂದು, ಮಾನವಹಕ್ಕುಗಳ ಆಯೋಗ ಮಾನ್ಯ ಮಾಡಿದೆ (ನಿರ್ಣಯ 1993/84). ಕಡ್ಡಾಯ ಮಿಲಿಟರಿ ಸೇವೆ ಜಾರಿಯಲ್ಲಿರುವ ದೇಶಗಳು ಆತ್ಮಸಾಕ್ಷಿ ಆಕ್ಷೇಪಗಳಿರುವವರಿಗಾಗಿ ಬೇರೆ ರೀತಿಯ ಲೋಕಸೇವೆಯನ್ನು ಪ್ರಾರಂಭಿಸುವಂತೆ, ನಿರ್ಣಯವು ಆ ದೇಶಗಳಿಗೆ ಮನವಿ ಮಾಡಿದೆ.

**ಕಲಮು *19.***

*ಪ್ರತಿಯೊಬ್ಬನಿಗೂ ಅಭಿಪ್ರಾಯ ಹಾಗೂ ಅಭಿವ್ಯಕ್ತಿಯ ಸ್ವಾತಂತ್ರ್ಯದ ಹಕ್ಕಿದೆ: ಈ ಹಕ್ಕು ಯಾವುದೇ ಹಸ್ತಕ್ಷೇಪವಿಲ್ಲದೆ ಅಭಿಪ್ರಾಯ ಹೊಂದಿರುವ ಸ್ವಾತಂತ್ರ್ಯವನ್ನು ಮತ್ತು ಯಾವುದೇ ಮಾಧ್ಯಮದ ಮೂಲಕ ಹಾಗೂ ಎಲ್ಲೆಗಳ ಗಣನೆಯಿಲ್ಲದೆ, ಮಾಹಿತಿಗಳು ಮತ್ತು ವಿಚಾರಗಳನ್ನು ಹುಡುಕುವ, ಪಡೆದುಕೊಳ್ಳುವ ಮತ್ತು ಬಿತ್ತರಿಸುವ ಸ್ವಾತಂತ್ರ್ಯವನ್ನೊಳಗೊಂಡಿದೆ.*

ಈ ಹಕ್ಕುಗಳ ಚಲಾವಣೆ ಮತ್ತು ರಕ್ಷಣೆ ಯಾವುದೇ ಪ್ರಜಾಸತ್ತಾತ್ಮಕ ಸಮಾಜದ ಅತ್ಯಗತ್ಯ ಭಾಗವಾಗಿದೆ (ಕಲಮು 21ನ್ನೂ ಸಹ ನೋಡಿ). ಯಾವುದೇ ಮಾಧ್ಯಮದ ಮೂಲಕ ಮಾಹಿತಿ ಮತ್ತು ವಿಚಾರಗಳನ್ನು ಹುಡುಕುವ, ಪಡೆದುಕೊಳ್ಳುವ ಮತ್ತು ಬಿತ್ತರಿಸುವ ಸ್ವಾತಂತ್ರ್ಯ ಒಂದು ಅನಿರ್ಬಂಧಿತ ಮತ್ತು ಸ್ವತಂತ್ರ ಸಮೂಹ ಮಾಧ್ಯಮ ವ್ಯವಸ್ಥೆಯನ್ನು ಬಯಸುತ್ತದೆ.

ಅಭಿಪ್ರಾಯ ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹತ್ತಿಕ್ಕುವುದರ ಹಿಂದಿರುವ ಕಾರಣ ಭಯ: ಬದಲಿ ವಿಚಾರಗಳು ಮುಂದಿಡುವ ಸವಾಲುಗಳ ಭಯ; ಅಭಿಪ್ರಾಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ ಬೇರೆ ಪ್ರತಿಯೊಂದು ಸ್ವಾತಂತ್ರ್ಯವನ್ನೂ ಪಡೆದುಕೊಳ್ಳಲು ಮೂಲ ಸಾಧನವೆಂಬ ಜ್ಞಾನದಿಂದುಂಟಾಗುವ ಭಯ. ತಮ್ಮ ವ್ಯಾಪ್ತಿಯೊಳಗಡೆ ಈ ಸ್ವಾತಂತ್ರ್ಯಗಳನ್ನು ನಿರ್ಬಂಧಿಸುವಲ್ಲಿ ಸರ್ಕಾರಗಳು ಯಶಸ್ವಿಯಾದರೂ, ಅಂತಿಮವಾಗಿ ಸ್ವತಂತ್ರ ಆಲೋಚನೆ, ಅಭಿಪ್ರಾಯ, ಅಭಿವ್ಯಕ್ತಿಗಳನ್ನು ಹುಟ್ಟಡಗಿಸುವುದು ಅವುಗಳಿಂದ ಸಾಧ್ಯವಿಲ್ಲ. ಪುಸ್ತಕಗಳನ್ನು ನಿಷೇಧಿಸಿದ್ದರಿಂದ ಅವುಗಳು ಅಳಿಸಲ್ಪಡುವುದಿಲ್ಲ; ಅವುಗಳ ಪ್ರಕಟಣೆಯ ನಿಷೇಧದಿಂದ ಅವು ಬೇರೆಡೆ ಪ್ರಕಟಗೊಂಡು ಓದಲ್ಪಡುವುದನ್ನು ಅಥವಾ ಗೌಪ್ಯವಾದ ರೂಪದಲ್ಲಿ ಪ್ರಸಾರಗೊಳ್ಳುವುದನ್ನು ತಡೆಗಟ್ಟಲು ಸಾಧ್ಯವಿಲ್ಲ.

## ಸಮೂಹ ಮಾಧ್ಯಮ ಮತ್ತು ಮಾಹಿತಿ ಸ್ವಾತಂತ್ರ್ಯಗಳಿಗೆ ಅಂತರರಾಷ್ಟ್ರೀಯ ರಕ್ಷಣಾ ವಿಧಾನಗಳೇನಾದರೂ ಇವೆಯೇ?

ಈ ಬಗ್ಗೆ ವಿಶ್ವಸಂಸ್ಥೆಯ ಹಾಗೂ ಅದರ ತಜ್ಞ ವಿಭಾಗಗಳ ಚಟುವಟಿಕೆಗಳು ಮುಖ್ಯವಾಗಿ, ಅಭಿವ್ಯಕ್ತಿ ಸ್ವಾತಂತ್ರ್ಯ ಹಾಗೂ ಸಮೂಹ ಮಾಧ್ಯಮ ಸ್ವಾತಂತ್ರ್ಯಗಳ ರಕ್ಷಣೆಗಾಗಿ ಸಕ್ರಿಯವಾಗಿ ಕೆಲಸ ಮಾಡುತ್ತಿರುವ ವೃತ್ತಿನಿರತ ಘಟಕಗಳಿಗೆ ಮತ್ತು ಸರ್ಕಾರೇತರ ಸಂಘಟನೆಗಳಿಗೆ ಬೆಂಬಲ ನೀಡುವಂಥವುಗಳಾಗಿವೆ. 1989ರಿಂದ ಯುನೆಸ್ಕೋ ಅಂತರರಾಷ್ಟ್ರೀಯ ಮತ್ತು ರಾಷ್ಟ್ರೀಯ ಸ್ತರಗಳಲ್ಲಿ ಅನಿರ್ಬಂಧಿತ ಮಾಹಿತಿ ಪೂರೈಕೆಯನ್ನು ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಯಾವುದೇ ಅಡೆ ತಡೆಗಳಿಲ್ಲದಂತೆ, ಸುಧಾರಿತ ಸಮತೋಲನದ ಪ್ರಸರಣ ವ್ಯವಸ್ಥೆಯನ್ನು ಪ್ರೋತ್ಸಾಹಿಸುವ ಒಂದು ಹೊಸ ಸಂವಹನ ಕಾರ್ಯತಂತ್ರವನ್ನು ಸ್ವೀಕಾರ ಮಾಡಿದೆ. ಈ ಕಾರ್ಯತಂತ್ರದ ಕೆಳಗೆ ಯುನೆಸ್ಕೋ ಸಮೂಹ ಮಾಧ್ಯಮ ವೃತ್ತಿಗಳ ಬಗ್ಗೆ ಈ ಕೆಳಗಿನ ಪ್ರಾದೇಶಿಕ ವಿಚಾರ ಸಂಕಿರಣಗಳನ್ನು ಸಂಘಟಿಸಿದೆ: ಪೂರ್ವ ಮತ್ತು ಮಧ್ಯ ಯೂರೋಪು (ಪ್ಯಾರಿಸ್ 1989 ಮತ್ತು 1990); ಆಫ್ರಿಕಾ (ವಿಂಡೋಕ್ 1991); ಏಷ್ಯಾ (ಆಲ್‌ಮಾಟಿ, 1992); ಲ್ಯಾಟಿನ್ ಅಮೇರಿಕಾ ಮತ್ತು ಕ್ಯಾರಿಬಿಯನ್ (ಸ್ಯಾಂಟಿಯಾಗೊ, ಚಿಲಿ 1994); ಮತ್ತು ಅರಬ್ ದೇಶಗಳು (ಸನ್ನಾ, 1996). ಪ್ರಜಾಸತ್ತಾತ್ಮಕ ವಿನ್ಯಾಸಗಳಿಗೆ ಪರಿವರ್ತನಗೊಳ್ಳುತ್ತಿರುವ ದೇಶಗಳಲ್ಲಿ, ಸಮೂಹ ಮಾಧ್ಯಮ ಶಾಸನರಚನೆಗೆ ಯುನೆಸ್ಕೋ ಸಲಹೆಗಳನ್ನು ನೀಡುತ್ತದೆ. ಸಂಘರ್ಷದಲ್ಲಿ ತೊಡಗಿರುವ ದೇಶಗಳಲ್ಲಿ ಯುನೆಸ್ಕೋ ಪಕ್ಷಾತೀತ ವರದಿಗಳನ್ನು ಪ್ರೋತ್ಸಾಹಿಸುವುದಕ್ಕಾಗಿ ಸ್ವತಂತ್ರ ಮಾಧ್ಯಮಗಳಿಗೆ ಬೆಂಬಲ ನೀಡುತ್ತದೆ ಮತ್ತು ಅದರಿಂದಾಗಿ ಒಂದು ಸಂವಾದ ಮತ್ತು ಶಾಂತಿಯ ವಾತಾವರಣದ ನಿರ್ಮಾಣಕ್ಕೆ ಸಹಾಯ ಮಾಡುತ್ತದೆ.

ಈ ಹಕ್ಕುಗಳನ್ನು ಉತ್ತಮ ರೀತಿಯಲ್ಲಿ ರಕ್ಷಿಸುವ ವ್ಯಾವಹಾರಿಕ ಹಾಗೂ ಕ್ರಿಯಾ ರೂಪದ ಶಿಫಾರಸುಗಳನ್ನು ಮಾಡುವುದಕ್ಕಾಗಿ ಮಾನವಹಕ್ಕುಗಳ ಆಯೋಗವು ಅಭಿಪ್ರಾಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಗಳ ಹಕ್ಕಿನ ಮೇಲೆ 1993ರಲ್ಲಿ (ಭಾಗ I, ಪ್ರಶ್ನೆ 51ನ್ನೂ ಸಹ ನೋಡಿ) ಒಬ್ಬ ವಿಶೇಷ ಸಾಮರಸ್ಯಾಧಿಕಾರಿಯನ್ನು ನೇಮಿಸಿದೆ.

ಅಭಿವ್ಯಕ್ತಿ ಮತ್ತು ಮಾಹಿತಿ ಸ್ವಾತಂತ್ರ್ಯಗಳ ವಿಚಾರವನ್ನು ಅನೇಕ ಸಂದರ್ಭಗಳಲ್ಲಿ ಮಾನವಹಕ್ಕುಗಳ ಯೂರೋಪು ನ್ಯಾಯಾಲಯ ಮತ್ತು ಮಾನವಹಕ್ಕುಗಳ ಅಮೇರಿಕಾ ನ್ಯಾಯಾಲಯಗಳು ಪರಿಶೀಲಿಸಿವೆ (ಭಾಗ I, ಪ್ರಶ್ನೆ 68 ಮತ್ತು 80ನ್ನು ನೋಡಿ) ಮತ್ತು ಅವುಗಳ ತೀರ್ಮಾನಗಳು ಈ ವಲಯದಲ್ಲಿ ಒಂದು ರೂಢಿಗತ ಶಾಸನವನ್ನು ರೂಪಿಸುವುದಕ್ಕೆ ಸಹಾಯ ಮಾಡಿವೆ.




### *ಈ ಸ್ವಾತಂತ್ರ್ಯಗಳು ನಿರ್ಬಂಧ ರಹಿತವೇ?*

ಅಭಿಪ್ರಾಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಗಳ ಹಕ್ಕು ಚಲಾವಣೆ ಜತೆಯಲ್ಲಿ ವಿಶೇಷವಾದ ಕರ್ತವ್ಯಗಳನ್ನೂ ಜವಾಬ್ದಾರಿಗಳನ್ನೂ ಹೊಂದಿರುವ ದೆಸೆಯಿಂದಾಗಿ, ಕೆಲವು ನಿರ್ಬಂಧಗಳಿಗೂ ಒಳಪಡಬಹುದೆಂದು, ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಮೇಲಿನ ಅಂತರರಾಷ್ಟ್ರೀಯ ಒಡಂಬಡಿಕೆ ಹೇಳಿದೆ. ಆದರೆ ಅಂಥಾ ನಿರ್ಬಂಧಗಳು ಶಾಸನಾತ್ಮಕವಾಗಿ ನಮೂದಿಸಲ್ಪಟ್ಟದ್ದಾಗಿರಬೇಕು ಮತ್ತು

ಬೇರೆಯವರ ಹಕ್ಕು ಮತ್ತು ಪ್ರತಿಷ್ಠೆಯನ್ನು ಗೌರವಿಸುವುದಕ್ಕೆ, ರಾಷ್ಟ್ರೀಯ ಭದ್ರತೆಯ ರಕ್ಷಣೆಗೆ ಅಥವಾ ಸಾರ್ವಜನಿಕ ಸುವ್ಯವಸ್ಥೆಗೆ ಅಥವಾ ಸಾರ್ವಜನಿಕ ಆರೋಗ್ಯ ಅಥವಾ ನೈತಿಕತೆಗಳ ಕಾರಣಕ್ಕಾಗಿ ಅಗತ್ಯವಾಗಿರಬೇಕು (ಕಲಮು 19). ಒಡಂಬಡಿಕೆ 'ಯಾವುದೇ ಯುದ್ಧದ ಪರವಾದ ಪ್ರಚಾರವನ್ನು, ತಾರತಮ್ಯ, ಹಗೆತನ, ಅಥವಾ ಹಿಂಸಾಚಾರ ಪ್ರಚೋದನೆಗೆ ಕಾರಣವಾಗಬಲ್ಲ ರಾಷ್ಟ್ರೀಯ, ಜನಾಂಗೀಯ ಅಥವಾ ಧರ್ಮೀಯ ವಿಚಾರಗಳ ಪ್ರತಿಪಾದನೆಗಳನ್ನು' ನಿಷೇಧಿಸುತ್ತದೆ (ಕಲಮು 20). ಆದ್ದರಿಂದ ಅಭಿವ್ಯಕ್ತಿ ಸ್ವಾತಂತ್ರ್ಯ ಅನಿರ್ಬಂಧಿತವಲ್ಲ. ಆದರೆ ಸಾಮಾನ್ಯ ಅರ್ಥದಲ್ಲಿ ಯಾವುದೇ ನಿರ್ಬಂಧ, ನ್ಯಾಯಬದ್ಧತೆಯ, ಶಾಸನಬದ್ಧತೆಯ, ಪ್ರಮಾಣಬದ್ಧತೆಯ ಮತ್ತು ಪ್ರಜಾಸತ್ತಾತ್ಮಕ ಆವಶ್ಯಕತೆಯ ಅಂಶಗಳನ್ನು ಪೂರೈಸುವಂತಿರಬೇಕು. ಸಮೂಹ ಮಾಧ್ಯಮದ ವಿಷಯದಲ್ಲಿ, ವ್ಯಕ್ತಿಗಳ ಪ್ರತಿಷ್ಠೆ ಮತ್ತು ಸ್ವಕೀಯತೆಯನ್ನು ರಕ್ಷಿಸಲು ಅಸಂದಿಗ್ಧವಾದ ನಿಯಮಗಳಿರತಕ್ಕದ್ದು.



**ಕಲಮು *20.***

1. *ಪ್ರತಿಯೊಬ್ಬರಿಗೂ ಶಾಂತಿಯುತವಾಗಿ ಸಭೆ ಸೇರುವ ಮತ್ತು ಸಂಘಟನಾ ಸ್ವಾತಂತ್ರ್ಯದ ಹಕ್ಕಿರುತ್ತದೆ.*
2. *ಯಾರನ್ನೂ ಒಂದು ಸಂಘಟನೆಗೆ ಸೇರುವಂತೆ ಬಲಾತ್ಕರಿಸತಕ್ಕದ್ದಲ್ಲ.*

ಜನರಿಗೆ ಸಾಮೂಹಿಕವಾಗಿ ತಮ್ಮ ಉದ್ದೇಶಗಳನ್ನು ಅಭಿವ್ಯಕ್ತಿಸಲು, ಒಂದು ಗುಂಪಾಗಿ ಒತ್ತಾಯಪಡಿಸಲು ಮತ್ತು ತಮ್ಮ ಹಿತಾಸಕ್ತಿಗಳನ್ನು ಅಥವಾ ಇತರರ ಹಿತಾಸಕ್ತಿಗಳನ್ನು ರಕ್ಷಿಸಲು ಸಂಘಟನಾ ಸ್ವಾತಂತ್ರ್ಯವೇ ಏಕಮಾತ್ರ ದಾರಿಯಾಗಿದೆ. ಈ ಸ್ವಾತಂತ್ರ್ಯವನ್ನು ಖಾತರಿಪಡಿಸಲು ಸರ್ಕಾರದಿಂದ ಯಾವುದೇ ಇತ್ಯರ್ಥಕ ಕ್ರಮದ ಅಗತ್ಯವಿಲ್ಲ. ಬೇಕಿದ್ದರೆ ಸರ್ಕಾರಗಳಿಗೆ ಅದನ್ನು ಮೊಟಕುಗೊಳಿಸುವ ದಾರಿಗಳಿವೆ. ಹಾಗೆ ಮಾಡಲು ಕೆಲವು ಸಂದರ್ಭಗಳಲ್ಲಿ ನ್ಯಾಯಬದ್ಧ ಕಾರಣಗಳಿರಬಹುದಾದರೂ, ಆ ರೀತಿಯ ನಿರ್ಬಂಧಗಳು ಪದೇ ಪದೇ ದಮನಕಾರಿ ಅಸ್ತ್ರವಾಗಿ ಚಲಾಯಿಸಲ್ಪಟ್ಟಿದೆ. ಜಗತ್ತಿನ ಎಲ್ಲ ಭಾಗಗಳಲ್ಲೂ ಈ ಸ್ವಾತಂತ್ರ್ಯದ ಅನೇಕ ಉಲ್ಲಂಘನೆಗಳನ್ನು ನೋಡಬಹುದು.

ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆ (ಐ.ಎಲ್.ಓ., ಭಾಗ I, 63ನೇ ಪ್ರಶ್ನೆಯನ್ನು ಸಹ ನೋಡಿ) ಹೆಚ್ಚು ಸಂಖ್ಯೆಯ ದೇಶಗಳಿಂದ[87] ಸ್ಥಿರೀಕರಿಸಲ್ಪಟ್ಟಿರುವ ಕಾರ್ಮಿಕರ ಸಂಘಟನೆಯ ಹಕ್ಕಿನ ಬಗ್ಗೆ ನಿರ್ದಿಷ್ಟವಾಗಿ ಅನೇಕ ಒಡಂಬಡಿಕೆಗಳನ್ನು ಸ್ವೀಕಾರ ಮಾಡಿದೆ.

**ಕಲಮು *21.***

1. *ಪ್ರತಿಯೊಬ್ಬರಿಗೂ ಅವನ ದೇಶದ ಸರ್ಕಾರದಲ್ಲಿ ನೇರವಾಗಿಯಾಗಲೀ ಅಥವಾ ಮುಕ್ತವಾಗಿ ಆಯ್ಕೆಗೊಂಡ ಪ್ರತಿನಿಧಿಗಳ ಮೂಲಕವಾಗಿಯಾಗಲೀ ಭಾಗವಹಿಸುವ ಹಕ್ಕಿದೆ.*
2. *ಪ್ರತಿಯೊಬ್ಬರಿಗೂ ಅವನ ದೇಶದ ಲೋಕಸೇವಾ ವ್ಯವಸ್ಥೆಗೆ ಸಮಾನಾವಕಾಶದ ಹಕ್ಕಿದೆ.*
3. *ಜನತೆಯ ಇಚ್ಛೆಯೇ ಸರ್ಕಾರದ ಅಧಿಕಾರದ ಬುನಾದಿಯಾಗಿರತಕ್ಕದ್ದು: ಈ ಇಚ್ಛೆಯು ರಹಸ್ಯ ಮತದಾನ ಅಥವಾ ತತ್ಸಮವಾದ ಮುಕ್ತ ಮತದಾನದ ವಿಧಾನದಲ್ಲಿ, ಸಾರ್ವತ್ರಿಕ ಮತ್ತು ಸಮಾನ ಮತದಾನದ ನಿಯತಕಾಲಿಕ ಯಥಾರ್ಥ ಚುನಾವಣೆಗಳಲ್ಲಿ ಅಭಿವ್ಯಕ್ತಿಗೊಳ್ಳತಕ್ಕದ್ದು.*

'ಜನತೆಯ ಇಚ್ಛೆಯೇ ಸರ್ಕಾರದ ಅಧಿಕಾರದ ಬುನಾದಿ' ಎಂಬುದರಿಂದಾಗಿ ಈ ಕಲಮು ಪ್ರಜಾಸತ್ತಾತ್ಮಕ ಸರ್ಕಾರದ ತತ್ವಗಳ ಅನುಮೋದನೆಯನ್ನು ಪ್ರತಿಬಿಂಬಿಸುತ್ತದೆ. ಅದನ್ನು ಯಥಾರ್ಥವಾದ ಚುನಾವಣೆಗಳ ಮೂಲಕ ಸಾಧಿಸಬೇಕು, ಅಂದರೆ ಸಾರ್ವತ್ರಿಕ ಮತದಾನ ಆಧಾರಿತ ಮುಕ್ತ, ನ್ಯಾಯಬದ್ಧ




ಚುನಾವಣೆಗಳು. ಪ್ರಜಾಸತ್ತಾತ್ಮಕತೆಯ ಪ್ರಕ್ರಿಯೆಯಲ್ಲಿ ಆ ರೀತಿಯ ಚುನಾವಣೆಗಳು ಒಂದು ಮೂಲಭೂತ ಅಂಶವಾಗಿದ್ದರೂ, ಮಾನವಹಕ್ಕುಗಳ ರಕ್ಷಣೆ ಮತ್ತು ಶಾಸನಾತ್ಮಕ ಆಡಳಿತ ಇನ್ನಿತರ ಅವಿಭಾಜ್ಯ ಅಗತ್ಯಗಳಾಗಿವೆ. 'ಮಾನವಹಕ್ಕುಗಳನ್ನು ಅನುಭವಿಸಲು ಪ್ರಜಾಸತ್ತಾತ್ಮಕ ಮೌಲ್ಯಗಳು ಅಗತ್ಯ' ಎಂಬುದನ್ನು ಒತ್ತಿ ಹೇಳಿದ ಮಾಂಟ್ರಿಯಲ್ ಕ್ರಿಯಾ ಯೋಜನೆ (ಭಾಗ I, 86ನೇ ಪ್ರಶ್ನೆಯನ್ನು ನೋಡಿ) ಮಾನವಹಕ್ಕುಗಳಿಗಾಗಿ ಶಿಕ್ಷಣ ಮತ್ತು ಪ್ರಜಾಪ್ರಭುತ್ವಕ್ಕಾಗಿ ಶಿಕ್ಷಣಗಳನ್ನು ಒಂದುಗೂಡಿಸಿದ ಅಂತರರಾಷ್ಟ್ರೀಯ ಒಪ್ಪಿಗೆ ಪಡೆದ ಮೊದಲ ದಸ್ತಾವೇಜಾಗಿದೆ. 'ಮಾನವಹಕ್ಕುಗಳು ಮತ್ತು ಪ್ರಜಾಪ್ರಭುತ್ವದ ಮಧ್ಯದ ಸಂಬಂಧ ಅಂತರಾವಲಂಬಿ ಮತ್ತು ಪಾರಸ್ಪರಿಕವಾಗಿ ಬಲವರ್ಧಕ' ಎಂಬುದನ್ನು ಸಾರ್ವತ್ರಿಕ ಒಟ್ಟಾಭಿಪ್ರಾಯವನ್ನು ಪ್ರತಿಬಿಂಬಿಸುವ ವಿಯೆನ್ನಾ ಘೋಷಣೆ ಮತ್ತು ಕ್ರಿಯಾ ಯೋಜನೆ ದೃಢಪಡಿಸಿದೆ. (1993) (ಭಾಗ I, ಪ್ರಶ್ನೆ 9ನ್ನು ನೋಡಿ). ಪ್ರಜಾಸತ್ತಾತ್ಮಕ ತತ್ವಾನ್ವಯದ ಮೂಲಕ ಎಲ್ಲಾ ದೇಶಗಳಲ್ಲಿ ಮಾನವಹಕ್ಕುಗಳ, ಮೂಲಭೂತ ಸ್ವಾತಂತ್ರ್ಯಗಳ ಹಾಗೂ ಶಾಸನಾತ್ಮಕ ಆಡಳಿತದ ರಕ್ಷಣೆ ಮತ್ತು ಉತ್ತೇಜನವನ್ನು

ಅತ್ಯುತ್ತಮವಾಗಿ ಸಾಧಿಸಬಹುದೆಂಬುದಕ್ಕೆ ಮಾನ್ಯತೆ ನೀಡಿ, ಅದು ಪ್ರಜಾಪ್ರಭುತ್ವವನ್ನು ಉತ್ತೇಜಿಸಿ ಬಲಪಡಿಸುವುದನ್ನು ಬೆಂಬಲಿಸುವಂತೆ ಅಂತರರಾಷ್ಟ್ರೀಯ ಸಮುದಾಯಕ್ಕೆ ಕರೆ ನೀಡಿದೆ. ಅದಕ್ಕಿಂತ ಹೆಚ್ಚಾಗಿ ಪ್ರಜಾಪ್ರಭುತ್ವ ಮತ್ತು ಮಾನವಹಕ್ಕುಗಳಿಗೆ ಗೌರವ-ಇವು ಅಭಿವೃದ್ಧಿ ಹಕ್ಕಿನ ಸಾಧನೆಗೆ (ಕಲಮು 28ನ್ನು ನೋಡಿ) ಅತ್ಯಗತ್ಯವೆಂಬುದನ್ನು ಮಾನ್ಯ ಮಾಡಲಾಗಿದೆ.




ಅದರ ಭಾಗಸ್ಥ ದೇಶಗಳಲ್ಲಿ ಯಾವುದೊಂದರಲ್ಲಿ ಪ್ರಜಾಸತ್ತಾತ್ಮಕ ಪ್ರಕ್ರಿಯೆ ಅಸ್ತವ್ಯಸ್ತಗೊಂಡ ಹತ್ತು ದಿನಗಳೊಳಗಾಗಿ ಒಂದು ಉನ್ನತ ಮಟ್ಟದ ರಾಜಕೀಯ ಸಭೆ ನಡೆಯಲು, ತನ್ನ ಪ್ರಾತಿನಿಧಿಕ ಪ್ರಜಾಪ್ರಭುತ್ವದ ನಿರ್ಣಯದ ಮೂಲಕ (1991) ಅಮೇರಿಕಾ ರಾಷ್ಟ್ರ ಸಂಘಟನೆ (ಓ.ಎ.ಎಸ್) ತನ್ನನ್ನು ತಾನೇ ಬದ್ಧಗೊಳಿಸಿಕೊಂಡಿದೆ. ಈ ನಿರ್ಣಯ ಮಾನವಹಕ್ಕುಗಳು ಮತ್ತು ಪ್ರಜಾಪ್ರಭುತ್ವದ ಮಧ್ಯದ ಅಂತರ್ಗತ ಸಂಬಂಧಕ್ಕೆ ಓ.ಎ.ಎಸ್. ಮಾನ್ಯತೆ ನೀಡಿರುವುದನ್ನು ಒತ್ತಿಹೇಳಿದೆ.

## ಕಲಮು *22.*

*ಒಂದು ಸಮಾಜದ ಸದಸ್ಯನಾಗಿ ಪ್ರತಿಯೊಬ್ಬನಿಗೂ ಸಾಮಾಜಿಕ ಭದ್ರತೆಯ ಹಕ್ಕಿದೆ ಮತ್ತು ರಾಷ್ಟ್ರೀಯ ಪ್ರಯತ್ನಗಳು, ಅಂತರರಾಷ್ಟ್ರೀಯ ಸಹಕಾರದ ಮೂಲಕ ಮತ್ತು ಪ್ರತಿಯೊಂದು ದೇಶದ ಸಂಘಟನೆ ಮತ್ತು ಸಂಪನ್ಮೂಲಗಳಿಗೆ ಹೊಂದಿಕೊಂಡು, ಅವನ ಘನತೆ ಮತ್ತು ವ್ಯಕ್ತಿತ್ವದ ಮುಕ್ತ ವಿಕಸನಕ್ಕೆ ಅತ್ಯಗತ್ಯವಾದ ಆರ್ಥಿಕ, ಸಾಮಾಜಿಕ, ಮತ್ತು ಸಾಂಸ್ಕೃತಿಕ ಹಕ್ಕುಗಳನ್ನು ಕೈಗೂಡಿಸಿಕೊಳ್ಳಲು ಪ್ರತಿಯೊಬ್ಬನೂ ಅರ್ಹನಾಗಿರುತ್ತಾನೆ.*

ಈ ಕಲಮು ಮತ್ತು 23-27ನೇ ಕಲಮುಗಳು, ಮನುಷ್ಯನ ಅಂತಃಸ್ಥ ಸಾಮರ್ಥ್ಯಗಳ ಪೂರ್ಣ ವಿಕಸನವನ್ನು ಖಾತರಿಪಡಿಸಲು ಬೇಕಾದ ಭೌತಿಕ ಹಾಗೂ ಭೌತಿಕವಲ್ಲದ ಮಾನವಾವಶ್ಯಕತೆಗಳೆರಡನ್ನೂ ಸಾಕಾರಗೊಳಿಸುವ ಉದ್ದಿಶ್ಯದ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ಬಗ್ಗೆ ಪ್ರಸ್ತಾಪಿಸುತ್ತವೆ. ಈ ಹಕ್ಕುಗಳ ಅನುಷ್ಠಾನಕ್ಕೆ ಮತ್ತು ಈ ಹಕ್ಕುಗಳನ್ನು ಎಲ್ಲರ ಪಾಲಿಗೆ ಅನ್ವಯಗೊಳಿಸುವುದಕ್ಕೆ ರಾಷ್ಟ್ರದ ಮತ್ತು ಅಂತರಾಷ್ಟ್ರೀಯ ಸಮುದಾಯದ ಇತ್ಯರ್ಥಕ ಕ್ರಮಗಳು ಅಗತ್ಯ. ವಿಶ್ವದ ಐದನೇ ಒಂದು ಭಾಗದ ಜನತೆ ದಾರಿದ್ರ್ಯ ಮತ್ತು ಹಸಿವಿನಿಂದ ಬಾಧಿತರಾಗಿದ್ದಾರೆ. ರೋಗ, ಅನಕ್ಷರತೆ ಮತ್ತು ಸಾಮಾಜಿಕ ಅಭದ್ರತೆಗಳು ಹೆಚ್ಚುತ್ತಲೇ ಹೋಗುತ್ತಿರುವ ಸಂಗತಿಗಳಾಗಿವೆ. ಮೂಲಭೂತ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ಭಾರಿ ಪ್ರಮಾಣದ ನಿರಾಕರಣೆ, ನಾಗರಿಕ ಹಾಗೂ ರಾಜಕೀಯ ಹಕ್ಕುಗಳ ನಿರಾಕರಣೆಗೆ ಕೊಟ್ಟಷ್ಟೇ ತತ್ಸಮವಾದ ಅಂತರರಾಷ್ಟ್ರೀಯ ಸಮುದಾಯದ ಖಂಡನೆಗೆ ಅರ್ಹವಾಗಿದೆ. ಅದಲ್ಲದೆ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಮತ್ತು ನಾಗರಿಕ ಹಕ್ಕುಗಳು ಅಂತರಾವಲಂಬಿಯೆಂಬುದನ್ನು ಪೂರ್ಣವಾಗಿ ಮಾನ್ಯ ಮಾಡಿದ ಹೊರತು, ಪ್ರಜಾಪ್ರಭುತ್ವ, ಸ್ಥಿರತೆ ಮತ್ತು ಶಾಂತಿಗಳು ಸುಭದ್ರವಾಗಿರುವುದು ಸಾಧ್ಯವಿಲ್ಲ. ಆರ್ಥಿಕ ಪ್ರಗತಿ ಅತ್ಯಗತ್ಯವಿದ್ದಾಗ್ಯೂ ಜನತೆಯ ಸಾರ್ವತ್ರಿಕ ಕಲ್ಯಾಣವನ್ನು ಖಾತರಿಪಡಿಸಲು ಅದಷ್ಟೇ ಸಾಲದು. ಅದರಿಂದಾದ ಅನುಕೂಲತೆಗಳು ತನ್ನಷ್ಟಕ್ಕೆ ಜನತೆಯ ಎಲ್ಲ ಸ್ತರಗಳಿಗೂ ಪ್ರಯೋಜನಕಾರಿಯಾಗುವುದಿಲ್ಲ. ಆದ್ದರಿಂದ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಯ ಉತ್ತೇಜನಕ್ಕಾಗಿ ಇರುವ ರಾಷ್ಟ್ರೀಯ ಪ್ರಯತ್ನಗಳು ಮತ್ತು ಅಂತರರಾಷ್ಟ್ರೀಯ ಸಹಕಾರ, ಆರ್ಥಿಕ, ಸಾಮಾಜಿಕ, ಮತ್ತು ಸಾಂಸ್ಕೃತಿಕ ಹಕ್ಕುಗಳನ್ನು ಗರಿಷ್ಠ ಮಟ್ಟಕ್ಕೇರಿಸುವ ಮತ್ತು ಸಮಾನಾನುಭವವನ್ನು ಖಾತರಿಪಡಿಸುವ, ನ್ಯಾಯಬದ್ಧ ವಾತಾವರಣದ ನಿರ್ಮಾಣದ ಬಗ್ಗೆಯೂ ಕಾಳಜಿವಹಿಸಬೇಕಾದ ಅಗತ್ಯವಿದೆ. ಈ ಹಕ್ಕುಗಳ ಬಗೆಗಿನ ತನ್ನ ಆಶೋತ್ತರಗಳಲ್ಲಿ ಪ್ರತಿ ದೇಶವೂ ತನ್ನ ಸಂಪನ್ಮೂಲಗಳು ಹಾಗೂ ಆದ್ಯತೆಗಳನ್ನು ಗಣನೆಗೆ ತೆಗೆದುಕೊಳ್ಳಬೇಕು ಮತ್ತು ನಿಗದಿತ ಮಾನದಂಡಗಳನ್ನು ಸಾಧಿಸಲು ಎಲ್ಲ ಪ್ರಯತ್ನಗಳನ್ನು ಮಾಡಬೇಕು.

ಸಮಾಜವು ತನ್ನ ದುರ್ಬಲ ಹಾಗೂ ಪ್ರತಿಕೂಲ ಪರಿಸ್ಥಿತಿಯಲ್ಲಿರುವ ಸದಸ್ಯರುಗಳಿಗೂ ಸಹ ಮೂಲಭೂತ ಹಕ್ಕುಗಳನ್ನು ಖಾತರಿಪಡಿಸುವ ಜವಾಬ್ದಾರಿ ಹೊಂದಿದೆ ಎಂಬುದು ಕೂಡಾ ಸಾಮಾಜಿಕ ಭದ್ರತೆಯ ಹಕ್ಕಿನ ಅರ್ಥವಾಗಿದೆ.

## ಕಲಮು *23.*

*1. ಪ್ರತಿಯೊಬ್ಬನಿಗೂ ಉದ್ಯೋಗದ ಹಕ್ಕಿದೆ: ಉದ್ಯೋಗದ ಮುಕ್ತ ಆಯ್ಕೆಗೆ, ನ್ಯಾಯಯುತವೂ, ಅನುಕೂಲಕರವೂ ಆದ ಕೆಲಸದ ಪರಿಸರಕ್ಕೆ, ಮತ್ತು ನಿರುದ್ಯೋಗದ ವಿರುದ್ಧ ರಕ್ಷಣೆಗೆ.*

*2. ಪ್ರತಿಯೊಬ್ಬರಿಗೂ ಯಾವುದೇ ತಾರತಮ್ಯವಿಲ್ಲದೆ ಸಮಾನ ಕೆಲಸಕ್ಕೆ ಸಮಾನ ಸಂಭಾವನೆಯ ಹಕ್ಕಿದೆ.*

*3. ಪ್ರತಿಯೊಬ್ಬ ಉದ್ಯೋಗಿಗೂ ನ್ಯಾಯಬದ್ಧವಾದ ಮತ್ತು ಮಾನವ ಘನತೆಗೆ ಯೋಗ್ಯವಾಗಿ ತನ್ನ ಮತ್ತು ತನ್ನ ಸಂಸಾರ ನಿರ್ವಹಣೆಯನ್ನು ಖಾತರಿಗೊಳಿಸಲು ಅನುಕೂಲವಾದ ಸಂಭಾವನೆ ಮತ್ತು ಅಗತ್ಯ ಬಿದ್ದಲ್ಲಿ ಇನ್ನಿತರ ಸಾಮಾಜಿಕ ರಕ್ಷಣೆಯ ವಿಧಾನಗಳಿಂದ ಪೂರಕ ಸಹಾಯದ ಹಕ್ಕಿದೆ.*

*4. ಪ್ರತಿಯೊಬ್ಬರಿಗೂ ತನ್ನ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲಿಕ್ಕಾಗಿ ಕಾರ್ಮಿಕ ಸಂಘಟನೆಗಳನ್ನು ರಚಿಸುವ ಮತ್ತು ಅದಕ್ಕೆ ಸೇರಿಕೊಳ್ಳುವ ಹಕ್ಕಿದೆ.*

## *ಕೆಲಸದ ಪರಿಸರ ಮತ್ತು ಶ್ರಮಜೀವಿಗಳ ಹಕ್ಕುಗಳ ರಕ್ಷಣೆಗೆ ಇರುವ ಅಂತರರಾಷ್ಟ್ರೀಯ ನಿಯಮಗಳೇನು ?*

ಈ ಮೇಲಿನ ನಿಯಮಗಳು ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ಮೇಲಿನ ಅಂತರರಾಷ್ಟ್ರೀಯ ಒಡಂಬಡಿಕೆಯಲ್ಲಿ ಮತ್ತಷ್ಟು ಕ್ರೋಢೀಕೃತಗೊಂಡಿವೆ (ಭಾಗ I, 17ನೇ ಪ್ರಶ್ನೆಯನ್ನು ನೋಡಿ) ಮತ್ತು ಅವುಗಳ ಅನುಷ್ಠಾನವನ್ನು ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ಸಮಿತಿ ಅದರ ಮುಂದುವರಿದ ಉಸ್ತುವಾರಿಯನ್ನು ನೋಡಿಕೊಳ್ಳುತ್ತದೆ (ಭಾಗ I, 18-20ನೇ ಪ್ರಶ್ನೆಗಳನ್ನು ನೋಡಿ). ಈಗಾಗಲೇ ಹೇಳಿರುವಂತೆ ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆಗೆ (ಐ.ಎಲ್.ಓ. ಭಾಗ I, 63ನೇ ಪ್ರಶ್ನೆಯನ್ನೂ ನೋಡಿ) ಶ್ರಮಜೀವಿಗಳ ರಕ್ಷಣೆಯ ವಿಶೇಷ ಜವಾಬ್ದಾರಿ ಇದೆ. ಅದರ ಉಸ್ತುವಾರಿ ಘಟಕಗಳು ಐ.ಎಲ್.ಓ.ದ ಒಡಂಬಡಿಕೆಗಳು ಎಷ್ಟರ ಮಟ್ಟಿಗೆ ಗೌರವಿಸಲ್ಪಡುತ್ತಿವೆ ಎಂಬ ಬಗ್ಗೆ ಪ್ರತಿ ವರ್ಷ ವರದಿಗಳನ್ನು ಪ್ರಕಟಿಸುತ್ತವೆ ಮತ್ತು ಐ.ಎಲ್.ಓ. ಸಂಘಟನೆ ಈ ಹಕ್ಕುಗಳ ಉತ್ತೇಜನ ಮತ್ತು ರಕ್ಷಣೆಗೆ ವ್ಯವಹಾರಿಕ ಸಹಾಯವನ್ನು ಒದಗಿಸುತ್ತದೆ. ಅನೇಕ ಪ್ರಮುಖವಾದ ಐ.ಎಲ್.ಓ. ಒಡಂಬಡಿಕೆಗಳು ಎಲ್ಲಾ ದೇಶಗಳಿಂದ ಸ್ಥಿರೀಕರಿಸಲ್ಪಟ್ಟಿಲ್ಲ. ಅವುಗಳನ್ನು ಸ್ಥಿರೀಕರಿಸುವಂತೆ ಪ್ರೋತ್ಸಾಹಿಸುವುದು ಅಗತ್ಯ.

ವಲಸೆಗಾರ ಕಾರ್ಮಿಕರು ನಿರ್ದಿಷ್ಟವಾಗಿ ದುರ್ಬಲ ವರ್ಗದ ಕಾರ್ಮಿಕರಾಗಿದ್ದಾರೆ. ಏಕೆಂದರೆ ನಾಗರಿಕರಿಗೆ ಮಾತ್ರ ಸಂಬಂಧಿಸಿದ ಎಲ್ಲ ಹಕ್ಕುಗಳನ್ನು ಅವರು ಅನುಭವಿಸುವುದಿಲ್ಲ. ಅವರ ಪರಿಸ್ಥಿತಿಯನ್ನು ಸುಧಾರಿಸುವುದಕ್ಕಾಗಿ ವಿಶ್ವಸಂಸ್ಥೆಯ ಮಹಾಧಿವೇಶನವು 1990ರಲ್ಲಿ ವಲಸೆ ಕಾರ್ಮಿಕರ ಮತ್ತು ಅವರ ಕುಟುಂಬದ ಸದಸ್ಯರ ಹಕ್ಕುಗಳ ರಕ್ಷಣೆಯ ಮೇಲಿನ ಒಡಂಬಡಿಕೆಯನ್ನು ಅಂಗೀಕರಿಸಿದೆ. ನಿಗದಿತ ಸಂಖ್ಯೆಯ ದೇಶಗಳಿಂದ ಇನ್ನೂ ಸ್ಥಿರೀಕರಣಗೊಂಡಿಲ್ಲವಾದ್ದರಿಂದ, ಅದು ಜಾರಿಗೊಂಡಿಲ್ಲ.[88]

### *ಕಲಮು 24.*

*ಪ್ರತಿಯೊಬ್ಬರಿಗೂ, ಸಮಂಜಸವಾಗಿ ನಿಗದಿಗೊಂಡ ದುಡಿಮೆಯ ಅವಧಿ ಮತ್ತು ಸಂಬಳಸಹಿತ ನಿಯತಕಾಲಿಕ ರಜೆಯೂ ಒಳಗೊಂಡಂತೆ ವಿಶ್ರಾಂತಿ ಮತ್ತು ವಿರಾಮದ ಹಕ್ಕಿದೆ.*

ಸಂಘಟಿತ ಕಾರ್ಮಿಕರು ದುಡಿಮೆ ಅವಧಿಯ ಇತಿಮಿತಿಗಳಿಗೆ ಪ್ರಗತಿದಾಯಕ ಮಾನ್ಯತೆಯನ್ನು ಪಡೆದುಕೊಂಡಿದ್ದಾಗ್ಯೂ, ವಿಶ್ವದ ಅನೇಕ ದಶಲಕ್ಷ ಜನರು ಯಾವುದೇ ಮಾನವಹಕ್ಕುಗಳ ರಕ್ಷಣೆಯಿಲ್ಲದೆ ದುಡಿಯುತ್ತಿರುವ ನತದೃಷ್ಟ ಸ್ಥಿತಿಯಲ್ಲಿದ್ದಾರೆ. ಐ.ಎಲ್.ಓ. ದ ಪ್ರಯತ್ನಗಳಿಂದಾಗಿ ದುಡಿಮೆಯ ವಾರದ ಕಾಲಾವಧಿಗೆ ಅಂತರರಾಷ್ಟ್ರೀಯ ಮನ್ನಣೆ ದೊರಕಿದೆ. ವಿಶ್ರಾಂತಿ ಮತ್ತು ವಿರಾಮಗಳ ಮಾನ್ಯತೆಯ ಬಗ್ಗೆ ಸಂಶಯಗಳು ವ್ಯಕ್ತವಾಗಿವೆ. ಆದರೆ ಮಾನವಹಕ್ಕುಗಳ ವಿಶ್ವವ್ಯಾಪಿ ಘೋಷಣೆಯ ಈ ಕಲಮು ಮತ್ತು ಅದರಂತೆಯೇ, ಆರ್ಥಿಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ಮೇಲಿನ ಅಂತರರಾಷ್ಟ್ರೀಯ ಒಡಂಬಡಿಕೆಯ 7ನೇ ಕಲಮು ಸಾರ್ವತ್ರಿಕವಾಗಿ ಮಾನ್ಯ ಮಾಡಲ್ಪಟ್ಟ ಮಾನವಹಕ್ಕುಗಳಲ್ಲಿ ಸೇರಿದೆಯೆಂಬುದನ್ನು ಅತ್ಯಂತ ಸ್ಪಷ್ಟವಾಗಿ ಹೇಳಿವೆ.

### *ಕಲಮು 25.*

1. *ಪ್ರತಿಯೊಬ್ಬರಿಗೂ, ಆಹಾರ, ಬಟ್ಟೆ, ವಸತಿ, ಆರೋಗ್ಯ ರಕ್ಷಣೆ ಮತ್ತು ಅಗತ್ಯ ಸಾಮಾಜಿಕ ಸೇವೆಗಳು ಒಳಗೊಂಡಂತೆ ತನ್ನ ಮತ್ತು ತನ್ನ ಕುಟುಂಬದ ಆರೋಗ್ಯ ಮತ್ತು ಕಲ್ಯಾಣಕ್ಕೆ ಯಥೋಚಿತವಾದ ಜೀವನ ಮಟ್ಟದ ಹಕ್ಕಿರುತ್ತದೆ ಮತ್ತು ನಿರುದ್ಯೋಗದ, ಅನಾರೋಗ್ಯದ, ಅಸಾಮರ್ಥ್ಯದ, ವೈಧವ್ಯದ, ವೃದ್ಧಾಪ್ಯದ ಅಥವಾ ಆತನ ಹತೋಟಿ ಮೀರಿದ ಜೀವನಮಾರ್ಗವಿಲ್ಲದ ಇನ್ನಿತರ ಸಂದರ್ಭಗಳಲ್ಲಿ ಭದ್ರತೆಯ ಹಕ್ಕಿರುತ್ತದೆ.*
2. *ತಾಯ್ತನ ಮತ್ತು ಶೈಶವಗಳು ವಿಶೇಷ ಕಾಳಜಿ ಮತ್ತು ನೆರವಿಗೆ ಅರ್ಹವಾಗಿವೆ. ವಿವಾಹದಿಂದಾಗಿ ಅಥವಾ ವಿವಾಹಬಾಹಿರವಾಗಿ ಹುಟ್ಟಿರುವ ಎಲ್ಲಾ ಮಕ್ಕಳು ಒಂದೇ ರೀತಿಯ ಸಾಮಾಜಿಕ ರಕ್ಷಣೆಯನ್ನು ಹೊಂದಿರತಕ್ಕದ್ದು.*

### *ಯಥೋಚಿತ ಜೀವನಮಟ್ಟ ಹಕ್ಕಿನ ಅರ್ಥವೇನು ?*

ಬೇರೆ ಬೇರೆ ಜನರು ಇದಕ್ಕೆ ಬೇರೆ ಬೇರೆ ಉತ್ತರವನ್ನು ಕೊಡಬಹುದು. ಆದರೆ ಪ್ರತಿಯೊಬ್ಬನೂ ಮೂಲಭೂತ ಮಾನವಾವಶ್ಯಕತೆಗಳಾದ ಆಹಾರ, ವಸತಿ, ಬಟ್ಟೆ, ಸಾಂಸಾರಿಕ ಅವಶ್ಯಕತೆಗಳು ಮತ್ತು ನೀರು, ನೈರ್ಮಲ್ಯ, ಆರೋಗ್ಯ ಮತ್ತು ಶಿಕ್ಷಣಕ್ಕೆ ಸಂಬಂಧಿಸಿದಂತೆ ಸಾಮುದಾಯಿಕ ಸೇವೆಗಳು, ಇವುಗಳನ್ನು ತೃಪ್ತಿಪಡಿಸಿಕೊಳ್ಳಲು ಅರ್ಹನೆನ್ನುವುದೇ ಇದರ ಕನಿಷ್ಠ ಅರ್ಥ ಎಂಬುದನ್ನು ಯಾರೂ ಅಲ್ಲಗಳೆಯಲಾರರು. ಒಂದು ಒಳ್ಳೆಯ ಯಥೋಚಿತ ಜೀವನ ಮಟ್ಟವನ್ನು


ನನಗೆ ಹಸಿವಾಗಿದೆ!
ನಿಲ್ಲಿಸಯ್ಯಾ, ರಾಜಕೀಯ ಮಾತಾಡಬೇಡ!
PLANTU

ಸಾಧಿಸಲು ಪ್ರತಿಯೊಬ್ಬರಿಗೂ ಉದ್ಯೋಗದ ಹಕ್ಕಿರಬೇಕೆಂದೂ ಮತ್ತು ಹಾಗೆ ಮಾಡಲು ಸಾಧ್ಯವಿಲ್ಲದವರಿಗೆ ಭದ್ರತೆ ಒದಗಿಸಬೇಕೆಂದೂ ಅದರ ಅರ್ಥವಾಗಿದೆ.

ಅತ್ಯಂತ ಕನಿಷ್ಠ ಸ್ಥಿತಿಯವರನ್ನು ಮೊದಲು ಪರಿಗಣಿಸಬೇಕು ಮತ್ತು ಅಭಿವೃದ್ಧಿಯ ಆಶಯಗಳು ಕಡುಬಡವರಿಗೆ, ಯಾವ ಸೌಕರ್ಯಗಳೂ ಇಲ್ಲದವರಿಗೆ ಮತ್ತು ತಾರತಮ್ಯದಿಂದ ನೊಂದವರಿಗೆ ಆದ್ಯತೆಯನ್ನು ಕಲ್ಪಿಸಬೇಕು.

**ಕಲಮು *26.***

*1. ಪ್ರತಿಯೊಬ್ಬರಿಗೂ ಶಿಕ್ಷಣದ ಹಕ್ಕಿದೆ. ಶಿಕ್ಷಣ ಪುಕ್ಕಟೆಯಾಗಿರಬೇಕು. ಕೊನೆಯ ಪಕ್ಷ ಪ್ರಾಥಮಿಕ ಮತ್ತು ಮೂಲ ಹಂತಗಳಲ್ಲಿ ಪ್ರಾಥಮಿಕ ಶಿಕ್ಷಣ ಕಡ್ಡಾಯವಾಗಿರತಕ್ಕದ್ದು. ತಾಂತ್ರಿಕ ಮತ್ತು ವೃತ್ತಿಪರ ಶಿಕ್ಷಣ ಸಾರ್ವತ್ರಿಕವಾಗಿ ಲಭ್ಯವಿರತಕ್ಕದ್ದು, ಮತ್ತು ಅರ್ಹತೆಯ ಆಧಾರದ ಮೇಲೆ ಉನ್ನತ ಶಿಕ್ಷಣಕ್ಕೆ ಸಮಾನ ಅವಕಾಶವಿರತಕ್ಕದ್ದು.*

*2. ಮಾನವ ವ್ಯಕ್ತಿತ್ವದ ಪೂರ್ಣ ವಿಕಸನದತ್ತ, ಮತ್ತು ಮಾನವಹಕ್ಕುಗಳು ಹಾಗೂ ಮೂಲಭೂತ ಸ್ವಾತಂತ್ರ್ಯಗಳಿಗೆ ಗೌರವವನ್ನು ಬಲಪಡಿಸುವತ್ತ ಶಿಕ್ಷಣ ನಿರ್ದೇಶಿಸಲ್ಪಡತಕ್ಕದ್ದು. ಅದು ಎಲ್ಲ ರಾಷ್ಟ್ರಗಳ ಜನಾಂಗಗಳ, ಧಾರ್ಮಿಕ ಗುಂಪುಗಳ ಮಧ್ಯೆ ತಿಳಿವಳಿಕೆ, ಸಹಿಷ್ಣುತೆ ಮತ್ತು ಸ್ನೇಹವನ್ನು ಉತ್ತೇಜಿಸತಕ್ಕದ್ದು ಮತ್ತು ಶಾಂತಿ ರಕ್ಷಣೆಯ ವಿಶ್ವಸಂಸ್ಥೆಯ ಚಟುವಟಿಕೆಗಳನ್ನು ಮುಂದುವರಿಸುವಂತಿರತಕ್ಕದ್ದು.*

*3. ತಮ್ಮ ಮಕ್ಕಳಿಗೆ ಕೊಡಬೇಕಾದ ಶಿಕ್ಷಣವನ್ನು ಆಯ್ದುಕೊಳ್ಳಲು ತಂದೆ ತಾಯಿಯರಿಗೆ ಮೊದಲ ಹಕ್ಕಿರತಕ್ಕದ್ದು.*

ಶೈಕ್ಷಣಿಕ ಕ್ಷೇತ್ರದಲ್ಲಿ ಅನೇಕ ದೇಶಗಳ ಆದ್ಯತೆಗಳು ಬಹಳ ಬೇರೆಯಾಗಿವೆ. ಅನೇಕ ದೇಶಗಳಲ್ಲಿ ಕಡ್ಡಾಯ ಶಿಕ್ಷಣ ಜಾರಿಯಲ್ಲಿದ್ದರೆ, ಪ್ರಪಂಚದ ಹೆಚ್ಚಿನ ಭಾಗದಲ್ಲಿ ಸಾರ್ವತ್ರಿಕ ಸಾಕ್ಷರತೆಯನ್ನು ಸಾಧಿಸುವುದು ಇನ್ನೂ ಆಗಿಲ್ಲ. ಹೆಚ್ಚುಕಡಿಮೆ ವಿಶ್ವದ ಮೂರನೇ ಒಂದು ಭಾಗದ ವಯಸ್ಕ ಜನರು ಅನಕ್ಷರಸ್ಥರಾಗಿದ್ದಾರೆ. ಮುಖ್ಯ ಕಾರಣಗಳಾದ ಶೋಷಣೆ, ದಾರಿದ್ರ್ಯ, ಸಮಾನ ಶಿಕ್ಷಣಾವಕಾಶಗಳ ತಾರತಮ್ಯಜನಿತ ನಿರಾಕರಣೆಯಿಂದಾಗಿ ಶಿಕ್ಷಣದ ಹಕ್ಕು ಇದ್ದೂ ಇಲ್ಲದಂತಾಗಿದೆ.

ಶಿಕ್ಷಣದ ಆಯ್ಕೆ ಒಂದು ನಿರ್ದಿಷ್ಟ ಸಮಾಜದ ಅವಶ್ಯಕತೆಗಳಿಗೆ ಸಂಬಂಧಿಸಿರಬೇಕು. ಕನಿಷ್ಠ ಮಜಲಿನ ಪುಕ್ಕಟೆ ಶಿಕ್ಷಣ ಇನ್ನೂ ಸಾಧಿಸಬೇಕಾದ ಗುರಿಯಾಗಿಯೇ ಉಳಿದಿದೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಪುಕ್ಕಟೆ ಮತ್ತು ಕಡ್ಡಾಯವಾಗಿರುವಲ್ಲಿಯೂ, ಶಾಲೆಗಳಿರುವ ಸ್ಥಳಗಳಿಂದಾಗಿ, ಹಣಕಾಸಿನ ನೆರವಿನ ಅಸಮತೋಲನದಿಂದಾಗಿ, ಗ್ರಂಥಾಲಯ ಮತ್ತು ಸಾಧನ ಸಲಕರಣೆಗಳ ಅಥವಾ ಶಿಕ್ಷಕರ ತರಬೇತಿಯ ಮಟ್ಟದಿಂದಾಗಿ ಶಿಕ್ಷಣದ ಆಯ್ಕೆ ಮತ್ತು ಸಮಾನಾವಕಾಶಗಳು ಬಾಧಿತವಾಗಿರಬಹುದು.

ಉನ್ನತ ಶಿಕ್ಷಣ ಮತ್ತು ವಿಶ್ವವಿದ್ಯಾಲಯದ ತರಬೇತಿಯ ಅವಕಾಶಗಳು ಅನೇಕ ದೇಶಗಳಲ್ಲಿ ಪುಕ್ಕಟೆಯಾಗಿಲ್ಲ. ಶಿಷ್ಯವೇತನ, ಪಠ್ಯೇತರ ತರಗತಿಗಳು, ವಯಸ್ಕರ

ಶಿಕ್ಷಣ ತರಗತಿಗಳು ಮತ್ತು ಕೆಲಸದಲ್ಲಿದ್ದಂತೆ ತರಬೇತಿ ಮುಂತಾದ ಕ್ರಮಗಳಿಂದ ಮುಂದುವರಿದ ಶಿಕ್ಷಣವನ್ನು ಉತ್ತೇಜಿಸಬಹುದು.

## *ಮಾನವಹಕ್ಕುಗಳಿಗೆ ಗೌರವವನ್ನು ಶಿಕ್ಷಣದ ಮೂಲಕ ಹೇಗೆ ಉತ್ತೇಜಿಸಬಹುದು ?*

ಮಾನವ ವ್ಯಕ್ತಿತ್ವದ ಪೂರ್ಣವಿಕಸನ ಮತ್ತು ಮಾನವಹಕ್ಕುಗಳ ಹಾಗೂ ಮೂಲಭೂತ ಸ್ವಾತಂತ್ರ್ಯಗಳಿಗೆ ಗೌರವ ಬಲಪಡಿಸುವುದು, ಸರ್ವಮಾನ್ಯವಾದ ಶಿಕ್ಷಣದ ವಿಶಾಲ ಉದ್ದೇಶವಾಗಿದೆ. ಮಾನವಹಕ್ಕುಗಳ ವಿಶ್ವವ್ಯಾಪೀ ಘೋಷಣೆಯ ಪ್ರಸ್ತಾವನೆಯಲ್ಲಿ ಬೋಧನೆ ಮತ್ತು ಶಿಕ್ಷಣದ ಮೂಲಕ ಈ ಹಕ್ಕುಗಳಿಗೆ ಮತ್ತು ಸ್ವಾತಂತ್ರ್ಯಗಳಿಗೆ ಗೌರವವನ್ನು ಉತ್ತೇಜಿಸಬೇಕೆಂದು, ಪ್ರತಿಯೊಬ್ಬ ವ್ಯಕ್ತಿಗೂ ಸಾಮಾಜಿಕ ಘಟಕಗಳಿಗೂ ಕರೆ ನೀಡಲಾಗಿದೆ. ಅಂತರರಾಷ್ಟ್ರೀಯ ಮಾನವಹಕ್ಕುಗಳ ದಸ್ತಾವೇಜುಗಳ ಪ್ರಕಾರ ಶಿಕ್ಷಣವು ಈ ಕೆಳಗಿನದಕ್ಕೆ ನಿರ್ದೇಶಿತವಾದ, ಜ್ಞಾನ ಮತ್ತು ಕುಶಲತೆಗಳನ್ನು ಕಲಿಸುವುದರ, ಮತ್ತು ಧೋರಣೆಗಳನ್ನು ರೂಪಿಸುವ ಮೂಲಕ ಒಂದು ಮಾನವಹಕ್ಕುಗಳ ಸಾರ್ವತ್ರಿಕ ಸಂಸ್ಕೃತಿಯ ನಿರ್ಮಾಣದ ಗುರಿ ಹೊಂದಿರಬೇಕು:

ಅ. ಮಾನವಹಕ್ಕುಗಳು ಮತ್ತು ಮೂಲಭೂತ ಸ್ವಾತಂತ್ರ್ಯಗಳಿಗೆ ಗೌರವವನ್ನು ಬಲಪಡಿಸುವುದು.

ಆ. ಮಾನವ ವ್ಯಕ್ತಿತ್ವದ ಮತ್ತು ಅದರ ಘನತೆಯ ಭಾವನೆಯ ಪೂರ್ಣ ವಿಕಸನ.

ಇ. ಎಲ್ಲ ರಾಷ್ಟ್ರಗಳು, ಮೂಲನಿವಾಸಿಗಳು ಮತ್ತು ಜನಾಂಗೀಯ, ರಾಷ್ಟ್ರೀಯ, ಬುಡಕಟ್ಟಿನ, ಧಾರ್ಮಿಕ ಮತ್ತು ಭಾಷಿಕ ಗುಂಪುಗಳ ಮಧ್ಯದಲ್ಲಿ ತಿಳಿವಳಿಕೆ, ಸಹಿಷ್ಣುತೆ, ಲಿಂಗಸಮಾನತೆ ಮತ್ತು ಸ್ನೇಹವನ್ನು ಉತ್ತೇಜಿಸುವುದು.

ಈ. ಒಂದು ಮುಕ್ತ ಸಮಾಜದಲ್ಲಿ ಪರಿಣಾಮಕಾರಿಯಾಗಿ ಭಾಗಿಗಳಾಗಲು ಎಲ್ಲರನ್ನೂ ಸಮರ್ಥರನ್ನಾಗಿಸುವುದು.

ಉ. ಶಾಂತಿರಕ್ಷಣೆಯ ವಿಶ್ವಸಂಸ್ಥೆಯ ಚಟುವಟಿಕೆಗಳನ್ನು ಮುಂದುವರಿಸುವುದು.

ಶಾಲಾಪೂರ್ವ, ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳ, ಉನ್ನತಶಿಕ್ಷಣದ, ವೃತ್ತಿಪರ ಶಾಲೆಗಳ, ಸಾರ್ವಜನಿಕ ಅಧಿಕಾರಿಗಳ ತರಬೇತಿಯ, ಮತ್ತು ಸಾರ್ವಜನಿಕ ಮಾಹಿತಿಯ ಎಲ್ಲ ಸ್ತರಗಳ ಸಾಂಪ್ರದಾಯಿಕ ಹಾಗೂ ಅನೌಪಚಾರಿಕ ಶಿಕ್ಷಣದಲ್ಲಿ ಈ ಉದ್ದಿಶ್ಯಗಳನ್ನು ಉತ್ತೇಜಿಸತಕ್ಕದ್ದು. ವಿಶ್ವಸಂಸ್ಥೆಯ ಘಟಕಗಳು, ಶಿಕ್ಷಣ ಮತ್ತು ತರಬೇತಿಗೆ ಸಂಬಂಧಿಸಿದ ಎಲ್ಲ ಚಟುವಟಿಕೆಗಳಲ್ಲೂ ಈ ಧೋರಣೆಯನ್ನು ಸ್ವೀಕರಿಸಿವೆ.

ನಿರ್ದಿಷ್ಟವಾಗಿ ಯುನೆಸ್ಕೋ ಅಂತರರಾಷ್ಟ್ರೀಯ ತಿಳಿವಳಿಕೆ, ಸಹಕಾರ ಮತ್ತು ಶಾಂತಿ ಮತ್ತು ಮಾನವಹಕ್ಕುಗಳ ಹಾಗೂ ಮೂಲಭೂತ ಸ್ವಾತಂತ್ರ್ಯಗಳಿಗೆ ಸಂಬಂಧಿಸಿದ ಶಿಕ್ಷಣಗಳ ಮೇಲಿನ ಶಿಫಾರಸಿನಲ್ಲಿ (1974) ಈ ವಿಚಾರಗಳನ್ನು ರೂಪಿಸಿದೆ. ಮಾನವಹಕ್ಕುಗಳ ಬೋಧನಾ ಅಭಿವೃದ್ಧಿಯ ಯುನೆಸ್ಕೋ ಯೋಜನೆ

1979ರಲ್ಲಿ ವಿಸ್ತೃತಗೊಂಡಿದ್ದು, ಅಲ್ಲಿಂದೀಚೆಗೆ ಅನೇಕ ಬಗೆಯಲ್ಲಿ ಮುಂದುವರಿದು ಅನುಷ್ಠಾನಗೊಂಡಿದೆ.

**ಕಲಮು** *27.*

*1.* *ಪ್ರತಿಯೊಬ್ಬನಿಗೂ ಸಮುದಾಯದ ಸಾಂಸ್ಕೃತಿಕ ಜೀವನದಲ್ಲಿ ಮುಕ್ತವಾಗಿ ಭಾಗಿಯಾಗುವ, ಕಲೆಗಳನ್ನು ಆಸ್ವಾದಿಸುವ, ಮತ್ತು ವೈಜ್ಞಾನಿಕ ಪ್ರಗತಿ ಮತ್ತು ಅದರ ಅನುಕೂಲತೆಗಳನ್ನು ಹಂಚಿಕೊಳ್ಳುವ ಹಕ್ಕಿದೆ.*

*2.* *ಪ್ರತಿಯೊಬ್ಬನಿಗೂ ತಾನು ಕರ್ತೃವಾಗಿರುವ ಯಾವುದೇ ವೈಜ್ಞಾನಿಕ, ಸಾಹಿತ್ಯಿಕ ಅಥವಾ ಕಲಾತ್ಮಕ ಸೃಷ್ಟಿಯ ತತ್ಫಲವಾದ ನೈತಿಕ ಹಾಗೂ ಭೌತಿಕ ಹಿತಾಸಕ್ತಿಗಳ ರಕ್ಷಣೆಯ ಹಕ್ಕಿರುತ್ತದೆ.*

ಸಾಂಸ್ಕೃತಿಕ ಜೀವನದಲ್ಲಿ ಜನಸಮೂಹದ ಭಾಗವಹಿಸುವಿಕೆ, ಮತ್ತು ಅದಕ್ಕೆ ಅದರ ಕೊಡುಗೆಗೆ ಸಂಬಂಧಿಸಿದ ತನ್ನ ಶಿಫಾರಸಿನಲ್ಲಿ (1976) ಮತ್ತು ವೈಜ್ಞಾನಿಕ ಸಂಶೋಧಕರ ಸ್ಥಾನಮಾನಗಳ ಶಿಫಾರಸಿನಲ್ಲಿ (1974)ಮತ್ತು ಕೃತಿಸ್ವಾಮ್ಯದ ಅನೇಕ ಒಡಂಬಡಿಕೆಗಳಲ್ಲಿ ಯುನೆಸ್ಕೋ ಈ ಕಲಮಿಗೆ ಸಂಬಂಧಿಸಿದ ನಿರ್ದಿಷ್ಟ ನಿಯಮಾವಳಿಗಳನ್ನು ವಿಸ್ತಾರಗೊಳಿಸಿದೆ.

ಸಾಂಸ್ಕೃತಿಕ ಹಕ್ಕು, ತನ್ನದೇ ಸ್ವಂತ ಸಂಸ್ಕೃತಿಗೆ ಹಾಗೂ ಇನ್ನಿತರರ ಸಾಂಸ್ಕೃತಿಕ ಪರಂಪರೆಗೆ ಪ್ರವೇಶದ ಹಕ್ಕನ್ನು ಒಳಗೊಂಡಿದೆ. ನಾಟಕ, ಸಂಗೀತ, ಸಾಂಪ್ರದಾಯಿಕ ನೃತ್ಯ ಅಥವಾ ಜಾತ್ರೆಗಳು ಮುಂತಾದ ಜನಪ್ರಿಯ ಸಂಸ್ಕೃತಿಯೂ ಸೇರಿದಂತೆ ಅವುಗಳಲ್ಲಿ ಪಾಲ್ಗೊಳ್ಳುವಿಕೆ ಸಾಂಸ್ಕೃತಿಕ ಹಕ್ಕಿನ ಪ್ರಾಮುಖ್ಯವಾದ ಅಂಶ. ಸಾಂಸ್ಕೃತಿಕ ಹಕ್ಕು ವೈಜ್ಞಾನಿಕ ಮತ್ತು ತಾಂತ್ರಿಕ ಪ್ರಗತಿಯ ಅನುಕೂಲತೆಗಳ ಹಕ್ಕನ್ನು ಒಳಗೊಂಡಿದೆ. ವಿಶಾಲವಾದ ಅರ್ಥದಲ್ಲಿ ಅದು ಶಿಕ್ಷಣವನ್ನೂ ಒಳಗೊಂಡಿದೆ. ಸಾಂಸ್ಕೃತಿಕ ಹಕ್ಕುಗಳು ಇತರ ಬಗೆಯ ಮಾನವಹಕ್ಕುಗಳಂತೆ ಸಮರ್ಪಕವಾಗಿ ಕ್ರೋಢೀಕೃತಗೊಂಡಿಲ್ಲವೆಂಬುದನ್ನು ಮತ್ತು ಮಾನವಹಕ್ಕುಗಳ 'ಅನಭಿವೃದ್ಧಿ' ವಿಭಾಗವೆಂದು ಹಲವಾರು ಬಾರಿ ಹೆಸರಿಸಲ್ಪಟ್ಟಿವೆಯೆಂಬುದನ್ನು ಗಮನಿಸಿಕೊಳ್ಳಬೇಕಾಗಿದೆ.

**ಕಲಮು** *28.*

*ಪ್ರತಿಯೊಬ್ಬನೂ ಈ ಘೋಷಣೆಯಲ್ಲಿ ನಮೂದಿಸಿರುವ ಹಕ್ಕುಗಳು ಮತ್ತು ಸ್ವಾತಂತ್ರ್ಯಗಳನ್ನು ಪೂರ್ಣವಾಗಿ ಸಾಧಿಸಬಲ್ಲ ಸಾಮಾಜಿಕ ಮತ್ತು ಅಂತರರಾಷ್ಟ್ರೀಯ ವ್ಯವಸ್ಥೆಯ ಹಕ್ಕನ್ನು ಹೊಂದಿರುತ್ತಾನೆ.*

ಮನುಕುಲದ ಬಹುಭಾಗಕ್ಕೆ ಘನತೆ ಮತ್ತು ಕನಿಷ್ಠ ಯೋಗಕ್ಷೇಮದ ಜೀವನ ಹಾಗೂ ಅತ್ಯಂತ ಮೂಲಭೂತ ಅವಶ್ಯಕತೆಗಳು ನಿರಾಕರಿಸಲ್ಪಟ್ಟವೆ (ಕಲಮು 22ನ್ನೂ ನೋಡಿ). ಆ ಹಕ್ಕುಗಳು, ಸ್ವಾತಂತ್ರ್ಯಗಳನ್ನು ನಿಜಗೊಳಿಸಬಲ್ಲ ಪರಿಸ್ಥಿತಿಗಳೇ

ನಿರಾಕರಿಸಲ್ಪಟ್ಟಿರುವುದರಿಂದ, ಅವರ ಪಾಲಿಗೆ ಸಾಮಾಜಿಕ ನ್ಯಾಯವೆನ್ನುವುದೊಂದು ಮೃಗಮರೀಚಿಕೆ. ಅದೇ ಸಂದರ್ಭದಲ್ಲಿ ಜಗತ್ತಿನ ರಕ್ಷಣಾ ವೆಚ್ಚ ವಾರ್ಷಿಕ 767 ಬಿಲಿಯನ್ ಡಾಲರ್[89] ಎಂಬುದಾಗಿ ಅಂದಾಜು ಮಾಡಲಾಗಿದೆ. ಇಂಥಾ ಪರಿಸ್ಥಿತಿಯನ್ನು ಬದಲಾಯಿಸಬೇಕೇ, ಬೇಡವೇ ಎಂಬ ನ್ಯಾಯಬದ್ಧ ಪ್ರಶ್ನೆ ಉದ್ಭವಿಸುತ್ತದೆ.

### *ಸುಧಾರಣೆಗಳಿಗಿರುವ ಅವಕಾಶಗಳೇನು ?*

ಅಭಿವೃದ್ಧಿಗೆ ಮೀಸಲಾದ ಹಲವಾರು ದಶಕಗಳ ಅಂತರರಾಷ್ಟ್ರೀಯ ಕಾರ್ಯಕ್ರಮಗಳ ತದನಂತರವೂ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಸ್ತರಗಳೆರಡರಲ್ಲೂ, ಶ್ರೀಮಂತರು ಮತ್ತು ಬಡವರ ಮಧ್ಯದ ಕಂದಕ ಅಗಲವಾಗುತ್ತಲೇ ಮುಂದುವರಿದಿದೆ. ಇದು ಅಸ್ತಿತ್ವದಲ್ಲಿರುವ ನೀತಿ ಮತ್ತು ಸಾಂಸ್ಥಿಕ ವ್ಯವಸ್ಥೆಗಳು ವಿಶ್ವದ ಸಂಪನ್ಮೂಲಗಳ ತಪ್ಪು ಹಂಚಿಕೆಯನ್ನೂ ಇನ್ನಷ್ಟು ಉಲ್ಬಣಗೊಳಿಸಿವೆಯೆಂಬುದರ ಸೂಚನೆಯಾಗಿದೆ. ಆರ್ಥಿಕ ಬೆಳವಣಿಗೆ, ತನಗೆ ತಾನೇ ಒಂದು ಕೊನೆಯ ಗುರಿಯಾಗಬಾರದು, ಬದಲು ಮಾನವಿಕ ಆಯಾಮಗಳ ಹಾಗೂ ಮಾನವನ ಯೋಗಕ್ಷೇಮವನ್ನು ಆಧರಿಸಿದ ಅರ್ಥಪೂರ್ಣ ಅಭಿವೃದ್ಧಿಯತ್ತ ಒಂದು ಸಾಧನವಾಗಬೇಕು.

ಅಭಿವೃದ್ಧಿಶೀಲ ರಾಷ್ಟ್ರಗಳು ಆರ್ಥಿಕ ಪರಾವಲಂಬನೆಯಿಂದಾಗಿ ಉಸಿರುಗಟ್ಟಿರುವ ಭಾವನೆಗೊಳಗಾಗಿದ್ದು, ಅಸಮಾನತೆಗಳನ್ನು ಸರಿಪಡಿಸಲು ಅಂತರರಾಷ್ಟ್ರೀಯ ಆರ್ಥಿಕ ವ್ಯವಸ್ಥೆಯ ಹೊಸ ವಿನ್ಯಾಸವೊಂದರ ಹಾಗೂ ಹೊರಗಿನ ಸಾಲದ ಭಾರಕ್ಕೆ ಉಪಶಮನದ ಅಗತ್ಯವಿದೆಯೆಂಬುದನ್ನು ಗುರುತಿಸಿವೆ. ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳು, ಶಾಂತಿ, ಭದ್ರತೆ ಮಾನವತೆಯ ಬಗೆಗಿನ ತಮ್ಮ ದೀರ್ಘಕಾಲಿಕ ಹಿತಾಸಕ್ತಿಗಳು, ಒಂದು ರಾಜಕೀಯ ಇಚ್ಛಾಶಕ್ತಿಯ ಕ್ರಮದಿಂದ ಈಗಿರುವ ಅರ್ಥವ್ಯವಸ್ಥೆಗೆ ಬದಲಾವಣೆ ತರುವುದರಲ್ಲಡಗಿದೆಯೆಂಬುದನ್ನು ಮನಗಾಣುವುದ ರಲ್ಲಿ, ಆತಂಕಕ್ಕೆ ಒಳಗಾಗಿದ್ದು-ನಿಧಾನಗತಿಯಲ್ಲಿವೆ.

ವಿಶ್ವಸಂಸ್ಥೆಯ ಅಭಿವೃದ್ಧಿ ಹಕ್ಕಿನ ಘೋಷಣೆಯ ಮೂಲಕ (1986) ಇದು ಪರಾಧೀನಗೊಳಿಸಲಾಗದ ಮಾನವಹಕ್ಕೆಂದು[90] ಮಾನ್ಯ ಮಾಡಲಾಗಿದೆ.

ಮೇಲ್ಕಂಡ ಘೋಷಣೆಯಲ್ಲಿ ಪ್ರತಿಬಿಂಬಿಸಿರುವಂತೆ ಅಭಿವೃದ್ಧಿಯ ಹಕ್ಕನ್ನು ವಿಯೆನ್ನಾ ಘೋಷಣೆ ಮತ್ತು ಕ್ರಿಯಾ ಯೋಜನೆ (1993) ಪುನರ್ದೃಢೀಕರಿಸಿದೆ, ಮತ್ತು 'ರಾಷ್ಟ್ರೀಯ ಸ್ತರದಲ್ಲಿ ಪರಿಣಾಮಕಾರಿ ಅಭಿವೃದ್ಧಿ ನೀತಿಗಳಿಗೆ ಹಾಗೂ ಅಂತರರಾಷ್ಟ್ರೀಯ ಸ್ತರದಲ್ಲಿ, ಸಮಾನ ಆರ್ಥಿಕ ಸಂಬಂಧಗಳು ಹಾಗೂ ಅನುಕೂಲಕರ ಆರ್ಥಿಕ ವಾತಾವರಣಕ್ಕೆ' ಕರೆನೀಡಿದೆ.

ಸಾಮಾಜಿಕ ಅಭಿವೃದ್ಧಿಗಾಗಿ ನಡೆದ ವಿಶ್ವ ಶೃಂಗ ಸಭೆಯಲ್ಲಿ (ಕೋಪನ್‌ಹೇಗನ್ 6-12 ಮಾರ್ಚ್ 1995) ಈ ತೀರ್ಮಾನಗಳನ್ನು ದೃಢೀಕರಿಸಲಾಯಿತು ಮತ್ತು ವಿಸ್ತರಿಸಲಾಯಿತು.


ನಾನು ಮರೆತಿದ್ದೆ- ನಮಗಿನ್ನೂ ಬಗೆಹರಿಸಬೇಕಾದ ಸಮಸ್ಯೆ ಒಂದಿದೆ!

ವಿಶ್ವ ಶೃಂಗ ಸಭೆಯಲ್ಲಿ ಭಾಗಸ್ಥರು, ಎಲ್ಲ ಮಾನವಹಕ್ಕುಗಳ ಸಾರ್ವತ್ರಿಕತೆ, ಅವಿಭಾಜ್ಯತೆ ಮತ್ತು ಸಾಮಾಜಿಕ ಅಭಿವೃದ್ಧಿಯನ್ನು ಸಾಧಿಸಲು ಜನರನ್ನು ಸಮರ್ಥರನ್ನಾಗಿಸುವ ಆರ್ಥಿಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಶಾಸನಾತ್ಮಕ ವಾತಾವರಣವನ್ನು ನಿರ್ಮಾಣ ಮಾಡಲು ತಮ್ಮನ್ನು ಬದ್ಧಗೊಳಿಸಿಕೊಂಡವು. ನಿರ್ಣಾಯಕ ರಾಷ್ಟ್ರೀಯ ಕ್ರಮಗಳು ಮತ್ತು ಅಂತರರಾಷ್ಟ್ರೀಯ ಸಹಕಾರದ ಮೂಲಕ, ವಿಶ್ವದಾದ್ಯಂತ ಬಡತನವನ್ನು ನಿರ್ಮೂಲನ ಮಾಡುವ ಗುರಿಗೂ ಸಹ ತಮ್ಮನ್ನು ಬದ್ಧಗೊಳಿಸಿಕೊಂಡಿವೆ. ಸ್ಥಿರವಾದ, ಸುರಕ್ಷಿತವಾದ ಮತ್ತು ನ್ಯಾಯಯುತವಾದ ಮತ್ತು ಎಲ್ಲ ಮಾನವಹಕ್ಕುಗಳ ಸಂವರ್ಧನೆ ಮತ್ತು ಸಂರಕ್ಷಣೆಯ ತಳಹದಿಯ ಮೇಲೆ ನಿಂತ, ಸಹಿಷ್ಣು, ವೈವಿಧ್ಯಗಳ ಬಗ್ಗೆ ಗೌರವವಿರುವ, ಸಮಾನಾವಕಾಶಗಳಿರುವ, ಐಕ್ಯತೆಯಿರುವ, ಭದ್ರವಾದ ಮತ್ತು ಪ್ರತಿಕೂಲ ಪರಿಸ್ಥಿತಿಯಲ್ಲಿರುವ ಹಾಗೂ ದುರ್ಬಲ ಗುಂಪುಗಳ ಜನರೂ ಸೇರಿದಂತೆ ಎಲ್ಲಾ ಜನರ ಪಾಲ್ಗೊಳ್ಳುವಿಕೆಯ ಸಮಾಜ ವ್ಯವಸ್ಥೆಯನ್ನು ಘೋಷಿಸಿ, ಸಾಮಾಜಿಕ ಸಮಗ್ರತೆಯನ್ನು ಮತ್ತು ಮಾನವಘನತೆಗೆ ಪೂರ್ಣ ಗೌರವವನ್ನೂ, ಹಾಗೂ ಹೆಣ್ಣು-ಗಂಡಿನ ಮಧ್ಯೆ ಸಮಾನತೆಯ ಸಾಧನೆಯನ್ನು ಉತ್ತೇಜಿಸುವ ತಮ್ಮ ಉದ್ದಿಶ್ಯವನ್ನೂ ಅವು ದೃಢಪಡಿಸಿವೆ.

ಸಾಮಾಜಿಕ ಸಮಗ್ರತೆಯ ಎಲ್ಲ ಅಂಶಗಳ ಬಗ್ಗೆ ಜನರ ತಿಳಿವಳಿಕೆ ಮತ್ತು ಅರಿವನ್ನು ಹೆಚ್ಚಿಸಲು, ಸ್ಥಳೀಯ ಸಮುದಾಯಗಳು ಹಾಗೂ ಸಂಘಟನೆಗಳನ್ನು, ಶಿಕ್ಷಣ ವ್ಯವಸ್ಥೆಗಳನ್ನು, ಸಮೂಹ ಮಾಧ್ಯಮಗಳನ್ನು ಪ್ರೋತ್ಸಾಹಿಸುವುದರ ಮೂಲಕ ಪ್ರಜಾಪ್ರಭುತ್ವ, ಶಾಸನಾತ್ಮಕ ಆಡಳಿತ, ಬಹುತ್ವ ಮತ್ತು ವೈವಿಧ್ಯ, ಸಹಿಷ್ಣುತೆ, ಬಾಧ್ಯತೆ, ಅಹಿಂಸೆ ಮತ್ತು ಐಕ್ಯತೆಗಳಿಗೆ ಗೌರವವನ್ನು ಉತ್ತೇಜಿಸುವ ಅಗತ್ಯಕ್ಕೆ ವಿಶ್ವ ಶೃಂಗ ಸಭೆ ಒತ್ತು ನೀಡಿದೆ.

ಹಕ್ಕುಗಳ ವಿಶ್ವವ್ಯಾಪಿ ಘೋಷಣೆ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ಅಂತರರಾಷ್ಟ್ರೀಯ ಒಡಂಬಡಿಕೆ, ಶಿಕ್ಷಣ, ಆಹಾರ, ವಸತಿ, ಉದ್ಯೋಗ, ಆರೋಗ್ಯ ಮಾಹಿತಿಗಳಿಗೆ ಸಂಬಂಧಿಸಿದವೂ ಒಳಗೊಂಡಂತೆ, ಅಭಿವೃದ್ಧಿಯ ಹಕ್ಕಿನ ಘೋಷಣೆಗಳಲ್ಲಿ ನಮೂದಾಗಿರುವ ಹಕ್ಕುಗಳನ್ನು ನಿಜಗೊಳಿಸಲು ಉತ್ತೇಜನ ಮತ್ತು ಪ್ರಯತ್ನಗಳನ್ನು ಖಾತರಿಗೊಳಿಸುವ ತಮ್ಮ ಬಾಧ್ಯತೆಗಳನ್ನು ಪುನರ್ದೃಢೀಕರಿಸುವಂತೆ ಮತ್ತು ನಿರ್ದಿಷ್ಟವಾಗಿ ದಾರಿದ್ರ್ಯದಲ್ಲಿರುವ ಜನರಿಗೆ ನೆರವು ನೀಡುವಂತೆ ವಿಶ್ವ ಶೃಂಗ ಸಭೆ ಎಲ್ಲ ರಾಷ್ಟ್ರಗಳಿಗೆ ಕರೆ ನೀಡಿದೆ.

**ಕಲಮು *29.***

*1.* ಪ್ರತಿಯೊಬ್ಬನಿಗೂ, ಯಾವುದರ ಮೂಲಕವಾಗಿ ಮಾತ್ರ ತನ್ನ ವ್ಯಕ್ತಿತ್ವದ ಮುಕ್ತ ಮತ್ತು ಪೂರ್ಣವಿಕಸನ ಸಾಧ್ಯವಾಗುವುದೋ ಆ ಸಮುದಾಯದ ಬಗ್ಗೆ ಕರ್ತವ್ಯಗಳನ್ನು ಅವನು ಹೊಂದಿರುತ್ತಾನೆ.




*2.* ಪ್ರತಿಯೊಬ್ಬನೂ ತನ್ನ ಹಕ್ಕುಗಳು ಮತ್ತು ಸ್ವಾತಂತ್ರ್ಯಗಳನ್ನು ಚಲಾವಣೆ ಮಾಡುವುದರಲ್ಲಿ ಕೇವಲ ಇತರರ ಹಕ್ಕುಗಳು ಮತ್ತು ಸ್ವಾತಂತ್ರ್ಯಗಳ ಬಗ್ಗೆ ಆಗತ್ಯವಿರುವ ಗೌರವ ಮತ್ತು ಮಾನ್ಯತೆಯನ್ನು ಭದ್ರಪಡಿಸುವ ಉದ್ದಿಶ್ಯಕ್ಕಾಗಿ ಮತ್ತು ನೈತಿಕತೆ, ಸಾರ್ವಜನಿಕ ಸುವ್ಯವಸ್ಥೆ, ಪ್ರಜಾಸತ್ತಾತ್ಮಕ ಸಮಾಜದ ಸಾರ್ವತ್ರಿಕ ಯೋಗಕ್ಷೇಮದ ನ್ಯಾಯಯುತ ಆಗತ್ಯಗಳ ಪೂರೈಕೆಗಾಗಿ ಶಾಸನಾತ್ಮಕವಾಗಿ ನಿರ್ಧಾರಿತ ನಿರ್ಬಂಧಗಳಿಗೆ ಮಾತ್ರ ಒಳಪಡತಕ್ಕದ್ದು.

*3.* ವಿಶ್ವಸಂಸ್ಥೆಯ ಉದ್ದಿಶ್ಯಗಳು ಮತ್ತು ತತ್ವಗಳ ವಿರುದ್ಧವಾಗಿ, ಈ ಹಕ್ಕುಗಳನ್ನು ಮತ್ತು ಸ್ವಾತಂತ್ರ್ಯಗಳನ್ನು ಯಾವುದೇ ಸಂದರ್ಭದಲ್ಲೂ ಚಲಾಯಿಸತಕ್ಕದ್ದಲ್ಲ.

## ಅತಿವಂಚಿತ ಪ್ರದೇಶಗಳಲ್ಲಿನ ಆರ್ಥಿಕ ಮತ್ತು ಸಾಮಾಜಿಕ ಹಕ್ಕುಗಳ ಉತ್ಕರ್ಷದ ಮೇಲೆ ಕೇಂದ್ರೀಕರಿಸುವ ಉದ್ದಿಶ್ಯಕ್ಕಾಗಿ ರಾಜಕೀಯ ಅಭಿವ್ಯಕ್ತಿ ಮತ್ತು ಸಂಘಟನೆಯ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವುದು ನ್ಯಾಯಬದ್ಧವೆ?

ವಿಶ್ವವ್ಯಾಪಿ ಘೋಷಣೆಯಲ್ಲಿ ನಮೂದಿಸಿರುವ ಮಾನವಹಕ್ಕುಗಳ ವಿಚಾರದಲ್ಲಿ ನಮಗೆ ಆದ್ಯತೆಗಳ ವೈರುಧ್ಯಗಳಿವೆಯೆಂದು ಅನೇಕ ಸರ್ಕಾರಗಳು ವಾದಿಸುತ್ತವೆ. ಇದಕ್ಕೆ ಸರಳವಾದ ಉತ್ತರವಿಲ್ಲ. ಹಕ್ಕುಗಳ ಮಧ್ಯೆ ನೇರ ಕಾರ್ಯಕಾರಣ ಸಂಬಂಧವನ್ನು ಸ್ಥಾಪಿಸುವುದು ಸಾಧ್ಯವಿಲ್ಲದಿದ್ದರೂ ನಾಗರಿಕ ಮತ್ತು ರಾಜಕೀಯ ಹಕ್ಕುಗಳು ಮತ್ತು ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳು ಅಂತರಾವಲಂಬಿಯಾಗಿವೆ. ಯಾವುದೇ ಬಗೆಯ ಸಾಮಾಜಿಕ ನ್ಯಾಯಕ್ಕೆ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ಸಾಧನೆ ಅತ್ಯಗತ್ಯ.

ಪ್ರತಿಯೊಬ್ಬನೂ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳನ್ನು, ಅದರಂತೆಯೇ ನಾಗರಿಕ ಮತ್ತು ರಾಜಕೀಯ ಹಕ್ಕುಗಳನ್ನು ಅನುಭವಿಸಬಲ್ಲ ಪರಿಸ್ಥಿತಿಯನ್ನು ನಿರ್ಮಾಣ ಮಾಡಿದಾಗ ಮಾತ್ರ ಎಲ್ಲರನ್ನೂ ಭಯ ಮತ್ತು ಅವಶ್ಯಕತೆಗಳಿಂದ ಬಿಡುಗಡೆಗೊಳಿಸುವುದನ್ನು ಸಾಧ್ಯವಾಗಿಸಬಹುದೆಂಬುದನ್ನು ವಿಶ್ವವ್ಯಾಪಿ ಘೋಷಣೆ ದೃಢಪಡಿಸಿದೆ.

ಎಲ್ಲಾ ಮಾನವಹಕ್ಕುಗಳು ಮತ್ತು ಮೂಲಭೂತ ಸ್ವಾತಂತ್ರ್ಯಗಳ ಸಾರ್ವತ್ರಿಕತೆ, ಅವಿಭಾಜ್ಯತೆ, ಅಂತರಾವಲಂಬನೆ, ಅಂತಃಸಂಬಂಧವನ್ನು ವಿಯೆನ್ನಾ, ಘೋಷಣೆ ಮತ್ತು ಕ್ರಿಯಾ ಯೋಜನೆ (1993) ಪುನರ್ದೃಢೀಕರಿಸಿದೆ. ಮುಂದುವರಿದು ಅದು ಹೀಗೆಂದಿದೆ: "ಅಂತರರಾಷ್ಟ್ರೀಯ ಸಮುದಾಯವು ಮಾನವಹಕ್ಕುಗಳನ್ನು ವಿಶ್ವವ್ಯಾಪಕ ದೃಷ್ಟಿಯಲ್ಲಿ ಮತ್ತು ನ್ಯಾಯಬದ್ಧ ಮತ್ತು ಸಮಾನವಾಗಿ, ಸಮಾನ ನೆಲೆಯಲ್ಲಿ ಮತ್ತು ಸಮಾನ ಪ್ರಾಮುಖ್ಯತೆಯಿಂದ ನೋಡಬೇಕು."

ಈ ಮಾನ್ಯತೆ, ಒಂದು ಅಥವಾ ಇನ್ನೊಂದು ವರ್ಗದ ಹಕ್ಕುಗಳ ಆದ್ಯತೆಯ ಬಗ್ಗೆ ನಡೆದಿರುವ ದೀರ್ಘ ಮತ್ತು ನಿಷ್ಫಲ ಚರ್ಚೆಗಳನ್ನು ಕೊನೆಗಾಣಿಸಿದೆ. ಮತ್ತು ಮಾನವನ ಘನತೆ ಮತ್ತು ಸ್ವಾತಂತ್ರ್ಯವನ್ನು ಖಾತರಿಪಡಿಸಲು ಎಲ್ಲ ಮಾನವಹಕ್ಕುಗಳು ಸಮಾನ ಪ್ರಾಮುಖ್ಯತೆಯನ್ನು ಹೊಂದಿವೆಯೆಂದು ಇದರ ಅರ್ಥವಾಗಿದೆ.

## ಒಬ್ಬ ವ್ಯಕ್ತಿಗೆ ಯಾವ ಬಗೆಯ ಕರ್ತವ್ಯಗಳಿವೆ?

ಒಂದು ಸಮುದಾಯದ ಮಧ್ಯದಲ್ಲಿ ಮಾತ್ರ ಒಬ್ಬ ವ್ಯಕ್ತಿ ಅವನ ಅಥವಾ ಅವಳ ವ್ಯಕ್ತಿತ್ವವನ್ನು ಪೂರ್ಣ ಹಾಗೂ ಮುಕ್ತವಾಗಿ ವಿಕಸನಗೊಳಿಸಿಕೊಳ್ಳುವುದರ ಕಾರಣದಿಂದಾಗಿ, ಸಮುದಾಯದಲ್ಲಿರುವ ಎಲ್ಲ ಜನರು ಸಮುದಾಯದ ಒಳಗೆ ಈ ಹಕ್ಕುಗಳ ಮತ್ತು ಸ್ವಾತಂತ್ರ್ಯಗಳ ಪೂರ್ಣಾನುಭವಕ್ಕೆ ಅಗತ್ಯವಿರುವ ಪರಿಸ್ಥಿತಿಯನ್ನು

